# ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ.
ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)



ಸಂಶೋಧಕ
ಶಿವಪ್ಪ

ಮಾರ್ಗದರ್ಶಕರು
ಡಾ. ಎಸ್.ಎಸ್. ಅಂಗಡಿ
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೪

# ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ.
ಪದವಿಗಾಗಿ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)



ಸಂಶೋಧಕ
**ಶಿವಪ್ಪ**

ಮಾರ್ಗದರ್ಶಕರು
**ಡಾ. ಎಸ್.ಎಸ್. ಅಂಗಡಿ**
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶಿವಪ್ಪ** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

(ಡಾ. ಎಸ್.ಎಸ್. ಅಂಗಡಿ)
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ದಿನಾಂಕ : 8-12-2014
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಎಸ್.ಎಸ್. ಅಂಗಡಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕ


(ಶಿವಪ್ಪ)
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**


ದಿನಾಂಕ : 08-12-2014
ಸ್ಥಳ : ವಿದ್ಯಾರಣ್ಯ

# ಪರಿವಿಡಿ

**ಅನುಬಂಧಗಳು**

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪ

## ಪ್ರಸ್ತಾವನೆ

ನಮ್ಮದು ಬಹು ಸಂಸ್ಕೃತಿಗಳ ನಾಡು. ನಿಸರ್ಗ ಮತ್ತು ಧರ್ಮಕ್ಕೆ ಎರವಾಗದಂತೆ ಬದುಕು ಕಟ್ಟಿಕೊಂಡ ಸಮುದಾಯಗಳು ಕಾಲುದಾರಿಯ ಹೆಜ್ಜೆ ಪಯಣದಲ್ಲಿ ಗೆಜ್ಜೆ ಕಟ್ಟಿಕೊಂಡು ಬಾಳಿದವು. ಬೆವರ ಗಳಿಕೆಗೆ ಬೆಲೆಕೊಟ್ಟು ಬದುಕು ನೀಗಿಸಿದವು. ಇಂಥ ಸಮುದಾಯಗಳು ಒಂದಲ್ಲ ಎರಡರಲ್ಲ ನೂರಾರು. ಇವು ಒಟ್ಟೊಟ್ಟಿಗೆ ಬಾಳಿದರೂ ಒಂದಕ್ಕೆ ಒಂದು ಭಿನ್ನತೆಯ ಅಸ್ಮಿತೆಯಲ್ಲಿ ಸಂಸ್ಕೃತಿಯ ಅನನ್ಯತೆಯನ್ನು ಉಸಿರಾಗಿಸಿದವು. ಶ್ರಮದ ಗಳಿಕೆಯ ಜೊತೆ ಜೊತೆಗೆ ಬೆವರ ಪದ ಹಾಡಿದವು. ಆ ಭಿನ್ನತೆಗೆ ಕಾರಣ ನೆಲಮೂಲದ ಅನುಭವ.

ಜನಪದ ಅಧ್ಯಯನ ಇಂದು ವಿಶ್ವವ್ಯಾಪಿಯಾಗಿ ನಡೆದಿದೆ. ಇದು ಕೇವಲ ಕಥೆ, ಗಾದೆ, ಹಾಡು, ಒಗಟು, ಒಡಪು, ಲಾವಣಿ ಮುಂತಾದ ಸಾಹಿತ್ಯ ಪ್ರಕಾರಗಳಿಗಷ್ಟೇ ಸೀಮಿತವಾಗಿ ಉಳಿಯದೆ ಸಮುದಾಯಗಳ ವಿವರ, ಆಚರಣೆ, ಸಂಪ್ರದಾಯ ಮುಂತಾದವುಗಳ ಕುರಿತ ಅಧ್ಯಯನವಾಗುತ್ತಿದೆ. ಇಂದು ಅಂತರ್‌ಶಿಸ್ತೀಯ ಅಧ್ಯಯನವು ಅಧ್ಯಯನದ ಪ್ರಾಮುಖ್ಯತೆಯಿಂದಾಗಿ ಹಲವರನ್ನು ಆಕರ್ಷಿಸುತ್ತಲಿದೆ. ಮೊದಲು ಕನ್ನಡದಲ್ಲಿ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳ ಸಂಗ್ರಹ, ಸಂಪಾದನೆ, ವಿಶ್ಲೇಷಣೆ, ವ್ಯಾಖ್ಯಾನ ನಡೆಯುತ್ತಿತ್ತು. ಈಗ ಇದರ ಅಧ್ಯಯನ ಇನ್ನೂ ಅಚ್ಚುಕಟ್ಟಾಗಿ, ವೈಜ್ಞಾನಿಕವಾಗಿ ನಡೆಯುತ್ತಲಿದೆ. ಆಯಾ ಪ್ರದೇಶಗಳಲ್ಲಿನ ನಂಬಿಕೆ, ಆಚರಣೆ ಸಂಪ್ರದಾಯಗಳನ್ನು ಸಂಗ್ರಹಿಸುವ, ವಿಶ್ಲೇಷಿಸುವ ಪ್ರಯತ್ನಗಳು ಅಲ್ಲಲ್ಲಿ ನಡೆಯುತ್ತಿವೆ. ಎಂದೋ ರೂಪಿತವಾದ ನಂಬಿಕೆ, ಆಚರಣೆ, ಪದ್ಧತಿ ಎಲ್ಲವೂ ಸಾಮಾಜಿಕ, ರಾಜಕೀಯ, ಧಾರ್ಮಿಕ, ನೈಸರ್ಗಿಕ ವ್ಯತ್ಯಾಸಗಳಾದಾಗ ಅಗತ್ಯಕ್ಕೆ ತಕ್ಕಂತೆ ಬದಲಾಗುತ್ತಲೇ ಹೊಸ ಹೊಸ ಆಚಾರ-ವಿಚಾರ, ರೂಢಿ, ಪದ್ಧತಿ, ಸಾಹಿತ್ಯಕ ಕಲೆ ರೂಪುಗೊಂಡವು. ಸಾಹಿತ್ಯದಲ್ಲಾಗಲಿ, ಜನರ ಪದ್ಧತಿಯಲ್ಲಾಗಲಿ ಒಂದೇ ದಿನದಲ್ಲಿ ಕ್ರಾಂತಿಯಾದಂತೆ ವ್ಯತ್ಯಾಸಗಳಾಗುವುದಿಲ್ಲ. ಆದರೆ ಅವುಗಳು ಒಂದು ಕಾಲ ಘಟ್ಟದಲ್ಲಿ ಎದ್ದು ಕಾಣುವಂತೆ ಕಂಡುಬಂದಾಗ ಎಲ್ಲರ ಗಮನಕ್ಕೆ ಬರುವುದು. ಕಾರಣ ಬದಲಾದ ಸಂದರ್ಭಕ್ಕನುಗುಣವಾಗಿ ಹೊಂದಿಕೊಳ್ಳುವ ಗುಣ ಅವಕ್ಕಿವೆ. ಈ ಗುಣದಿಂದಲೇ ತಲೆತಲಾಂತರದಿಂದ ಅಲಿಖಿತ ರೂಪದಲ್ಲಿದ್ದರೂ ಮುಂದುವರಿದುಕೊಂಡು ಬರುತ್ತಿರುವುದು. ಜನಪದ ಸಂಪ್ರದಾಯ, ಆಚರಣೆ, ವಿಧಿವಿಧಾನ, ನಿಷೇಧಗಳೆಲ್ಲವೂ ಈ ರೀತಿ ಜೀವನದಲ್ಲಿ ಅನಾಯಾಸವಾಗಿ ಹೊಂದಿಕೊಂಡರೆ, ಜನಪದ ಸಾಹಿತ್ಯ ಮಾತ್ರ ಮುಂದುವರಿಯಲು ನಿರಾಕರಿಸುತ್ತದೆ ಅಥವಾ ಸಮಾಜವೇ ಅದನ್ನು

ಮೂಲೆಗುಂಪು ಮಾಡುತ್ತದೆ. ಕಾರಣ ಬದಲಾದ ಸಮಾಜದ ತಂತ್ರಜ್ಞಾನಗಳು ಒಂದೆಡೆಯಾದರೆ, ವಿಭಿನ್ನವಾದ ಜ್ಞಾನ, ಇತರೆ ಸಂಸ್ಕೃತಿಗಳ ಪ್ರಭಾವ ಮತ್ತೊಂದೆಡೆ. ಹಿಂದಿನ ಜನರಿಗೆ ಬಾಯ್ದೆರೆಯ ಸಾಹಿತ್ಯಗಳೇ ಒಬ್ಬರನ್ನೊಬ್ಬರು ಬೆಸೆಯಲು, ತಿಳಿಯಲು ಸಂಪರ್ಕ ಸಾಧನಗಳಾಗಿದ್ದವು. ಹಾಗಾಗಿ ಜೀವನದ ನೈಜತೆ, ನೇರನುಡಿಗಳೆಲ್ಲ ಆ ಸಾಹಿತ್ಯದಲ್ಲಿದ್ದವು. ಪ್ರಸ್ತುತ ಕಾಲಮಾನದಲ್ಲಿ ಅಲಿಖಿತ ಸಾಹಿತ್ಯ ಬೇಕಾಗಿಲ್ಲ. ಅವುಗಳನ್ನು ಮೀರಿಸುವ ಅಸಂಖ್ಯಾತ ಸಾಧನಗಳಿವೆ. ಆದರೆ ನೈಜತೆ, ಮಾಯವಾಗಿ ಕಪಟತೆ, ನಾಟಕೀಯತೆ ಮತ್ತು ಅಮಾನವೀಯತೆಗಳೆಲ್ಲವೂ ವಿಜೃಂಭಿಸುತ್ತಿವೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಗೀತ ಸಾಹಿತ್ಯವನ್ನು ಪರಿಶೀಲಿಸುವ, ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ. ಜನಪದ ಸಾಹಿತ್ಯದ ಕಥೆ, ಗೀತೆ, ಒಗಟು, ಗಾದೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಜನಪದರ ಸುಖ, ದುಃಖ, ಹಾಸ್ಯ ವಿಡಂಬನೆ, ಈರ್ಷೆ, ಮತ್ಸರ ಮುಂತಾದವುಗಳು ನೇರವಾಗಿ ವ್ಯಕ್ತವಾಗಿರುತ್ತವೆ. ಜನಪದ ಸಾಹಿತ್ಯದ ಪ್ರಮುಖ ಗೀತ ಪ್ರಕಾರದಲ್ಲಿ ಗಂಡಸರ ಹಾಡು, ಹೆಂಗಸರ ಹಾಡು, ಮಕ್ಕಳ ಹಾಡುಗಳೆಂದು ವಿಂಗಡಿಸಿಕೊಳ್ಳಬಹುದಾಗಿದೆ. ಸಾಂಸ್ಕೃತಿಕವಾಗಿ ಅವುಗಳ ವಿಶ್ಲೇಷಣೆ ಮಾಡಿ ಅಧ್ಯಯನದ ಮುಖೇನ ಪ್ರಾಮುಖ್ಯತೆಯನ್ನು ತಿಳಿಯಬೇಕಾಗಿದೆ.

ಒಂದು ಪ್ರದೇಶದ ಜನಪದ ಗೀತ ಸಾಹಿತ್ಯವನ್ನು ಪ್ರತ್ಯೇಕವಾಗಿಟ್ಟುಕೊಂಡು ಅಧ್ಯಯನ ಮಾಡಿದಾಗ ಆ ಪ್ರದೇಶದ ಭಿನ್ನತೆ ವೈಶಿಷ್ಟ್ಯತೆ ಮತ್ತು ಅಸ್ಮಿತೆಗಳನ್ನು ತಿಳಿಯಲು ಅನುಕೂಲವಾಗುತ್ತದೆ ಮತ್ತು ಅದಕ್ಕೆ ಕಾರಣಗಳನ್ನು ಹೆಚ್ಚು ಸೂಕ್ಷ್ಮವಾಗಿ ಗುರುತಿಸಲು ಸಹ ಸಾಧ್ಯವಾಗುತ್ತದೆ. ಕನ್ನಡ ಜನಪದ ಗೀತೆಗಳ ಪರಂಪರೆಯಲ್ಲಿ ಹೆಚ್ಚು ಚರ್ಚೆಗೊಳಗಾಗದ ಜಿಲ್ಲೆಯ ಪ್ರಮುಖ ಕವಿಗಳನ್ನು ವಿವರವಾಗಿ ಚರ್ಚಿಸಲು ಸಾಧ್ಯವಾಗುತ್ತದೆ ಎಂಬ ಉದ್ದೇಶದಿಂದ "ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ" ಎಂಬ ಶೀರ್ಷಿಕೆಯ ಸಂಶೋಧನ ವಿಷಯವನ್ನಾಗಿ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಉದ್ದೇಶ**

ಕರ್ನಾಟಕದ ಕೊಪ್ಪಳ ಜಿಲ್ಲೆಯು ಜನಪದ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಈ ಪ್ರದೇಶದ ಜನಪದ ಸಾಹಿತ್ಯವನ್ನು ಒಳಹೊಕ್ಕು ಪರಿಶೀಲಿಸಿದಾಗ ಆ ಪ್ರದೇಶದ ಸಂಸ್ಕೃತಿಯ ಸ್ವರೂಪ ಮತ್ತು ಇತರೆ ಅನೇಕ ಸಂಗತಿಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಗೀತ ಸಾಹಿತ್ಯದಿಂದ ಈ ಪ್ರದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ, ಐತಿಹಾಸಿಕ, ಸಾಂಸ್ಕೃತಿಕ ಸಂಗತಿಗಳನ್ನು ತಿಳಿಯಲು ಸಾಧ್ಯವಿದೆ. ಈ ಹಿನ್ನೆಲೆಯಲ್ಲಿ ಈ ಪ್ರದೇಶದಲ್ಲಿನ ಅನೇಕ ಜನಪದ ಗೀತೆಗಳನ್ನು ತೌಲನಿಕವಾಗಿ, ವಿಮರ್ಶಾತ್ಮಕವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಜನಪದ ಕಲೆ ಮಾನವನ ಆಂತರಿಕ ಮತ್ತು ಬಾಹ್ಯ ಬದುಕಿನ ರೀತಿ-ನೀತಿಗಳನ್ನು ನಿರ್ಧರಿಸುವುದರೊಂದಿಗೆ, ಅವನು ಸುಸಂಸ್ಕೃತನಾಗಿ ಜೀವನ ನಡೆಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಹಾಗಾಗಿ ಯಾವುದೇ ಪ್ರದೇಶದ ಸಾಂಸ್ಕೃತಿಕ ಬದುಕಿನ ಹಿರಿಮೆ, ಗರಿಮೆಗಳನ್ನು ನಿರ್ಧರಿಸುವಲ್ಲಿ ಜನಪದ ಕಲೆಗಳು ಮಹತ್ವದ ಸ್ಥಾನ ಪಡೆದುಕೊಂಡಿವೆ. ಭಾರತ ದೇಶವು ವಿವಿಧ ಸಾಹಿತ್ಯ ರೀತಿಯ ಕಲಾ ಪ್ರಕಾರಗಳಿಂದಾಗಿ ವಿಶ್ವದಲ್ಲಿ ಪ್ರಖ್ಯಾತಿ ಪಡೆದುಕೊಂಡಿದೆ. ದೇಶದ ಪ್ರತಿಯೊಂದು ರಾಜ್ಯಗಳು ವಿಶೇಷವಾದ ಕಲಾ ಪ್ರಕಾರಗಳನ್ನು ಒಳಗೊಂಡಿವೆ. ನಾಡಿನ ಸಂಸ್ಕೃತಿಯ ಭವ್ಯತೆಗೆ

ಶ್ರೀಮಂತ ಕೊಡುಗೆ ನೀಡಿದೆ. ಇದಲ್ಲದೆ ಆಯಾ ರಾಜ್ಯಗಳಲ್ಲಿರುವ ಜಿಲ್ಲೆಗಳು ಮತ್ತು ತಾಲೂಕುಗಳು ಸಹ ವಿಶಿಷ್ಟವಾದ ಪ್ರಾದೇಶಿಕ ಕಲೆಗಳನ್ನು ಒಳಗೊಂಡಿದ್ದು, ನಾಡಿನ ಸಂಸ್ಕೃತಿಯ ಜೀವನೆಲೆಯಾಗಿವೆ. ಇದಕ್ಕೆ ಭಾರತದ ರಾಜ್ಯ ಕರ್ನಾಟಕವೂ ಸಹ ಹೊರತಾಗಿಲ್ಲ. ಅದು ಸಾಂಸ್ಕೃತಿಕವಾಗಿ ಕಲಾ ವೈಭವದಿಂದ ಖ್ಯಾತಿಯನ್ನು ಗಳಿಸಿದೆ.

ಈ ನಾಡಿನಲ್ಲಿ ಆಳಿಹೋದ ರಾಜ–ಮಹಾರಾಜರು, ಸಾಮಂತರು, ಸಂಸ್ಥಾನಿಕರು, ಸ್ಥಳೀಯ ನಾಯಕರು, ಊರಿನ ಜಹಗೀರದಾರರು, ದೇಸಾಯಿಗಳು, ಗೌಡರು, ಅಧಿಕಾರಿಗಳು, ಶ್ರೀಮಂತ ವ್ಯಕ್ತಿಗಳು, ಮಠ–ಮಾನ್ಯಗಳು, ದೇವಾಲಯಗಳು, ಚರ್ಚು–ಮಸೀದಿಗಳು, ಧರ್ಮಾಧಿಕಾರಿಗಳು ಮತ್ತು ಮಠಾಧಿಪತಿಗಳು ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಇವರೆಲ್ಲರ ಅನನ್ಯವಾದ ಕೊಡುಗೆಗಳಿಂದ ಕರ್ನಾಟಕ ರಾಜ್ಯದ ಪ್ರತಿಯೊಂದು ಜಿಲ್ಲೆ ಮತ್ತು ತಾಲೂಕುಗಳು ಕಲಾ ಶ್ರೀಮಂತಿಕೆಯಿಂದ ತಮ್ಮನ್ನು ಗುರುತಿಸಿಕೊಂಡಿವೆ. ಒಂದು ನಾಡಿನ ಸಮಗ್ರ ಜನಪದ ಅಧ್ಯಯನಕ್ಕೆ ತೊಡಗಿದಾಗ ಆ ಕಲಾ ಪ್ರಕಾರಗಳನ್ನು ಪ್ರಾದೇಶಿಕವಾಗಿ ವಿಂಗಡಿಸಿ, ವಿಶ್ಲೇಷಣೆ ಮಾಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯನ್ನು ಮುಖ್ಯವಾಗಿಟ್ಟುಕೊಂಡು ಜಿಲ್ಲೆಯ ವ್ಯಾಪ್ತಿಯಲ್ಲಿ ಬೆಳೆದುಬಂದಿರುವ ವಿವಿಧ ರೀತಿಯ ಜನಪದ ಕಲಾಪ್ರಕಾರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡುವ ಉದ್ದೇಶ ಪ್ರಸ್ತುತ ಅಧ್ಯಯನದ್ದು.

**ಅಧ್ಯಯನ ವಿಧಾನ**

ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದೆ. ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಸಂಗ್ರಹ ಮಾಡುವ ಮೂಲಕ ಕ್ರೋಢೀಕರಿಸಲಾಗಿದೆ. ಕೆಲವೊಂದು ಸಾಂಸ್ಕೃತಿಕ ವಿಶೇಷ ದಿನಗಳ ಜಾತ್ರೆ ಹಾಗೂ ಉತ್ಸವಗಳಲ್ಲಿ ಭಾಗವಹಿಸುವುದರೊಂದಿಗೆ ವಿವಿಧ ಸಂದರ್ಭಗಳಲ್ಲಿನ ಜನಪದ ಗೀತೆಗಳನ್ನು ಕಲೆಹಾಕಲಾಗಿದೆ. ಒಟ್ಟಾರೆ ಕ್ಷೇತ್ರಕಾರ್ಯವು ಈ ಅಧ್ಯಯನಕ್ಕೆ ಪ್ರಧಾನವಾದ ಮಾಹಿತಿಗಳನ್ನು ಒದಗಿಸಿದೆ. ಹೀಗಾಗಿ ಇದೊಂದು ಕ್ಷೇತ್ರಕಾರ್ಯಾಧಾರಿತ ಅಧ್ಯಯನ ವಾಗಿದೆ.

ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಕಟಿತ, ಅಪ್ರಕಟಿತ ಎಂ.ಫಿಲ್ ಸಂಪ್ರಬಂಧಗಳು, ಪಿಎಚ್.ಡಿ. ಮಹಾಪ್ರಬಂಧಗಳು, ನಿಘಂಟುಗಳು, ವಿಶ್ವಕೋಶ, ವಿಶೇಷ ಸಂಚಿಕೆಗಳು, ನಿಯತಕಾಲಿಕೆಗಳು ಮತ್ತು ಅಂತರ್ಜಾಲದ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯವನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನಕ್ಕೆ ಕೊಪ್ಪಳ ಜಿಲ್ಲೆಯ ಕೊಪ್ಪಳ, ಯಲಬುರ್ಗಾ, ಕುಷ್ಟಗಿ ಮತ್ತು ಗಂಗಾವತಿ, ತಾಲೂಕುಗಳನ್ನು ಒಳಗೊಂಡ ಇಡಿ ಜಿಲ್ಲೆಯನ್ನು ವ್ಯಾಪ್ತಿಯನ್ನಾಗಿ ಆರಿಸಿಕೊಳ್ಳಲಾಗಿದೆ. ರಾಯಚೂರು ಜಿಲ್ಲೆಯಿಂದ ಕೊಪ್ಪಳವು ೧೯೯೭ರಲ್ಲಿ ಸ್ವತಂತ್ರ ಜಿಲ್ಲೆಯಾಗಿ ಮಾರ್ಪಟ್ಟಿದೆ. ಕರ್ನಾಟಕದ ಏಕೀಕರಣಕ್ಕೂ ಮುಂಚೆ ಈ ಪ್ರದೇಶವು ನಿಜಾಮ ಅರಸರ ಆಳ್ವಿಕೆಯಲ್ಲಿತ್ತು. ಅಧ್ಯಯನದ ಉದ್ದೇಶದ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಎಲ್ಲ ತಾಲೂಕುಗಳನ್ನು ಅಧ್ಯಯನ ವ್ಯಾಪ್ತಿಯಾಗಿ ನಿಗದಿಪಡಿಸಿಕೊಳ್ಳಲಾಗಿದೆ.

ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಮತ್ತು ಸಂಸ್ಕೃತಿ ಕುರಿತು ಕೆಲವು ಅಧ್ಯಯನಗಳು ನಡೆದಿವೆ. ಕ್ಷೇತ್ರದ ಬಗ್ಗೆ ಅಧ್ಯಯನ ಕೈಗೊಂಡಿರುವವರು

ಎಚ್.ಎಸ್. ಪಾಟೀಲ-'ಕೊಪ್ಪಳ ಜಿಲ್ಲೆಯ ಸಾಹಿತ್ಯ ಪರಂಪರೆ'. ಪ್ರೊ. ಅಲ್ಲಮಪ್ರಭು ಬೆಟ್ಟದೂರು, ಶ್ರೀ ಎಚ್.ಎಸ್. ಪಾಟೀಲ(ಸಂ)-'ಕೊಪ್ಪಳ ಜಿಲ್ಲಾ ದರ್ಶನ', ನಾರಾಯಣ ಗಿರಿಯಪ್ಪ-'ಆನೆಗೊಂದಿ ಜಾನಪದ', ಇಬ್ರಾಹಿಂಸಾಬ- 'ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ', ಪ್ರಕಾಶ ಬಳ್ಳಾರಿ-'ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು', ಡಾ. ಸಿದ್ಧಲಿಂಗಪ್ಪ-ಕೊಟ್ನೆಕಲ್ 'ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ', ಅಶ್ವತ್ಥ್ ಡಿ.ಎಸ್.-'ಕೊಪ್ಪಳ: ಒಂದು ಸಾಂಸ್ಕೃತಿಕ ಅಧ್ಯಯನ, ನಿಂಗಪ್ಪ-'ಕೊಪ್ಪಳ ಜಿಲ್ಲೆಯ ದೈವಗಳ ಜಾನಪದೀಯ ಅಧ್ಯಯನ', ಬಸವರಾಜ ಪೂಜಾರ್-'ಕೊಪ್ಪಳ ಜಿಲ್ಲೆಯ ಕೋಮು ಸೌಹಾರ್ದತೆಯ ತಾಣಗಳು'. ಶ್ರೀ ಜಗದೀಶನಾಬ್ಯಾಲ ಹುಣಸಿ-ಕೊಪ್ಪಳ 'ಗವಿಮಠ: ಸಾಂಸ್ಕೃತಿಕ ಅಧ್ಯಯನ', ಎಚ್.ಎಸ್. ಪಾಟೀಲ್ (ಸಂ) 'ಕೊಪಣಸಿರಿ ಕೊಪ್ಪಳ ಜಿಲ್ಲಾ ಅಧ್ಯಯನ ಸ್ಮರಣಸಂಚಿಕೆ' ಹೀಗೆ ಕೊಪ್ಪಳ ಜಿಲ್ಲೆಯ ಸಾಹಿತ್ಯ-ಸಂಸ್ಕೃತಿ ಕುರಿತು ಅಧ್ಯಯನಗಳು ನಡೆದಿವೆ.

### ಅಧ್ಯಯನದ ಮಹತ್ವ

ಜನಪದ ಗೀತ ಸಾಹಿತ್ಯಗಳನ್ನು ಗಮನಿಸಿದಾಗ ಮೇಲ್ನೋಟಕ್ಕೆ ಮನೋರಂಜನೆಯ ಉದ್ದೇಶವಿಟ್ಟುಕೊಂಡು ರಚಿತವಾದ ಸಾಹಿತ್ಯಗಳು ಎಂದೆನಿಸಿದರೂ ಅಧ್ಯಯನಕ್ಕೆ ಒಳಪಡಿಸಿದಾಗ ಅವುಗಳಲ್ಲಡಗಿದ ಸಾಹಿತ್ಯ, ಸಂಸ್ಕೃತಿ, ಜೀವನ ಪದ್ಧತಿ, ಆಚರಣೆ, ಮನರಂಜನೆ, ಭಾವೈಕ್ಯತೆ ಹೀಗೆ ಅನೇಕ ಅಂಶಗಳನ್ನು ಗುರುತಿಸಲು ಸಾಧ್ಯ. ಆ ಮೂಲಕ ಒಂದು ಪ್ರದೇಶದ ಜನಜೀವನವನ್ನು, ಅವರ ಚರಿತ್ರೆಯನ್ನು ತಿಳಿಯಲು ಅನುಕೂಲವಾಗುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಾದ ಕೊಪ್ಪಳ ಜಿಲ್ಲೆ ಐತಿಹಾಸಿಕವಾಗಿ ಪ್ರಾಚೀನ ಇತಿಹಾಸವನ್ನು ಹೊಂದಿದೆ. ಶಿಲಾಯುಗದ ಮಾನವನ ಕುರುಹುಗಳನ್ನು ಹೊಂದಿರುವ ಕೊಪ್ಪಳ ಜಿಲ್ಲೆಯು ಕಾಲಾನುಕ್ರಮದಲ್ಲಿ ಬೆಳವಣಿಗೆ ಹೊಂದಿದ ರೀತಿಗಳನ್ನು, ಜನಜೀವನವನ್ನು ಸಾಹಿತ್ಯದ ಮೂಲಕ ತಿಳಿಯಲು ಸಾಧ್ಯ. ಅಲಿಖಿತ ರೂಪದ ಜನಪದ ಸಾಹಿತ್ಯಗಳಲ್ಲಿ ಕೊಪ್ಪಳ ಜಿಲ್ಲೆಯ ಸಂಪ್ರದಾಯಾಚರಣೆಗಳನ್ನು, ಧರ್ಮಸಹಿಷ್ಣುತೆಯನ್ನು, ಮನರಂಜನೆಯನ್ನು ಮತ್ತು ಕಷ್ಟಕಾರ್ಪಣ್ಯಗಳನ್ನು ತಿಳಿಯಲು ಈ ರೀತಿಯ ಅಧ್ಯಯನಗಳಿಂದ ತಿಳಿಯಲು ಸಾಧ್ಯ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಗುರುತರವಾದ ಮಹತ್ವವನ್ನು ಹೊಂದಿದೆ.

### ಅಧ್ಯಯನದ ಸ್ವರೂಪ

ಜಿಲ್ಲಾ ವ್ಯಾಪ್ತಿಯು ಕೇವಲ ಒಂದು ಜಿಲ್ಲೆಯ ಕಂದಾಯ ಗಡಿಯಷ್ಟೆ. ಅದು ಸಾಂಸ್ಕೃತಿಕ ಗಡಿಯಾಗಲಾರದು. ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ಜನಪದ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. "ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ" ಎನ್ನುವ ಪ್ರಸ್ತುತ ಅಧ್ಯಯನವು ಸಾಂಸ್ಕೃತಿಕ ಹಾಗೂ ಜಾನಪದ ಸಾಹಿತ್ಯದ ನೆಲೆಯ ಸ್ವರೂಪವನ್ನು ಪಡೆದುಕೊಂಡಿದೆ. ಹಾಗೆಯೇ ವಿಶ್ಲೇಷಣೆ ಮಾದರಿಯ ಸ್ವರೂಪವನ್ನು ಹೊಂದಿದೆ. ಈ ಅಧ್ಯಯನ ಏಳು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಸ್ವರೂಪವನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಭೌಗೋಳಿಕ ಅಂಶಗಳು, ಸಾಮಾಜಿಕ ಮತ್ತು ಸಾಂಸ್ಕೃತಿಕ, ಸಾಹಿತ್ಯಿಕ ಅಂಶಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಕೊಪ್ಪಳ ಜಿಲ್ಲೆಯ ಭೌಗೋಳಿಕ ಚಹರೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳ ಬಗ್ಗೆ ಸಂಕ್ಷಿಪ್ತ ವಿವರಣೆಗಳನ್ನು ಅಧ್ಯಯನದ ಆರಂಭ ನೋಟವಾಗಿ ನೀಡಲಾಗಿದೆ. ಸಾಹಿತ್ಯಿಕವಾಗಿ ಕೊಪ್ಪಳ ಜಿಲ್ಲೆಯ ಬೆಳವಣಿಗೆಗಳನ್ನು ನೋಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಜನಪದ ಸಾಹಿತ್ಯವನ್ನೊಳಗೊಂಡ ಕೊಪ್ಪಳ ಜಿಲ್ಲೆಯು ಅತ್ಯಂತ ಶ್ರೀಮಂತವಾಗಿದೆ. ಕಥನ ಗೀತೆಗಳು, ಗೀಗೀ ಪದಗಳು, ಡೊಳ್ಳಿನ ಹಾಡುಗಳು, ಹಂತಿ ಹಾಡುಗಳು, ಕೋಲಾಟ ಹಾಡುಗಳು, ಮೊಹರಂ ಹಾಡುಗಳು, ಹೋಳಿ ಹಾಡುಗಳು, ಗೊಂದಲಿಗರ ಹಾಡುಗಳು ಹೀಗೆ ಜನಪದರ ಬದುಕಿನ ಸಮಸ್ತ ವಿವರಗಳು ಸಿಗುವಷ್ಟು ವಿಪುಲವಾದ ಜನಪದ ಸಾಹಿತ್ಯ ಇಲ್ಲಿ ಬೆಳೆದು ಬಂದಿದೆ. ಇವುಗಳ ಕುರಿತು ಸಂಕ್ಷಿಪ್ತವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯ ಗಂಡಸರ ಹಾಡುಗಳ ಕುರಿತಾಗಿದೆ. ಇದರಲ್ಲಿ ಹೋಳಿ ಹಾಡುಗಳು, ಹಂತಿ ಹಾಡುಗಳು, ಡೊಳ್ಳು ಹಾಡುಗಳು, ಕೋಲಾಟ ಹಾಡುಗಳು, ಗೀಗೀ ಪದಗಳು, ಮೊಹರಂ ಹಾಡುಗಳು, ಗೊಂದಲಿಗರ ಹಾಡುಗಳು ಮುಂತಾದವು ಪುರುಷ ಪ್ರಧಾನವಾಗಿ ಗುರುತಿಸಿಕೊಂಡಿರುವ ಸ್ವರೂಪವನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಐದನೆಯ ಅಧ್ಯಾಯ ಹೆಂಗಸರ ಹಾಡುಗಳು ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಇದರಲ್ಲಿ ಕುಟ್ಟುವಾಗ, ಬೀಸುವಾಗ, ಹಾಡುವ ಹಾಡುಗಳ ಅಧ್ಯಯನವನ್ನು ಮಾಡಲಾಗಿದೆ. ಇವುಗಳಲ್ಲದೆ ವೃತ್ತಿಗಾಯಕರು ಹಾಡುವ ಹಾಡುಗಳು, ತ್ರಿಪದಿ, ಚೌಪದಿ, ಕಥನಗೀತೆ ಮುಂತಾದ ರೂಪಗಳ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡಿದ್ದು ಸ್ತ್ರೀಯರೇ ವಿಶೇಷವಾಗಿ ಹಾಡುವ ಮದುವೆ, ತೊಟ್ಟಿಲು, ಸೀಮಂತ ಮುಂತಾದ ಸಂದರ್ಭಗಳಲ್ಲಿ ಹಾಡುಗಳ ಬಗೆಗಿನ ವಿಶ್ಲೇಷಣೆ ಇಲ್ಲಿದೆ.

ಆರನೆಯ ಅಧ್ಯಾಯದಲ್ಲಿ ಶಿಶುಪ್ರಾಸಗಳ ಕುರಿತು ಹಾಡುಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಎಳೆಯ ಮಕ್ಕಳಲ್ಲಿ ವೈವಿಧ್ಯಮಯ ಶಿಶುಪ್ರಾಸಗಳನ್ನು ನಾವು ಕಾಣಬಹುದಾಗಿದೆ. ಚಿಕ್ಕ ಚಿಕ್ಕ ಹಾಡುಗಳಂತೆ ಕಂಡುಬಂದರೂ ಅವುಗಳಲ್ಲಡಗಿದ ಅರ್ಥವಂತಿಕೆ, ಮಕ್ಕಳ ಗ್ರಹಿಕೆ, ಆಲೋಚನಾಶಕ್ತಿ, ಬೆಳವಣಿಗೆ ಹೀಗೆ ಇನ್ನಿತರ ರೀತಿಯಲ್ಲಿ ಮಕ್ಕಳ ಮನೋವೈಜ್ಞಾನಿಕತೆಗೆ ಪೂರಕ ಅಂಶಗಳನ್ನು ಹೊಂದಿರುವುದರ ಬಗೆಗೆ ವಿಚಾರ ಮಾಡಲಾಗಿದೆ.

ಏಳನೆಯ ಅಧ್ಯಾಯ ಸಮಾರೋಪ. ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಪಟ್ಟಿ ಮಾಡಿ ನೀಡಲಾಗಿದೆ.

ಅನುಬಂಧದಲ್ಲಿ ನಕಾಶೆ, ಪರಾಮರ್ಶನ ಗ್ರಂಥಗಳನ್ನು, ಛಾಯಾಚಿತ್ರಗಳನ್ನು ಮತ್ತು ವಕ್ತೃಗಳ ಪಟ್ಟಿಯನ್ನು ನೀಡಲಾಗಿದೆ.

□□

ಅಧ್ಯಾಯ : ಎರಡು

# ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಸಾಂಸ್ಕೃತಿಕ ಹಿನ್ನೆಲೆ

## ಪ್ರವೇಶ

ಜನಪದ ಸಾಹಿತ್ಯ ಶ್ರೀಸಾಮಾನ್ಯರ ಸಾಹಿತ್ಯ. ಇದು ಜನಪದರ ಏಳು-ಬೀಳುಗಳ ಜೀವನದೊಂದಿಗೆ ಹಾಸುಹೊಕ್ಕಾಗಿ ತಳಕುಹಾಕಿಕೊಂಡು ಬಂದಿದೆ. ಜನಪದ ಮೌಖಿಕ ಸಂಪ್ರದಾಯವು ಯಾವುದೇ ಸಾಹಿತ್ಯಕ್ಕೆ ಮೂಲಾಧಾರವಾಗಿರುತ್ತದೆ. ಅಂತೆಯೇ ನಮ್ಮ ಸಂಸ್ಕೃತಿಯನ್ನು ತಿಳಿಯಬೇಕಾದರೆ ಜನಪದ ಸೊಗಡಿಗೆ ಮೊರೆಹೋಗಬೇಕಾಗುವ ಪ್ರಸಂಗ ಸಹಜವಾದುದಾಗಿದೆ. ಜನಪದ ಸಾಹಿತ್ಯ ಜನಪದರ ಸಂಸ್ಕೃತಿಯೊಂದಿಗೆ ಜೀವನ ರೀತಿ ನೀತಿಗಳನ್ನು, ಜ್ಞಾನಪರಂಪರೆಗಳ ನಂಬಿಕೆ, ಸಂಪ್ರದಾಯಗಳು, ಆಚರಣೆಗಳು, ವಿಧಿವಿಧಾನಗಳನ್ನು ಒಳಗೊಂಡಿರುತ್ತದೆ.

ಕರ್ನಾಟಕದ ಸಂದರ್ಭದಲ್ಲಿ ಕೊಪ್ಪಳ ಜಿಲ್ಲೆಯು ಸಾಂಸ್ಕೃತಿಕವಾಗಿ ಭಿನ್ನವಾಗಿ ಗುರುತಿಸಿಕೊಂಡಿರುವುದನ್ನು ಗಮನಿಸಬಹುದು. ಕನ್ನಡ ಸಾಹಿತ್ಯದ ಹಲವು ಮಜಲುಗಳನ್ನು ಹೊಂದಿರುವ ಜಿಲ್ಲೆ ಸಾಂಸ್ಕೃತಿಕವಾಗಿ ಅನನ್ಯತೆಯನ್ನು ಹೊಂದಿದೆ. ಚಾರಿತ್ರಿಕವಾಗಿ ಇದು ಮೌರ್ಯರ ಕಾಲದಿಂದ ಗುರುತಿಸಿಕೊಂಡಿದೆ. ಅಲ್ಲದೆ ಶಿಲಾಯುಗಗಳ ಕಾಲದ ಅವಶೇಷಗಳನ್ನು ಹೊಂದಿ ಭಾರತದ ಮೊಟ್ಟಮೊದಲ ಮಾನವನ ನೆಲೆಯೆಂದು ಗುರುತಿಸಿಕೊಂಡಿದೆ. ಮಾನವನ ಜೀವನದ ಪಲ್ಲಟಗಳಿಂದಾಗಿ ಅನೇಕ ಬದಲಾವಣೆ ಮತ್ತು ಬೆಳವಣಿಗೆಯನ್ನು ಕಾಣಲಾಯಿತು. ಹಾಗೆಯೇ ಜನಸಾಮಾನ್ಯರು ರಾಜಪ್ರಭುತ್ವ ವ್ಯವಸ್ಥೆಯಲ್ಲಿ ನಲುಗಿ ಹೋಗಿದ್ದರೂ ತಮ್ಮ ಅಸ್ತಿತ್ವವನ್ನು ಹಾಗೆಯೇ ಉಳಿಸಿಕೊಂಡು ಬಂದಿರುವುದು ಗಮನಾರ್ಹ.

ಇಲ್ಲಿನ ಶ್ರೀಮಂತವಾದ ಜಾನಪದ ಸಂಪತ್ತನ್ನು ಕಂಡರೆ ಎಲ್ಲರೂ ಬೆರಗಾಗಬೇಕು. ಅಂತಹ ಕೊಡುಗೆ ಕೊಪ್ಪಳ ಜಿಲ್ಲೆ ನೀಡಿದೆ. ಅದರಲ್ಲೂ ಜನಪದ ಗೀತ ಸಾಹಿತ್ಯದ ತವರೂರಾಗಿದೆ. ಹಿಂದಿನ ಈ ನಮ್ಮ ಸಂಸ್ಕೃತಿಯ ಅಧ್ಯಯನಕ್ಕೆ ಜಾನಪದ ಪ್ರಮುಖವಾಗಿದೆ. ಈ ಗೀತ ಸಾಹಿತ್ಯ ಸಂಸ್ಕೃತಿ ಸಂಗತಿಯನ್ನು ತಿಳಿದುಕೊಳ್ಳುವ ಪೂರ್ವದಲ್ಲಿ ಈ ಪ್ರದೇಶದ ಭೌಗೋಳಿಕ ಮತ್ತು ಸಾಹಿತ್ಯ ಪ್ರಭಾವವನ್ನು ಕುರಿತು ಅರಿತುಕೊಳ್ಳುವುದು ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ಇವುಗಳನ್ನು ಕುರಿತು ಅಭ್ಯಸಿಸುವ ಪ್ರಯತ್ನವನ್ನು ಮಾಡಲಾಗಿದೆ.

ಸಾಂಸ್ಕೃತಿಕ ಮಜಲುಗಳಲ್ಲಿ ಒಂದಾದ ಜನಪದ ಗೀತ ಸಾಹಿತ್ಯವು ತನ್ನ ಅಸ್ಮಿತೆಯಿಂದ ನಾಡಿನ ಸಂಸ್ಕೃತಿಯನ್ನು ಎತ್ತಿಹಿಡಿಯುವಲ್ಲಿ ಪ್ರಮುಖ ಪಾತ್ರ ವಹಿಸಿರುವುದು ತಿಳಿದುಬರುವ ಸಂಗತಿಯಾಗಿದೆ. ಈ ಬಗೆಯ ಗೀತ ಸಾಹಿತ್ಯ ಜನಸಾಮಾನ್ಯರ ಸ್ಮೃತಿಪಟಲದಲ್ಲಿ ಅಗಾಧವಾಗಿ ತಳವೂರಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತ ಅಧ್ಯಾಯವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆ ಭಾಗದಲ್ಲಿ ಭೌಗೋಳಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಅಲ್ಲದೆ ಈ ಭಾಗದಲ್ಲಿ ಮೇರೆಗಳು, ಜನಸಂಖ್ಯೆ, ವಾಯುಗುಣ, ಖನಿಜಸಂಪತ್ತು ಕಬ್ಬಿಣದ ಅದಿರು, ಬೆಣಚುಕಲ್ಲು, ಬಳಪದಕಲ್ಲು, ವ್ಯವಸಾಯ, ಅರಣ್ಯ ಮುಂತಾದವುಗಳನ್ನು ಕುರಿತು ತಿಳಿಸಲಾಗಿದೆ. ಎರಡನೆಯ ಭಾಗದಲ್ಲಿ ಈ ಪ್ರದೇಶದ ಸಾಹಿತ್ಯಿಕ ಪರಂಪರೆಯ ನೋಟ ವಿವರಿಸಲು ಯತ್ನಿಸಲಾಗಿದೆ.

## ೨.೧. ಭೌಗೋಳಿಕ ಹಿನ್ನೆಲೆ

ಒಂದು ಜಿಲ್ಲೆಯ ಭೌಗೋಳಿಕ ವಿವರಗಳಿಗೂ, ಅಲ್ಲಿನ ಸಂಸ್ಕೃತಿಗೂ ಅವಿನಾಭಾವ ಸಂಬಂಧ ವಿರುತ್ತದೆ. ಹಾಗಾಗಿ ಒಂದು ಜಿಲ್ಲೆಯ ಸಾಂಸ್ಕೃತಿಕ ಆಕೃತಿಯನ್ನು ಅರ್ಥ ಮಾಡಿಕೊಳ್ಳಲು ಅಲ್ಲಿ ಭೌಗೋಳಿಕ ವಿವರಗಳಲ್ಲಿ ಮೂಲ ನೆಲೆಗಳನ್ನು ಅರ್ಥ ಮಾಡಿಕೊಳ್ಳುವ ಅಗತ್ಯವಿದೆ. ಎಷ್ಟೋ ಬಾರಿ ಒಂದು ದೇಶದ, ರಾಜ್ಯದ ಜಿಲ್ಲೆಯ ಭೌಗೋಳಿಕ ವಿವರಗಳು, ಅಲ್ಲಿನ ಸಾಂಸ್ಕೃತಿಕ ಲೋಕ ವನ್ನು ನಿರ್ಧರಿಸುತ್ತಿರುತ್ತವೆ. ಹಾಗಾಗಿ ಭೌಗೋಳಿಕ ವಿವರಗಳನ್ನು ಸೂಕ್ಷ್ಮವಾಗಿ ಗ್ರಹಿಸದೆ, ವಿವರಿಸಿ ಕೊಳ್ಳದೆ ಅಲ್ಲಿನ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವುದು ತುಸು ಕಷ್ಟವೆ.[೧]

ಕರ್ನಾಟಕ ರಾಜ್ಯ ಈಶಾನ್ಯ ದಿಕ್ಕಿಗಿರುವ ಕೊಪ್ಪಳ ಜಿಲ್ಲೆಯಲ್ಲಿ ಕುಷ್ಟಗಿ, ಕೊಪ್ಪಳ, ಗಂಗಾವತಿ, ಹಾಗೂ ಯಲಬುರ್ಗಾ ಹೀಗೆ ನಾಲ್ಕು ತಾಲೂಕು ಕೊಪ್ಪಳ ಜಿಲ್ಲೆಯ ಪೂರ್ವ ರೇಖಾಂಶ ೭೫°-೭೬°ರಿಂದ ೭೭°-೫೦° ಹಾಗೂ ಉತ್ತರ ಅಕ್ಷಾಂಶ ೧೫°-೧೦°ರಿಂದ ೧೬°-೫೧° ರವರೆಗೆ ಸಮುದ್ರ ಪಾತಳಿಯಿಂದ ೫೨೩°-೦೪ ಮೀಟರ್ ಎತ್ತರದಲ್ಲಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ೭೧೮೯ ಚದರ ಕಿಲೋಮೀಟರ್ ಇದ್ದು, ಜಿಲ್ಲೆಯನ್ನು ಆಡಳಿತಾತ್ಮಕವಾಗಿ ೪ ತಾಲೂಕುಗಳನ್ನಾಗಿ, ೨೦ ಹೋಬಳಿಗಳನ್ನಾಗಿ ವಿಭಜಿಸಲಾಗಿದೆ. ೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೫೯೫ ಜನವಸತಿ ಇರುವ ಹಾಗೂ ೩೫ ಜನವಸತಿ ಇರದ ಗ್ರಾಮಗಳಿವೆ. ಜಿಲ್ಲೆಯಲ್ಲಿ ಗಂಗಾವತಿ ಹಾಗೂ ಕೊಪ್ಪಳ ಎರಡು ನಗರ ಸಭೆಗಳು ಹಾಗೂ ಯಲಬುರ್ಗಾ, ಕುಷ್ಟಗಿ, ಪಟ್ಟಣ ಪಂಚಾಯಿತಿಗಳಿವೆ.[೨]

### ಮೇರೆಗಳು

ಕೊಪ್ಪಳ ಜಿಲ್ಲೆಯ ಉತ್ತರಕ್ಕೆ ಬಾಗಲಕೋಟೆ ಜಿಲ್ಲೆ, ಈಶಾನ್ಯ ಹಾಗೂ ಪೂರ್ವಕ್ಕೆ ರಾಯಚೂರು ಜಿಲ್ಲೆ ಅಗ್ನೇಯ ಹಾಗೂ ದಕ್ಷಿಣಕ್ಕೆ ಬಳ್ಳಾರಿ ಜಿಲ್ಲೆ ಹಾಗೂ ಪಶ್ಚಿಮಕ್ಕೆ ಗದಗ ಜಿಲ್ಲೆಯ ಮೇರೆಗಳಿವೆ. ದಕ್ಷಿಣಕ್ಕೆ ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳ ನಡುವೆ ತುಂಗಭದ್ರೆ ಹರಿದಿದೆ.[೩]

### ಜನಸಂಖ್ಯೆ

೨೦೧೧ ಜನಗಣತಿ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೩.೯೧೨೯೨ ಇದ್ದು, ಇದರಲ್ಲಿ ೬.೦೩ ಲಕ್ಷ ಗಂಡಸರು ಹಾಗೂ ೫.೯೩ ಲಕ್ಷ ಹೆಂಗಸರಿದ್ದಾರೆ. ಗಂಗಾವತಿ ತಾಲೂಕಿನ ಜನಸಂಖ್ಯೆ ಗರಿಷ್ಠ ಸ್ಥಾನದಲ್ಲಿದ್ದು ೪.೦೬ ಲಕ್ಷದಷ್ಟಿದೆ. ಯಲಬುರ್ಗಾ ತಾಲೂಕಿನ ಜನಸಂಖ್ಯೆ ಕನಿಷ್ಠ ಇದ್ದು ೨.೩೬ರಷ್ಟಿದೆ. ಕುಷ್ಟಗಿ ೨.೪೨ ಲಕ್ಷ ಹಾಗೂ ಕೊಪ್ಪಳ ೩.೧೪ ಲಕ್ಷ ಜನಸಂಖ್ಯೆ ಇದೆ.[೪]

### ವಾಯುಗುಣ

ಈ ಜಿಲ್ಲೆಯ ಮಳೆಯ ಪ್ರಮಾಣವು ಸರಾಸರಿಗಿಂತ ಕಡಿಮೆ ಇದೆ. ಇಲ್ಲಿ ನೈರುತ್ಯ ಮಾರುತಗಳು ಮಳೆ ಸುರಿಸುತ್ತವೆ. ಮಾನಸೂನ್ ಮೇ ಕೊನೆಯ ವಾರದಿಂದ ಜೂನ್ ಎರಡನೆ ವಾರದವರೆಗೆ ಈ ಪ್ರದೇಶವನ್ನು ತಲುಪುತ್ತವೆ. ತುಂಗಭದ್ರಾ ನದಿ ಅನತಿ ದೂರದಲ್ಲಿ ಹರಿಯುತ್ತಿರುವುದರಿಂದ ಅದೇ ನೀರು ಬಹುಮುಖ್ಯ ಸಂಪನ್ಮೂಲವಾಗಿದೆ. ಮುಂಗಾರು, ಹಂಗಾಮು ಸಾಧಾರಣದಿಂದ ಕೂಡಿರುತ್ತದೆ. ಹಿಂಗಾರು ಸಾಧಾರಣವಾಗಿರುತ್ತದೆ. ಮಳೆಯಾಶ್ರಿತವಾದ ಈ ಪ್ರದೇಶದಲ್ಲಿ ಅಲ್ಪಮಳೆ ಬಯಸುವ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದರ ಜೊತೆಗೆ ತುಂಗಭದ್ರಾ ಅಚ್ಚುಕಟ್ಟು ಭೂಮಿ ಅಲ್ಪ ಪ್ರಮಾಣದಲ್ಲಿ ಇದ್ದು ಅಲ್ಲಿ ಕಬ್ಬು ಮತ್ತು ಭತ್ತದ ಬೆಳೆಗಳನ್ನು ಬೆಳೆಯುವ ವಾತಾವರಣವಿದೆ.

ಬೇಳೆಕಾಳು ಮತ್ತು ವಾಣಿಜ್ಯ ಬೆಳೆಗಳಾದ ಹತ್ತಿ, ತಂಬಾಕು ಅಲ್ಲದೆ ಎಣ್ಣೆಕಾಳು ಮುಂತಾದವನ್ನು ಬೆಳೆಯಲಾಗುತ್ತದೆ. ಜೀವನಾವಶ್ಯಕವಾದ ಜೋಳ, ಸಜ್ಜೆ, ನವಣೆ ಮುಂತಾದ ಬೆಳೆಗಳನ್ನು ಈ ಭಾಗದ ರೈತರು ಬೆಳೆಯುತ್ತಾರೆ. ಈ ಜಿಲ್ಲೆ ಕಪ್ಪು ಮತ್ತು ಕೆಂಪುಮಣ್ಣಿನ ಭೂಮಿಯನ್ನು ಹೊಂದಿದೆ. ಗಂಗಾವತಿ ತಾಲೂಕು ರಾಜ್ಯದಲ್ಲೇ ಅಧಿಕ ಪ್ರಮಾಣ ಭತ್ತವನ್ನು ಬೆಳೆಯುವ ತಾಲೂಕಾಗಿದ್ದು ಆ ಭಾಗಕ್ಕೆ "ಭತ್ತದ ಕಣಜ" ಎಂದು ಕರೆಯುತ್ತಾರೆ. ಕನ್ನಡ ಮಾತೃಭಾಷೆಯಾಗಿದೆ. ಹೈದರಾಬಾದ್ ನಿಜಾಮರ ಆಳ್ವಿಕೆಯಿಂದ ಈ ಭಾಗದ ಮಾತನಾಡುವ ಕನ್ನಡ ಭಾಷೆಗೆ ಉರ್ದುವಿನ ಛಾಪು ಪ್ರಾಪ್ತವಾಗಿದೆ. ತೆಲುಗು ಭಾಷೆಯು ತನ್ನ ಪ್ರಭಾವವನ್ನು ಹೊಂದಿದೆ. ಆದರೂ ಕನ್ನಡವೇ ಇಲ್ಲಿಯ ಹೆಚ್ಚು ಜನರಾಡುವ ಅಧಿಕೃತ ಮಾತೃಭಾಷೆಯಾಗಿದೆ.[೫]

### ಖನಿಜ ಸಂಪತ್ತು

ಜಿಲ್ಲೆಯ ಹಲವೆಡೆಗಳಲ್ಲಿ ಸಾಕಷ್ಟು ಖನಿಜ ನಿಕ್ಷೇಪಗಳು ದೊರಕುತ್ತವೆ. ಕೊಪ್ಪಳ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳು ಕಬ್ಬಿಣದ ಅದಿರು, ಬೆಣಚುಕಲ್ಲು, ಬಳಪದಕಲ್ಲು ನಿಕ್ಷೇಪಗಳಿಂದಾಗಿ ಹೆಸರುವಾಸಿಯಾಗಿವೆ.

### ಕಬ್ಬಿಣದ ಅದಿರು

ಮಧ್ಯಮ ಮತ್ತು ಕೆಳದರ್ಜೆಯ ಕಬ್ಬಿಣದ ಅದಿರುಗಳು ಕುಷ್ಟಗಿ ಪದರು ಶಿಲಾ ಪಟ್ಟಿಯಲ್ಲಿವೆ. ಕಬ್ಬಿಣದ ಅದಿರಾದ ಹೆಮಾಟೈಟಿನ ಹಲವು ಹಳೆಯ ಗಣಿಗಳು ಕುಷ್ಟಗಿ ತಾಲ್ಲೂಕಿನ ಜಾಜದಗುಡ್ಡ, ಕಲ್ಮಂಗಿ, ನಂದಿಹಳ್ಳಿಗಳಲ್ಲಿ ಇವೆ. ಇಲ್ಲಿಯ ಅದಿರಿನಲ್ಲಿ ಶೇಕಡ ೨೦ರಿಂದ ೪೦ರಷ್ಟು ಕಬ್ಬಿಣಾಂಶ ಪ್ರಮುಖವಾಗಿ ಕಂಡುಬರುತ್ತವೆ.

**ಬೆಣಚುಕಲ್ಲು**

ಬೆಣಚು ಗಾಜಿನ ತಯಾರಿಕೆಗೆ ಬೇಕಾಗಿರುವ ಒಂದೇ ಒಂದು ಕಚ್ಚಾವಸ್ತು. ಇದನ್ನು ಸಾಮಾನ್ಯವಾಗಿ ರಂಗೋಲಿಯ ಪುಡಿಗಾಗಿ ಬಳಸುತ್ತಾರೆ. ಇದು ಜಿಲ್ಲೆಯ ಒಂದೆರಡು ಕಡೆಗಳಲ್ಲಿ ಸಿಗುತ್ತದೆ. ಕುಷ್ಟಗಿ ತಾಲೂಕಿನ ತಾವರೆಗೆರೆ ಬಳಿ ಮತ್ತು ಕೊಪ್ಪಳ ತಾಲೂಕಿನ ಅಲ್ಲಾನಗರದ ಬಳಿಯಿರುವ ಬೆಣಚುಕಲ್ಲಿನ ತುಂಡುಗಳನ್ನು, ಆಗಾಗ ರೈಲ್ವೆ ಹಳಿಯ ಕೆಳಗಡೆ ಹಾಕುವ ಬಿಂಚಕಲ್ಲು ಗಳನ್ನಾಗಿ ಉಪಯೋಗಿಸುತ್ತಾರೆ.

**ಬಳಪದಕಲ್ಲು**

ಇದು ಕೊಪ್ಪಳ ತಾಲ್ಲೂಕಿನ ಪುರಾತನವಾದ 'ಮೋದಿತಗ್ರಾಮ'ವೆಂದು ಕರೆಯಲ್ಪಡುವ ಮಾದಿನೂರು ಗ್ರಾಮದಲ್ಲಿ ಮತ್ತು ಕುಷ್ಟಗಿ ತಾಲ್ಲೂಕಿನ ಕೂಡ್ಲೂರುನಲ್ಲಿಯೂ ದೊರಕುತ್ತದೆ. ಸರಿಸುಮಾರು ೧೧-೧೨ನೇ ಶತಮಾನ ದೇವಾಲಯಗಳ ಚಕ್ರವರ್ತಿಯೆಂದೇ ಹೆಸರುವಾಸಿಯಾದ ಇಟಗಿ ಮಹದೇವ ದೇವಾಲಯಕ್ಕೆ ಬಳಪದಕಲ್ಲು ಬಳಸಲಾಗಿದೆ. ಹಸಿರು ಬೆಣಚು ಕಲ್ಲನ್ನು ಫ್ರಕ್ಸೈಟ್ ಬೆಣಚುಕಲ್ಲು ಎಂದು ಕರೆಯಲಾಗುತ್ತದೆ. ಇದರ ಕಡು ಹಸಿರು ಬಣ್ಣಗಳನ್ನು ಆಕರ್ಷಿಸುವುದರಿಂದ ಇದು ಹಸಿರು ಬೆಣಚು ಎಂದೇ ಪ್ರಸಿದ್ಧವಾಗಿದೆ. ಗಂಗಾವತಿ ತಾಲ್ಲೂಕಿನ ಬೈಲಕ್ಕಂಪುರದ ಬಳಿ ಇರುವ ಹಸಿರು ಬೆಣಚು ಒಳ್ಳೆಯ ವರ್ಣವನ್ನು ಹೊಂದಿದ್ದು ಇದನ್ನು ಸರಗಳ ಮಣಿಗಳಿಗಾಗಿ, ಚಿಕ್ಕ ಚಿಕ್ಕಕಲಾತ್ಮಕ ವಸ್ತುಗಳ ನಿರ್ಮಾಣಕ್ಕಾಗಿ, ಮೊಸಾಯಿಕ್ ಟೈಲ್ಸ್‌ಗಳಿಗಾಗಿ ಬಳಸಲಾಗುತ್ತಿದೆ. ಕನಕಗಿರಿ ಹತ್ತಿರದ ಗೌರಿಪುರ ಗ್ರಾಮದಲ್ಲೂ ಕಲ್ಲನ್ನು ಕಾಣಬಹುದಾಗಿದೆ.[೬] ಜಿಲ್ಲೆಯ ಕುಕನೂರು ಪ್ರದೇಶ ಗ್ರಾನೈಟ್ ಉದ್ಯಮಕ್ಕೆ ರಾಜ್ಯವ್ಯಾಪಿ ಹೆಸರುವಾಸಿಯಾಗಿದೆ. ಭೂ ವೈಜ್ಞಾನಿಕವಾಗಿ ಕಟ್ಟಡಕ್ಕಾಗಿ ಉಪಯೋಗಿಸುವ ಶಿಲೆ ಅಲಂಕಾರಗಳಿಗಾಗಿ ಉಪಯೋಗಿಸುವ ಶಿಲೆಯಲ್ಲಿ ವ್ಯತ್ಯಾಸವಿಲ್ಲ. ಹಿರೇಬೆಣಕಲ್‌ನಲ್ಲಿ ಕಂಡುಬರುತ್ತಿರುವ ಪ್ರಾಚೀನ ಕಾಲದಲ್ಲಿ ಮಾನವನು ವಾಸಕ್ಕಾಗಿ ಉಪಯೋಗಿಸುತ್ತಿರ ಬಹುದಾದ ಕಣ ಶಿಲೆಯ ಚಪ್ಪಡಿಗಳು ಅಂದಿನಿಂದ ಇಂದಿನವರೆಗೂ ಮಾನವ ಕಟ್ಟಡಗಳಿಗೆ, ದೇವಾಲಯಗಳಿಗೆ, ಕೋಟೆಗಳಿಗೆ ಶಿಲೆಗಳು ಬಳಕೆಯಾಗುತ್ತಲಿವೆ. ಜನಸಾಮಾನ್ಯರು ಇದನ್ನು ಗ್ರಾನೈಟ್‌ಕಲ್ಲು ಎಂದು ಕರೆಯುತ್ತಾರೆ.

ಕುಷ್ಟಗಿ ತಾಲೂಕಿನ ಹುಲಿಗೆರೆ, ವರ್ತಗೆರೆ ಗ್ರಾಮದಲ್ಲಿ ಇಲಕಲ್‌ನ ಕೆಂಪು ಗ್ರಾನೈಟ್‌ಗೆ ಸಮನಾದ ಗ್ರಾನೈಟ್ ನಿಕ್ಷೇಪಗಳಿರುವುದನ್ನು ಕಾಣುತ್ತೇವೆ. ಕುಕನೂರು ಪ್ರದೇಶದ ಸುತ್ತಮುತ್ತ ಕಂಡುಬರುವ ಗ್ರಾನೈಟ್ ಹಿಮಾಲಯನ್ ಬ್ಲೂ ಎಂದೂ ಖ್ಯಾತಿಯಾಗಿರುವ ನೇಣಿಕಲ್ಲು ಗಣಿಗಳನ್ನು ಹೊಂದಿದೆ.

**ನದಿಗಳು**

ತುಂಗಭದ್ರಾ ನದಿಯೊಂದು ಈ ಜಿಲ್ಲೆಯ ದಕ್ಷಿಣ ಮೇರೆಯಾಗಿ ಜಿಲ್ಲೆಯಲ್ಲಿ ಹರಿದಿದೆ. ಈ ನದಿಯಿಂದ ಕೊಪ್ಪಳ ತಾಲೂಕಿನ ಹಿಟ್ನಾಳ್ ಹೋಬಳಿ ಹಾಗೂ ಗಂಗಾವತಿ ತಾಲೂಕಿನ ಜಮೀನಿಗೆ ನೀರಾವರಿಯಾಗಿದೆ, ಎಡದಂಡೆ ಕಾಲುವೆಯಿಂದ ನೀರಾವರಿಯಾಗಿದೆ.[೭]

## ವ್ಯವಸಾಯ

ಕೊಪ್ಪಳ ಜಿಲ್ಲೆ ಬಯಲುಸೀಮೆಯಲ್ಲಿ ಬರುತ್ತದೆ. ಇಲ್ಲಿ ನೀರಾವರಿ ತುಂಬ ಕಡಿಮೆ. ಮಲೆನಾಡಿನಲ್ಲಿ ಆಗುವಂತೆ ಸತತ ಮಳೆ ಸುರಿಯುವುದಿಲ್ಲ. ಹೀಗಾಗಿ ಮಳೆಯಾಧಾರಿತ ವ್ಯವಸಾಯ ಸಾಮಾನ್ಯವಾಗಿ ಕಂಡುಬರುತ್ತದೆ. ಜಿಲ್ಲೆಯಲ್ಲಿ ೫೫೩೯೪೫ ಹೆಕ್ಟೇರ್ ಪ್ರದೇಶದಲ್ಲಿ ಕೃಷಿ ಚಟುವಟಿಕೆಗಳು ನಡೆಯುತ್ತಲಿವೆ. ೨೯೪೫೧ ಹೆಕ್ಟೇರ್ ಕುರುಚಲು ಅರಣ್ಯ ಪ್ರದೇಶವಾಗಿದೆ. ३೮೮೬೦ ಹೆಕ್ಟೇರ್ ಕೃಷಿಯೇತರ ಜಮೀನಾಗಿದೆ. ೧೬೬೨೭ ಹೆಕ್ಟೇರ್ ಬಂಜರುಭೂಮಿಯಾಗಿದೆ, ೧೪೬೭೫ ಹೆಕ್ಟೇರ್ ಗೋಮಾಳ ಪ್ರದೇಶವಾಗಿದೆ. ೨೧೦ ಹೆಕ್ಟೇರ್ ನೆಡುತೋಪು ಪ್ರದೇಶವಾಗಿದೆ.[೪]

## ಅರಣ್ಯ

ಕೊಪ್ಪಳ ಜಿಲ್ಲೆಯಲ್ಲಿ ದಟ್ಟವಾದ ಕಾಡುಗಳಿಲ್ಲ. ಬಯಲುಸೀಮೆ ಪ್ರದೇಶವಾಗಿದ್ದು, ಕಲ್ಲು ಬಂಡೆಗಳಿಂದ ಹಾಗೂ ಅಲ್ಲಲ್ಲಿ ಕುರುಚಲು ಗಿಡಗಳಿಂದ ಕೂಡಿದ ಬೆಟ್ಟ ಗುಡ್ಡಗಳಿವೆ. ಕೊಪ್ಪಳ ಮತ್ತು ಗಂಗಾವತಿ ತಾಲೂಕುಗಳಲ್ಲಿ ಮನೆ, ಮಠ ಕಟ್ಟಿಸಿಕೊಳ್ಳಲು ಬರುವ ಕಲ್ಲುಗಳ ನಿಕ್ಷೇಪವಿದೆ. ಜಿಲ್ಲೆಯಲ್ಲಿ ಅರಣ್ಯ ಪ್ರದೇಶ ಬಹಳ ಕಡಿಮೆ ಇದ್ದು, ಒಟ್ಟು ಭೌಗೋಳಿಕ ವಿಸ್ತೀರ್ಣದ ಶೇಕಡ ೫ರಷ್ಟಿದೆ ಎಂದು ಅಂಕಿ ಅಂಶಗಳು ದೃಢಪಡಿಸುತ್ತವೆ.[೯]

## ೨.೨. ಸಾಹಿತ್ಯಕ ಪರಂಪರೆ

ಹೈದರಾಬಾದ್ ಕರ್ನಾಟಕದ ಪ್ರಮುಖ ಜಿಲ್ಲೆಯಾದ ಕೊಪ್ಪಳ ಪ್ರದೇಶವು ಸಾಂಸ್ಕೃತಿಕವಾಗಿ ಮತ್ತು ಸಾಹಿತ್ಯಿಕವಾಗಿ ಸಮೃದ್ಧವಾಗಿದ್ದು, ಅನೇಕ ಪ್ರಯೋಗಗಳ ನೆಲೆಯಾಗಿದೆ. ಬಹುಭಾಷೆ, ಬಹುಜನಾಂಗ, ಬಹುಪಂಥ, ಬಹು ಸಂಸ್ಕೃತಿಗಳ ನಾಡಾಗಿ ರೂಪುಗೊಂಡಿದ್ದು ವಿಶೇಷವೇ ಆಗಿದೆ. ೯ನೇ ಶತಮಾನದ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಕಾಲದ ಶ್ರೀವಿಜಯನ ಕವಿರಾಜಮಾರ್ಗದಲ್ಲಿ ಶುದ್ಧ ಕನ್ನಡ ನಾಡನ್ನು ವರ್ಣಿಸುವಾಗ ಕೊಪಣನಗರವೂ ಅದರಲ್ಲಿ ಸೇರಿತ್ತೆಂದು ಹೇಳುತ್ತಾನೆ. ನೃಪತುಂಗನ ಕಾಲದ ಶ್ರೀವಿಜಯನ ಹೇಳಿಕೆಯಿಂದ ಜಿಲ್ಲೆಯಲ್ಲಿ ೨೦೦ ಬಸದಿಗಳಿದ್ದು. ಕೊಪಣನಗರದ ಸೀಮೆಯಲ್ಲಿ ಕನ್ನಡ ಸಾಹಿತ್ಯ ವಿಪುಲವಾಗಿ ಸೃಷ್ಟಿಯಾಗಿರ ಬಹುದೆಂದು ಊಹಿಸಬಹುದು. ಕವಿರಾಜಮಾರ್ಗಕಾರ ಈ ನಾಡವರನ್ನು ಕುರಿತು 'ಕುಜಿತೋದೆಯಂ ಕಾವ್ಯ ಪ್ರಯೋಗ ಪರಿಣತಿ ಮತಿಗಳ್' ಎಂಬ ಬಣ್ಣಿಸುವಾಗ ಇಲ್ಲಿ ಜನರು ಕುಳಿತು ಓದದೆಯೂ ಕಾವ್ಯವನ್ನು ಕಟ್ಟಬಲ್ಲರು ಎನ್ನುವ ಸಾಹಿತ್ಯ ಸೃಷ್ಟಿಯ ಹಿನ್ನೆಲೆಯ ಅರಿವಾಗುತ್ತದೆ. ಪಂಪನು ತನ್ನ ಪಂಪಭಾರತದಲ್ಲಿ ಈ ಮಾತಿಗೆ ಒಪ್ಪಿಗೆ ಸೂಚಿಸುವಂತೆ ರಾಜದ್ರಾಜಕ ಮೆನಿಸಿದ ಸಾಜದ 'ಪುಲಿಗೆಜೆಯ ತಿರುಳಕನ್ನಡದೊಳ್' ಎಂದಿದ್ದಾನೆ. ಹಾಗಾಗಿ ಇದು ಶುದ್ಧ ಕನ್ನಡ ನಾಡಾಗಿ ವಿಪುಲ ಸಾಹಿತ್ಯ ಸೃಷ್ಟಿಗೆ ಪ್ರಮುಖ ನೆಲೆಯಾಗಿತ್ತು ಎನ್ನುವುದು ಮಹತ್ವದ ಅಂಶವಾಗಿದೆ. ಶ್ರೀ ಕೂಪಣ, ತೀರ್ಥಕೊಪಣ ಮಹಾತೀರ್ಥಕೊಪಣಾದಿ ಹೀಗೆ ಹಲವಾರು ಹೆಸರುಗಳಿಂದ ಈ ಪ್ರದೇಶವನ್ನು ಬಣ್ಣಿಸಲಾಗಿದೆ. ಕವಿರತ್ನತ್ರಯರಲ್ಲಿ ಒಬ್ಬನಾದ ರನ್ನನು ತನ್ನ ಅಜಿತತೀರ್ಥ ಪುರಾಣ ತಿಲಕಂದಲ್ಲಿ ತನಗೆ ಆಶ್ರಯ ನೀಡಿದ ಅತ್ತಿಮಬ್ಬೆಯನ್ನು ಕುರಿತು.

ಬಳಿಯರಳೆಯಂತೆ ಗಂಗಾ
ಜಳದಂತೆ ಸುವಜಿತ ಸೇನ ಮುನಿ ಪತಿಯ ಗುಣಾ
ವಳಿಯಂತೆ ನೆಗಪ್ಪಿಕೊಪಣಾ

ಚಲದಂತೆ ಪವಿತ್ರ ಅತ್ತಿಮಬ್ಬೆಯ ಕುರಿತು(ಅಜಿತತೀರ್ಥ ಪುರಾಣ) ಎಂದು ಬಣ್ಣಿಸುವುದರ ಮೂಲಕ ಈ ಪ್ರದೇಶದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಈ ರೀತಿಯ ವರ್ಣನೆಗಳು ಕನ್ನಡ ಸಾಹಿತ್ಯದಲ್ಲಿಯೇ ಅಪರೂಪವಾಗಿ ನಿಲ್ಲುತ್ತವೆ. ಈ ಸ್ಥಳದ ಮಹಿಮೆಯನ್ನು ಕುರಿತು ಚಾವುಂಡರಾಯ ಪುರಾಣದಲ್ಲಿ

ಅಸಿಧಾರಾವ್ರತದಿಂದೆ ಪೆಂಪೆಸೆವಿನಂ ಮುಳ್ಗುಂದದೊಳ್
ನ್ಯಸನಕ್ಕೆಯ್ದೆ ನಿವೃತ್ತಿಗೈಯ್ದು ಕೊಪಣಾದ್ರೀಂದ್ರಕೆ ವಂದಾಗ ಮೊತ್ತ
ಸಮಾಧಾನ ವಿಧಾನದಿಂದ ಮುಡಿಸಿ ಮುಕ್ತಸ್ತಾನ
ಮಮುಂಚೆ ಸಾಧಿಸಿಕೊಂಡೊಳ್ಳು ಕುಮಾರಸೇನ ಮುನಿ
ಪಂಗಕ್ಕು ಪೆರಗ್ಗ್ಗಕ್ಕುಮೇ ಚಾವುಂಡರಾಯ ಪುರಾಣ(ಆದಿಪುರಾಣ)
ಎಂದಿದ್ದಾನೆ ಇದರಿಂದ ಕುಮಾರಸೇನ ಮುನಿಯ ಮುಳ್ಗುಂದದಲ್ಲಿ
ಸನ್ಯಸನ ನೃತವನ್ನು ಕೈಗೊಂಡು ಅಲ್ಲಿ ಸಮಾಧಾನ
ದೊರೆಯದ ಕಾರಣ ಕೊಪ್ಪಳ ಬೆಟ್ಟಕ್ಕೆ ಬಂದು ವ್ರತಗೈದು ಮುಕ್ತಿ
ಸಾಧಿಸಿಕೊಂಡನು ಎಂಬುದರ ಮಾಹಿತಿ ದೊರೆಯುತ್ತದೆ. ಈ
ಪ್ರದೇಶ ದ್ವೈತತ್ವದ ಕೇಂದ್ರವಾಗಿ ಪವಿತ್ರಸ್ಥಾನವಾಗಿ

ಎಷ್ಟು ಮಾಹಿತಿ ಪಡೆದಿತ್ತು ಎಂಬುದು ಈ ಸಾಹಿತ್ಯಕ ಹಿನ್ನೆಲೆಯಿಂದ ತಿಳಿದುಬರುತ್ತದೆ. ಸಾಹಿತ್ಯದಲ್ಲಿ ತಿಳಿಗನ್ನಡ ಪ್ರದೇಶವೆಂದು ಗುರುತಿಸಲ್ಪಟ್ಟ ಕೊಪ್ಪಳವು ವಿಭಿನ್ನ ಹೆಸರುಗಳಿಂದ ಕರೆಯಿಸಿಕೊಂಡಿದೆ ಒಂದು ಕಾಲದಲ್ಲಿ ಪುಲಿಗೆರೆಯ ತಿರುಳ್ಗನ್ನಡದ ನಾಡೆಂದು ಈ ಪ್ರದೇಶವನ್ನು ಗುರುತಿಸಿದ್ದಾರೆ. ಕ್ರಿ.ಶ. ೯ನೇ ಶತಮಾನ ಕವಿರಾಜಮಾರ್ಗ ಕಾವ್ಯದಲ್ಲಿ

ಅದರೊಳಗಂ ಕಿಸುವೊಳಲಾ
ವಿದಿತಮಹಾ ಕೊಪಣನಗರದಾ ಪುಲಿಗೆರೆಯಾ
ಸದಭಿಸ್ತುತ ಮಪ್ಪಂ ಕುಂದದಂ
ದದ ನಡುವಣ ನಾಡೆ, ನಾಡೆ ಕನ್ನಡದ ತಿರುಳ್

ಕೊಪ್ಪಳ ನಗರವು ಪುಲಿಗೆರೆಯ ತಿರುಳ್ಗನ್ನಡ ನಾಡಲ್ಲಿ ಸೇರಿಕೊಂಡಿತ್ತು ಎಂಬುವುದರ ಸ್ಪಷ್ಟವಾದ ಉಲ್ಲೇಖವಿದೆ.[೧೦]

ಹೈದರಾಬಾದ್ ಕರ್ನಾಟಕ ಪ್ರಾಕೃತಿಕ ಸಂಪತ್ತನ್ನು ಹೊಂದಿದಂತೆ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂಪತ್ತನ್ನು ಹೊಂದಿ, ಶ್ರೀಮಂತ ಪರಂಪರೆ ಹೊಂದಿದೆ. ಕನ್ನಡದ ಆದಿ ಗ್ರಂಥಗಳಾದ ವಡ್ಡಾರಾಧನೆ, ಕವಿರಾಜಮಾರ್ಗ ರಚನೆಗೊಂಡಿದ್ದು ಇಲ್ಲಿಯವರಿಂದ. ಪಂಪನ ಕಾವ್ಯಕ್ಕೆ ಆಶ್ರಯ ದೊರಕಿದ್ದು ಇಲ್ಲಿಯ ಸಾಮಂತ ಅರಸ ಅರಿಕೇಸರಿಯಿಂದ. ಕವಿ ಚಕ್ರವರ್ತಿಗಳಾದ ಪೊನ್ನ, ರನ್ನರು ಆಶ್ರಯ ಪಡೆದದ್ದು ಇಲ್ಲಿಯ ಚಕ್ರವರ್ತಿಗಳಲ್ಲಿ. ಅಭಿನವ ಪಂಪ ನಾಗಚಂದ್ರನು ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಕುಳಗೇರಿಯವನೆಂದು ಹೊಸ ಶೋಧಗಳು ತಿಳಿಸುತ್ತವೆ. ಟಿ.ಎಸ್. ವೆಂಕಣ್ಣಯ್ಯ ನವರು ಕನ್ನಡದಲ್ಲಿ ಬೌದ್ಧ ಸಾಹಿತ್ಯವಿದ್ದಿರಬೇಕೆಂದು ಊಹಿಸಿದ್ದು ಸರಿಯಾದರೆ, ಅದು ಈ

ಪ್ರದೇಶವನ್ನು ಗಮನಿಸಿ ಹೇಳಿದ್ದಾಗಿದೆ. ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ, ಜಿಲ್ಲಾ ಕೇಂದ್ರ ಕೊಪ್ಪಳದಲ್ಲಿ ಕ್ರಿ.ಶ.ಪೂ. ಮೂರನೆಯ ಶತಮಾನದ ಅಶೋಕ ಶಾಸನಗಳು ದೊರಕಿವೆ. ಕೊಪ್ಪಳಕ್ಕೆ ಹೊಂದಿಕೊಂಡು ಬಿಚ್ಚುಕುಂದಿ ಗ್ರಾಮಬೌದ್ಧ ಬಿಕ್ಕುಗಳು ಗ್ರಾಮಕ್ಕೆ ಬಂದಿದ್ದರೆಂದು ಕೊಪ್ಪಳ ಜಿಲ್ಲೆಯ ಶಾಸನ ಸಂಪುಟಗಳ ಪ್ರಸ್ತಾವನೆಯಲ್ಲಿ ಪ್ರಸ್ತಾಪಗೊಂಡಿದೆ. ವಚನ ಸಾಹಿತ್ಯ, ದಾಸಸಾಹಿತ್ಯ, ತತ್ವಪದ ಸಾಹಿತ್ಯ, ಸ್ವರ ವಚನ ಸಾಹಿತ್ಯ ಹಾಗೂ ಇಲ್ಲಿಯೇ ಉಗಮಗೊಂಡು, ವಿಕಾಸಗೊಂಡು ಮೈದುಂಬಿ ಬೆಳೆದವು. ತತ್ವಪದಕಾರರು ಹೇರಳವಾಗಿ ಸಾಹಿತ್ಯ ರಚಿಸಿದ್ದು ಈ ಭಾಗದಲ್ಲಿ ಬೇರೆ ಕಡೆಗೆ ಸಿಗುವಷ್ಟು ಪುರಾಣಕಾರರು ಇಲ್ಲಿ ಆಗಿ ಹೋಗಿದ್ದಾರೆ. ಹೊಸಗನ್ನಡ ಸಾಹಿತ್ಯದಲ್ಲಿ ಡ್ಯಾಂಪುರಿನ ಚನ್ನ ಕವಿಗಳು, ಕಲ್ಲಿನಾಥಶಾಸ್ತ್ರಿಗಳು, ಹೇರೂರು ವಿರೂಪನಗೌಡರು, ಜಯರಾಮಚಾರ್ಯ ಮಾಳಗಿ ಮುಂತಾದವರನ್ನು ನೆನೆಯಬಹುದು, ಚನ್ನ ಕವಿಗಳಿಂದ ವಿರಚಿತ ಹಾಲಕೇರಿ ಅನ್ನದಾನ ಸ್ವಾಮಿಪುರಾಣ, ಮುಳುಗುಂದ ಬಾಲಾಲೀಲಾ ಮಹಾಂತಸ್ವಾಮಿ ಪುರಾಣ, ಇಲಕಲ್ ವಿಜಯ ಮಹಾಂತೇಶ ಪುರಾಣಗಳು ನಾಡಿನ ಮಠಗಳಲ್ಲಿ ಪ್ರವಚನ ಮಾಡಲಾಗುತ್ತಿದೆ. ಸ್ವಾತಂತ್ರ್ಯಪೂರ್ವದಲ್ಲಿ ಜಯರಾಯಚಾರ್ಯ ಮಾಳಗಿಯವರು ಕೀರ್ತನೆಗಳನ್ನು ರಚಿಸುತ್ತ ಹಾಡುತ್ತ ಜನಗಳಲ್ಲಿ ರಾಷ್ಟ್ರ ಪ್ರಜ್ಞೆ ಜಾಗೃತಗೊಳಿಸಲು ಮಹಾಭಾರತದ ಕತೆ ಉಪಕತೆಗಳನ್ನು ಹೇಳುತ್ತ ನೆಹರೂ, ಗಾಂಧೀಜಿಯವರ ತತ್ವಗಳನ್ನು ಬಿತ್ತುತ್ತಿದ್ದರು. ನಂತರದಲ್ಲಿ ಕನ್ನಡ ಸಾಹಿತ್ಯದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ.

ಕಾವ್ಯಾನಂದರು ತಮ್ಮ ಸರ್ಕಾರಿ ಜನಸೇವೆಯೊಂದಿಗೆ ಕಾವ್ಯ ನಾಟಕ ಬರೆಯುವುದರಲ್ಲಿ ತೊಡಗಿಕೊಂಡವರು. ಶರಣ ಚರಿತಾಮೃತ ಕರುಣಾಶ್ರವಣ, ರಜತರೇಖೆ, ಕಲ್ಲೋಲ ಮಾಲೆ, ಚರಗ ಮುಂತಾದ ಕಾವ್ಯಗಳನ್ನು ಕೊಟ್ಟರು. ಪಂಚಾಕ್ಷರಿ ಹೀರೆಮಠ, ದೇವೇಂದ್ರಕುಮಾರ ಹಕಾರಿವರು ಗಟ್ಟಿಯಾದ ಕಾವ್ಯ, ಕತೆ, ಕಾದಂಬರಿಗಳನ್ನು ಬರೆದರು.

ನಾ.ಭಾ.ಶಾಸ್ತ್ರೀ ಕೊಪ್ಪಳದ ಅಶೋಕ ಶಾಸನಗಳನ್ನು ಪತ್ತೆ ಹಚ್ಚಿದ್ದರೆ, ಬಿ.ವ್ಹಿ.ಶಿರೂರ ಅವರ ಸಂಶೋಧನೆಯಲ್ಲಿ ತೊಡಗಿಕೊಂಡಿದ್ದಾರೆ. ವೀಣಾ ಯಲಬುರ್ಗಾ ವಿರೂಪಾಕ್ಷಪ್ಪ ಕೋರಗಲ್, ಮಲ್ಲಿಕಾರ್ಜುನ ಹಿರೇಮಠ, ಲಲಿತಾ ದೇಮಶೆಟ್ಟಿ, ಶ್ರೀನಿವಾಸ ಕುಲಕರ್ಣಿ, ಶಾಂತಾಬಸವರಾಜ, ವಿಮಲಾ ಇನಾಮದಾರ, ಶರಣಪ್ಪ ವಡಿಗೇರಿ ಮುಂತಾದವರು.[೧೧] ಕಥೆ, ಕಾದಂಬರಿಕಾರರು ಇಲ್ಲಿಯವರೇ ಅಲ್ಲಮಪ್ರಭು ಬೆಟ್ಟದೂರು, ಗವಿಸಿದ್ದ ಬಳ್ಳಾರಿ, ವಿಠ್ಠಪ್ಪ, ಗೋರಂಟ್ಲೆ ಪ್ರಹ್ಲಾದ ಬೆಟಗೇರಿ, ಸೂರ್ಯಕಾಂತ ಗುಣಿಕಿಮಠ, ವೀರಣ್ಣಾ ವಾಲಿಸಿದ್ದರಾಮ ಹಿರೇಮಠ ಟಿ.ಕೆ. ಗಂಗಾಧರ, ಮಹಾಂತೇಶ ಮಲ್ಲನಗೌಡರ, ಭರಮಪ್ಪ, ಚಿಲಗೋಡೆ, ಕೆ.ವಿ. ಬ್ಯಾಳಿ ಅಂದಾನಪ್ಪ ಬೆನಕಲ್, ಈರಪ್ಪ ಕಂಬಳಿ ಮುಂತಾದ ಬರಹಗಾರರ ದೊಡ್ಡ ಬಳಗವೇ ಇಲ್ಲಿದೆ. ಸುಂದರ ಅನುವಾದಕರಾದ ಟಿ.ವ್ಹಿ. ಮಾಗಳದ, ವಿಚಾರವಾದಿ ಎಂ.ಎ. ಮದರಿ ತಮ್ಮ ಮಹತ್ವದ ಲೇಖನಗಳ ಮೂಲಕ ಖ್ಯಾತರಾದ ಶ್ರೀ ಎಚ್.ಎಸ್. ಪಾಟೀಲ್, ಲಕ್ಷ್ಮಣ ಅಳವಂಡಿ ಯುವಕರ ಸಂಘಟನಾ ಶಕ್ತಿಯಾದ ಶ್ರೀ ಗವಿಸಿದ್ದ ಕೊಪ್ಪಳ, ಮಹಾತೇಶ ಕೋತಬಾಳ್, ಶಂ.ನಂ. ತಿಮ್ಮನಗೌಡ ಮುಂತಾದವರನ್ನು ಹೆಸರಿಸಬೇಕು. ಗವೀಶ ಹಿರೇಮಠ, ಅನ್ನದಾನಿ ಹಿರೇಮಠ, ಕಂಬಾಳಿ ಮಠ, ಬಿ.ಸಿ. ಪಾಟೀಲ್ ಮುಂತಾದವರ ಕೃತಿಗಳ ಕೊಪ್ಪಳ ಜಿಲ್ಲೆಯಲ್ಲಿ ಸಾಹಿತ್ಯವನ್ನು ಗುರುತಿಸಬಹುದು. ಒಂದು ನಗರ

ಮಹತ್ವ ಪೂರ್ಣವಾದ ಸ್ಥಳವಾಗುವುದಕ್ಕೆ ಐತಿಹಾಸಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವೇ ಕಾರಣವಾಗುತ್ತದೆ. ಈ ಕಾರಣಗಳಿಂದಲೇ ಕರ್ನಾಟಕದ ನೂತನ ಜಿಲ್ಲೆಗಳಲ್ಲಿ ಕೊಪ್ಪಳ ಜಿಲ್ಲೆ ಸಾಹಿತ್ಯಗಳಲ್ಲಿ ಮಹತ್ವಪೂರ್ಣ ಜಿಲ್ಲೆಯಾಗಿ ಗುರುತಿಸಿಕೊಂಡಿದೆ.

**ಅಡಿಟಿಪ್ಪಣಿಗಳು**

೧. ನಿಂಗಪ್ಪ., ೨೦೦೯, **ಕೊಪ್ಪಳ ಜಿಲ್ಲೆಯ ದೈವಗಳು: ಜಾನಪದೀಯ ಅಧ್ಯಯನ**(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೨೯.

೨. ಪಾಟೀಲ್ ಎಚ್.ಎಸ್., ೨೦೧೦, **ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ,** ಕೊಪ್ಪಳ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ, ಪುಟ ೨.

೩. ಅದೇ., ಪುಟ ೩.

೪. ಅದೇ., ಪುಟ ೨.

೫. ಅದೇ., ಪುಟ ೪.

೬. ನಿಂಗಪ್ಪ., ೨೦೦೯, **ಪೂರ್ವೋಕ್ತ,** ಪುಟ ೩೯.

೭. ಪಾಟೀಲ್ ಎಚ್.ಎಸ್., ೨೦೧೦, **ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ,** ಕೊಪ್ಪಳ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ, ಪುಟ ೨.

೮. ಅದೇ., ಪುಟ ೫.

೯. ಅದೇ., ಪುಟ ೮–೯.

೧೦. ನಿಂಗಪ್ಪ., ೨೦೦೯, **ಕೊಪ್ಪಳ ಜಿಲ್ಲೆಯ ದೈವಗಳು: ಜಾನಪದೀಯ ಅಧ್ಯಯನ**(ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ ೫೫–೫೬.

೧೧. ಪಾಟೀಲ್ ಎಚ್.ಎಸ್., ೨೦೧೦, **ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ,** ಕೊಪ್ಪಳ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ, ಪುಟ ೪೬.

□□

ಅಧ್ಯಾಯ : ಮೂರು

# ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ : ಸ್ಥೂಲ ನೋಟ

ಸಂಸ್ಕೃತಿಯ ತಾಯಿಬೇರಾದ ಜಾನಪದ ಬಗೆಗೆ ಭಾರತದಲ್ಲಿ ನಿರ್ಲಕ್ಷ್ಯವೇ ಹೆಚ್ಚಾಗಿದ್ದು ಈವರೆಗೆ ನಡೆದಿರುವ ಸಂಗ್ರಹ ಕಾರ್ಯ ಬಹುಶಃ ಅಸಮಗ್ರವೆನಿಸಿದೆ. ರಾಷ್ಟ್ರದ ಅನೇಕ ರಾಜ್ಯಗಳಲ್ಲಿ ಜಾನಪದ ಪ್ರಕಾರಗಳಿವೆ. ಅದಕ್ಕೆ ಸಂಬಂಧಿಸಿದಂತೆ ಸಂಶೋಧನೆಗಳು ನಡೆದಿದ್ದರೂ ಸಮಗ್ರ ಜಾನಪದದ ಬಗೆಗೆ ವ್ಯಾಪಕವಾದ ವೈಜ್ಞಾನಿಕವಾದ ಕಾರ್ಯ ಇನ್ನೂ ಆಗಬೇಕಾಗಿದೆ.[೧]

ಯಾವುದೇ ಭಾಷೆಯಲ್ಲಾದರೂ ಸಾಹಿತ್ಯ ಮೊದಲು ಮೂಡಿಬರುವುದು ಜನತೆಯ ಆಡುನುಡಿಯಲ್ಲಿ, ಜನತೆಯ ಅಥವಾ ಜನಪದ ಸಮಷ್ಟಿ ಭಾವನೆಯಲ್ಲಿ ರೂಪುಗೊಂಡು, ಸಾಹಿತ್ಯವು ಸಂಸ್ಕಾರಗೊಂಡು ಸಾಹಿತ್ಯ ಗ್ರಂಥಸ್ಥವಾಗುತ್ತದೆ. ಜನಸಮುದಾಯದಲ್ಲಿ ರೂಢಮೂಲವಾದ ಭಾವನೆಗಳು, ನಡವಳಿಕೆ, ನಂಬಿಕೆ, ರೀತಿನೀತಿ, ಆಚಾರ, ವಿಚಾರ ಪದ್ಧತಿಗಳು ತಲೆಮಾರಿನಿಂದ ತಲೆಮಾರಿಗೆ ಪರಂಪರೆಯಾಗಿ ಹರಿದುಬರುತ್ತದೆ.[೨] ಪರಂಪರೆಯಿಂದ ಬಂದಿರುವ ನಮ್ಮ ಜನಪದ ಸಾಹಿತ್ಯದ ಕರ್ತೃಗಳಾರೆಂಬುದು ಗೊತ್ತಾಗುವುದಿಲ್ಲ. ರಚನೆಯ ಕಾಲದೇಶ ಒಡೆಯ ಈ ಅರ್ಥ ಶ್ರೀವಿಜಯನು ಹೇಳಿದ.

> ಕಾವೇರಿಯಿಂದಮಂಗೋ
> ದಾವರಿವರ ಮಿರ್ಧನಾಡದಾ ಕನ್ನಡದೋಳ್
> ಭಾವಿಸಿದ ಜನಪದಂ ವಸು
> ಧಾವಳಯ ವಿಲೀನ ವಿಶದ ವಿಷಯ ವಿಶೇಷಂ[೩]

ಎಂಬ ಪದ್ಯದಲ್ಲಿ ಜನಪದ ಎಂಬ ಶಬ್ದವನ್ನು ದೇಶ ಎಂಬ ಅರ್ಥದಲ್ಲಿಯೇ ಬಳಸಿರುವನು. ಆದಿಕವಿ ಪಂಪನು 'ದೇಸಿಯೋಳ್ ಪೋಗುವುದು ಪೊಕ್ಕುಮಾರ್ಗದೋಳ್ ತಳ್ವದು' ಎನ್ನುವನು. ದೇಶಿಯೋಳ್ ಎಂಬ ಶಬ್ದ ಜನಪದ ಅರ್ಥದಲ್ಲಿಯೇ ಬಳಸಿದ್ದು ಕಂಡುಬರುತ್ತದೆ. ಆದ್ದರಿಂದ ಪಂಪನು ಇಲ್ಲಿ ಜನಪದದ ಗುಣವನ್ನು ಪ್ರಶಂಸಿಸಿದ್ದಾನೆ. ಹಾಗೆಯೇ ಆಧುನಿಕ ಕನ್ನಡ ಸಾಹಿತ್ಯವನ್ನು ತೆಗೆದುಕೊಂಡಾಗ ಕನ್ನಡದ ಕಣ್ವ ಬಿ.ಎಂ.ಶ್ರೀಯವರು ಗರತಿಹಾಡು ಕೃತಿಗೆ ಮುನ್ನುಡಿ ಬರೆಯುವಾಗ ಜನವಾಣಿ ಬೇರು ಕವಿವಾಣಿ ಹೂ ಎಂದು ಜನಪದ ಮಹಿಮೆಯನ್ನು ಒತ್ತಿ ಹೇಳಿದ್ದಾರೆ. ಇದು ಶಿಷ್ಟಸಾಹಿತ್ಯದ ಕಾವ್ಯದ ಪ್ರಪಂಚಕ್ಕೆ ಜನಪದವೇ ಮೂಲವೆಂಬುದನ್ನು ಖಚಿತಪಡಿಸುತ್ತದೆ.

ಹೀಗೆ ಆದಿಕಾಲದಿಂದ ಜನರಲ್ಲಿ ಬೇರುಬಿಟ್ಟಿದ್ದ ಜನಪದವನ್ನು ಪೂರ್ವ ಮತ್ತು ನಂತರದ ಕಾಲದಲ್ಲಿ ಜನಪದ ಕಾವ್ಯಗಳನ್ನು ಸಂಗ್ರಹಿಸುವಲ್ಲಿ ಕೆಲವರು ವಿದ್ವಾಂಸರು ಒಲವು ತೋರಿದರು. ಇದರಿಂದ ಸ್ವಾತಂತ್ರ್ಯೋತ್ತರ ಸಮಯದಲ್ಲಿ ಜನಪದ ಕಾವ್ಯವು ಹೆಮ್ಮರವಾಗಿ ಎಲ್ಲೆಡೆಯೂ ಬೆಳೆಯಲಾರಂಭಿಸಿತು. ಈ ಸಂದರ್ಭದಲ್ಲಿ ಜನಪದ ಕಾವ್ಯಗಳಾದ ಮಲೆಮಹದೇಶ್ವರಸ್ವಾಮಿ, ಮಂಟೇಸ್ವಾಮಿ, ಜುಂಜಪ್ಪನ ಕಥೆ, ಎಲ್ಲಮ್ಮನ ಕಥೆ, ಮದಗದ ಕೆಂಚಮ್ಮಳ ಕಥೆ, ಮೈಲಾರಲಿಂಗ ಸ್ವಾಮಿ ಕಥೆ ಮುಂತಾದ ಜನಪದಕಾವ್ಯ ಮತ್ತು ಕಾವ್ಯಗಳ ಬಳಕೆಗೆ ಬಂದು ಬೆಳೆದು ನಿಂತವು. ಸಂಗ್ರಹಕಾರ್ಯದಿಂದ ಆರಂಭವಾದ ಈ ಸಾಹಿತ್ಯವನ್ನು ಸಂಶೋಧನ ಮಾಡುವ ಕಡೆಗೆ ವಿದ್ವಾಂಸರ ಗಮನಹರಿಯಿತು.

ಆ ದೃಷ್ಟಿಯಿಂದಲೇ ಡಾ. ಬಿ.ಎಸ್. ಗದ್ದಗಿಮಠರು 'ಕನ್ನಡ ಜನಪದ ಗೀತೆಗಳು' ಎಂಬ ವಿಷಯವನ್ನು ಆಯ್ದುಕೊಂಡು ಜನಪದ ಸಾಹಿತ್ಯದಲ್ಲಿ ಮೊದಲು ಪಿಎಚ್.ಡಿ ಪದವಿ ಪಡೆದುಕೊಂಡರು. ಈ ಹಿನ್ನೆಲೆಯಲ್ಲಿ ಜಾನಪದ ಸಾಹಿತ್ಯವು ಸಂಗ್ರಹ ಮತ್ತು ಸಂಶೋಧನೆಯೊಂದಿಗೆ ಬೆಳೆದು ಬಂದಿತು. ಜಾನಪದ ಎಂಬ ಬಗ್ಗೆ ಅನೇಕ ವಿದ್ವಾಂಸರು ತಮ್ಮ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳನ್ನು ಕೆಲವು ಇಲ್ಲಿ ನೋಡಬಹುದಾಗಿದೆ :

೧. ಜನವಾಣಿ ಬೇರು ಕವಿವಾಣಿ ಹೂವು - ಬಿ.ಎಂ. ಶ್ರೀಕಂಠಯ್ಯ

೨. ಸಂಪ್ರದಾಯವನ್ನು ಕುರಿತ ವಿಜ್ಞಾನವೇ ಜಾನಪದ - ಹಾ.ಮಾ. ನಾಯಕ

೩. ಯಾವುದೇ ಒಂದು ವಿಷಯ ಬಾಯಿಂದ ಬಾಯಿಗೆ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದು ಬದುಕಿನಲ್ಲಿ ಅಳವಡಿಸಿಕೊಂಡಿರುವಂಥದ್ದು ಜಾನಪದ - ಎಂ.ಎಸ್. ಲಠ್ಠೆ

೪. ಸಂಪ್ರದಾಯವನ್ನು ಕುರಿತು ವಿಷಯಗಳನ್ನು ಅಧ್ಯಯನ ಮಾಡುವ ಜ್ಞಾನವೇ ಜಾನಪದ - ಜೋನಾಸ್ ಬೇಲಿಸ್

೫. ಯಾವುದೇ ವಸ್ತು, ವ್ಯಕ್ತಿ, ಸಮೂಹ ಸಮಯ ಅಥವಾ ಸ್ಥಳದಲ್ಲಿ ಜಾನಪದ ಕಾಣಿಸಿ ಕೊಳ್ಳಬಹುದು - ಎ. ಹಾರ್ಮೋನ್

೬. ಆಡುವ ಮಾತನ್ನು ಹೇಳುವ ಕಥೆಗಳು ಗಾದೆಗಳು ಹೇಳಿಕೆಗಳು ಮಂತ್ರೋಚ್ಚಾರಣೆಗಳು ಹಾಡುಗಳು ಮಾಟಗಾರಿಕೆಯ ಮಾತುಗಳು ಇಂಥ ಮತ್ತಿತರ ಸೂತ್ರಗಳು ಮುಂತಾದವುಗಳಿಂದ ಕೂಡಿದ ಕಲಾರೂಪವೆ ಜಾನಪದ - ರಿಚರ್ಡ್ ಎವಾಟರ್‌ಮಾನ್

೭. ಜಾನಪದವು ಕರ್ತೃವಿಲ್ಲದ ಪರಂಪರಾನುಗತ ವಸ್ತುಗಳನ್ನು ತಲೆಮಾರಿಗೆ ಹಸ್ತಾಂತರಿಸುತ್ತದೆ ಜಾನಪದ-ಅರ್ಚರ್ ಟೇಯ್ಲರ್

ಜಾನಪದ ಅರ್ಥ ವ್ಯಾಪ್ತಿ ಸಾಕಷ್ಟು ವ್ಯಾಪಕವಾದ ಪ್ರಾಚುರ್ಯವನ್ನು ಪಡೆದುಕೊಂಡು ಬಳಕೆಯಾಗುತ್ತಿವೆ. ಹೀಗಾಗಿ ಜಾನಪದ ಎಲ್ಲ ರೀತಿಯ ಜನ ಜೀವನದ ಎಲ್ಲ ರಂಗಗಳಿಗೂ ವ್ಯಾಪಿಸಿದೆ.

ಜಾನಪದ ಕಲೆಗಳಿಗೆ ಹಾಗೂ ಜಾನಪದಕ್ಕೆ ಹೈದರಾಬಾದ ಕರ್ನಾಟಕ ಕಣಜವಾಗಿದೆ. ಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಮತಿಗಳ್ ಎಂಬ ಕವಿರಾಜಮಾರ್ಗಕಾರನು ಇಲ್ಲಿಯ ಜಾನಪದ ಸಾಹಿತ್ಯ ರಚನೆಯನ್ನು ಕುರಿತು ಹೇಳಿದ್ದಾನೆ. ಇಲ್ಲಿಯ ೧೯೮೦ರಲ್ಲಿ ಆರಂಭಗೊಂಡ ಜಾನಪದ ಅಧ್ಯಯನ ಮೂರು ದಶಕಗಳಲ್ಲಿ ಸಾಕಷ್ಟು ಬೆಳೆದಿದೆ. ನಮ್ಮ ಭಾಗದ ಆರಂಭಿಕ ಸಾಹಿತಿಗಳು, ಸಂಶೋಧಕರು, ವಿದ್ವಾಂಸರು ಜಾನಪದ ಅಧ್ಯಯನಕ್ಕೆ ಗಮನ ನೀಡಲಿಲ್ಲ. ಜನಪದ ಸಾಹಿತ್ಯವೆಂದರೆ ಓದು ಬರಹ ಬಾರದ ಅವಿದ್ಯಾವಂತರ ಸಾಹಿತ್ಯವೆಂದು ಉಪೇಕ್ಷೆ ಮಾಡಿದರು.

ಜಾನಪದ ಸಾಹಿತ್ಯ, ಕಲೆಗಳು ಕೊಪ್ಪಳ ಜಿಲ್ಲೆಯಲ್ಲಿ ಅಪಾರವಾಗಿವೆ. ಜಾನಪದದಲ್ಲಿ ಇಲ್ಲದ ವಿಷಯ ವಸ್ತುಗಳಿಲ್ಲ; ಎಲ್ಲವೂ ಇದರಲ್ಲಿ ಅಡಕವಾಗಿದೆ. ಜಿಲ್ಲೆಯ ಜನಪದ ಸಾಹಿತ್ಯವನ್ನು ಗದ್ಯ, ಪದ್ಯ, ಮಿಶ್ರಸಾಹಿತ್ಯ ಎಂಬ ಮೂರು ನೆಲೆಯಲ್ಲಿ ವರ್ಗೀಕರಿಸಬಹುದಾಗಿದೆ. ಇವುಗಳನ್ನು ಆಯಾ ಕಾಲ, ದೇಶ, ಪರಿಸರ ಸಂದರ್ಭಾನುಸಾರವಾಗಿ ಅಧ್ಯಯನ ಮಾಡಬಹುದಾಗಿದೆ. ಪ್ರತಿಯೊಂದು ಹಳ್ಳಿ-ಊರುಗಳಲ್ಲಿ ಜನರ ಜೀವನದಲ್ಲಿ ಬರುವ ಪ್ರತಿಯೊಂದು ಆಸರಿಕೆ-ಬೇಸರಿಕೆ, ಬೇಡಗಳಿಗೆ, ನಿರಾಶೆ-ನೋವು, ದುಃಖ ಸಂತೋಷಗಳಿಗೆ ಜನಪದ ಸಾಹಿತ್ಯ ಕಲೆಗಳ ಕನ್ನೆ ನೆಲವೇ ಇದೆ. ಜನಪದ ಉಸಿರಾಗಿ ತಮ್ಮ ಅನುಭವದ ನೆಲೆಯಿಂದ ಮೌಖಿಕವಾಗಿ ಬಂದುದು ಜನಪದ ಸಾಹಿತ್ಯವಾಗಿದೆ. ಕಥನ ಕಾವ್ಯಗಳಾದ ಬೀರಪ್ಪನ ಹಾಡುಗಳು, ಕಾಳಿಂಗರಾಯನ ಹಾಡುಗಳು, ಕೊಪ್ಪಳ ಗವಿಸಿದ್ದೇಶ್ವರನ ಹಾಡು, ಕುಮಾರರಾಮನ ಹಾಡುಗಳು, ಮಳೇಮಲ್ಲೇಶ್ವರನ ಹಾಡು, ಮಹಾಮಾಯಿ ಹಾಡು, ಹುದ್ನೇಶ್ವರ ಹಾಡು, ಮೊಲ್ಲೆಬೊಮ್ಮಯ್ಯನ ಸಾಂಗತ್ಯ ಹಾಡು ಜಿಲ್ಲೆಯ ಜನಪ್ರಿಯ ಕಥನ ಕಾವ್ಯಗಳಾಗಿವೆ. ಇವುಗಳಲ್ಲದೇ ನೂರಾರು ಕಥನ ಕಾವ್ಯಗಳ ಸಂಗ್ರಹ ನಡೆಯಬೇಕಿದೆ, ಮೊಹರಂ ಪದಗಳು, ಜೀಪದಗಳು, ಹಂತಿ ಹಾಡುಗಳು, ಹೋಳಿ ಹಾಡುಗಳು, ಗೀಗೀ ಪದಗಳು, ಡೊಳ್ಳಿನ ಹಾಡುಗಳು, ಗೊಂದಲಿಗರ ಹಾಡುಗಳು, ಕೋಲಾಟದ ಹಾಡುಗಳು ಸಾಕಷ್ಟು ದೊರೆತಿವೆ.[೪]

ಅಳಿವಿನ ಅಂಚಿನಲ್ಲಿರುವ ಈ ಹಾಡುಗಳನ್ನು ಉಳಿಸಬೇಕಾಗಿದೆ. ಜನಪದ ಕಥೆಗಳು, ಬಯಲಾಟ, ಸಣ್ಣಾಟ, ಡಪ್ಪಿನಾಟ, ಶರಣರ ಚರಿತ್ರೆ, ಮಹಾಭಾರತ, ರಾಮಾಯಣಗಳನ್ನು ವರ್ಷದಲ್ಲಿ ಆಯಾ ಸಂದರ್ಭದಲ್ಲಿ ಆಡುವುದು ಇಲ್ಲಿನ ಜನರ ಹವ್ಯಾಸವಾಗಿದೆ. ಹೆಣ್ಣುಮಕ್ಕಳ ಹಾಡುಗಳು, ಮದುವೆ ಹಾಡು, ಒಲಕಲ್ಲ ಪದ, ತೊಟ್ಟಿಲು ಪದ, ಆರತಿ ಪದ, ಅರಿಶಿಣ ಹಚ್ಚುವ ಪದಕೋಲು ವಿಶೇಷವಾಗಿ ದೊರೆಯುತ್ತವೆ. ಒಗಟುಕಲೆ, ಶಿಶುಪ್ರಾಸ, ಒಡಪು, ಗಾದೆಗಳು, ನುಡಿಗಟ್ಟುಗಳು ಆಯಾ ಸಂದರ್ಭಾನುಸಾರವಾಗಿ ಮೂಡಿಬರುತ್ತವೆ. ಒಕ್ಕಲುತನದ ಉತ್ತುವ, ಬಿತ್ತುವ, ಹೊಲದಲ್ಲಿ ಕೃಷಿಕನ ಕೆಲಸಗಳ ನಡುವೆ ಸಸಿ ನೆಡುವ, ಕೊಯ್ಯುವ ಹಾಡುಗಳು ದೊರಕಿವೆ. ಎಲ್ಲ ಜನಪದ ಹಾಡು ಪದ ಸಾಹಿತ್ಯಗಳ ರಚನೆ ಮೌಖಿಕವಾಗಿವೆ.

ಕುಣಿತಗಳು ಎಂದೇ ಪ್ರಸಿದ್ಧವಾದ ಡೊಳ್ಳು ಕುಣಿತ, ಹುಲಿವೇಶ, ಹೆಜ್ಜೆ ಕುಣಿತ, ಕೋಲಾಟ, ಕವಲೆತ್ತಿನವರು ಕರಡಿ ಮಂಜಲು, ನಂದಿಕೋಲು ಕುಣಿತಗಳು ಬಹು ಆಕರ್ಷಕವಾಗಿ ಇಲ್ಲಿ ಪ್ರದರ್ಶನಗೊಳ್ಳುತ್ತಿವೆ. ಅನೇಕ ಸಂಪ್ರದಾಯ, ಆಚರಣೆ, ಹಬ್ಬ, ಉತ್ಸವ, ಜನಪದ ಕ್ರೀಡೆಗಳು ಹತ್ತು ಹಲವು ಮೈದಾಳಿ ನಿಂತಿವೆ. ಇವುಗಳಿಂದ ಜನಪದ ಸಾಹಿತ್ಯ ಕಲೆ ಜಿಲ್ಲೆಯಲ್ಲಿ ಶ್ರೀಮಂತಗೊಂಡಿದೆ.[೫]

ಜಾನಪದ ಸಂಪತ್ತು ಈ ಜಿಲ್ಲೆಯಲ್ಲಿ ಸಮೃದ್ಧವಾಗಿದೆ. ಸಮಸ್ತ ಜೀವನ ವಿಧಿವಿಧಾನಗಳನ್ನೊಳಗೊಂಡು ತಲೆಮಾರಿನಿಂದ ತಲೆಮಾರಿಗೆ ಸಂಸ್ಕೃತಿಯ ವಾಹಕವಾಗಿದೆ. ಸಹಜ ಬದುಕಿನ ಸೌಂದರ್ಯ ಒಳಗೊಂಡಿದೆ. ಜೀವನಾನುಭವವೇ ಮೈವೆತ್ತು ಬದುಕಿನ ಸಂದೇಶವನ್ನು ಸಾರುವ ತತ್ವಗಳಾಗಿವೆ. ಶಿಷ್ಟ ಸಾಹಿತಿಗಳಿಗೆ ಕಲಾವಿದರಿಗೆ ಸನ್ಮಾನ ಮಾಡಿದ ಸಂಗತಿಗಳು ವಿಪುಲವಾಗಿ ದೊರಕಿವೆ. ಶಿಷ್ಟ ಸಾಹಿತ್ಯಕ್ಕೆ ತಾಯಿ ಬೇರಿನಂತಿರುವ ಜಾನಪದ ಎಲೆಮರೆಯ ಹೂವಿನಂತೆ ಪರಿಮಳ ಸೂಸಿ ವಾತಾವರಣವನ್ನು ಶುದ್ಧೀಕರಿಸಿದಂತೆ ಇಡೀ ಸಮಾಜವನ್ನು ತಮ್ಮ ಕಾಯಕ ನಿಷ್ಠೆಯಿಂದ ಉದ್ದೀಪನಗೊಳಿಸಿದ ಸಂಗತಿಗಳು ಎಲಸಮರೆ ಕಾಯಿಯಂತಿವೆ.

ಒಂದು ಸಮುದಾಯದ ಆಚಾರ-ವಿಚಾರ, ರೂಢಿ, ಸಂಪ್ರದಾಯ, ಪರಂಪರೆ ಸಂಬಂಧಗಳನ್ನು ತಿಳಿಯಬೇಕಾದರೆ, ಜನಪದ ಕಲೆಗಳ ಮೂಲಕ್ಕೆ ಹೋಗುವುದು ಅನಿವಾರ್ಯವಾಗಿದೆ. ನಮ್ಮ ಸಂಸ್ಕೃತಿ ಪರಂಪರೆ ಬಗ್ಗೆ ಶಾಸನಗಳಲ್ಲಿ ತಾಮ್ರಪಟಗಳಲ್ಲಿ, ತಾಡೋಲೆಗಳಲ್ಲಿ, ಕೋರಿಕಾಗದದಲ್ಲಿ, ಸಂಶೋಧನೆಯ ಕ್ಷೇತ್ರದಲ್ಲಿ ದೊರೆಯದಿದ್ದಾಗ ಜನಪದ ಸಾಹಿತ್ಯಕ್ಕೆ ಮೊರೆಹೋಗುವುದು ಅನಿವಾರ್ಯ. ಈ ನಿಟ್ಟಿನಲ್ಲಿ ಕೊಪ್ಪಳ ಜಿಲ್ಲೆಯ ಜಾನಪದ ಲೋಕ ಹುತ್ತವಾಗಿದೆ. ಪ್ರಶಸ್ತಿ ಪುರಸ್ಕೃತರು ಕೆಲವರಾದರೆ, ಇನ್ನೂ ಗುರುತಿಸಲ್ಪಡಬೇಕಾದವರು ಹಲವಾರು ಇದ್ದಾರೆ. ಅವರನ್ನು ಸಂಕ್ಷೇಪವಾಗಿ ಪರಿಚಯಿಸುವ ಕೆಲಸ ನಡೆಯಬೇಕಾಗಿದೆ. ಕ್ಷೇತ್ರಕಾರ್ಯ ಸಮರ್ಪಕವಾಗಿ ನಡೆಯದ ಪ್ರಯುಕ್ತ ಇಲ್ಲಿಯೂ ಹಲವಾರು ಕೈತಪ್ಪಿ ಹೋಗುವ ಸಾಧ್ಯತೆಗಳಿವೆ. ಅಂಥವರನ್ನು ಯುವ ಸಂಶೋಧಕರು ಗುರುತಿಸಿದರೆ ಈ ಭಾಗದ ಜನಪದ ಕಲಾವಿದರ ಸಮಗ್ರ ಚಿತ್ರ ಲಭ್ಯವಾಗಬಹುದು.[೬]

ಜಿಲ್ಲೆಯ ಮಹಿಳೆಯರು ತಮ್ಮ ದಿನನಿತ್ಯ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಾಗ ಸಾಂಪ್ರದಾಯಿಕ ಧಾರ್ಮಿಕ ಸಂದರ್ಭದ ಸುಖ-ದುಃಖಗಳ ಹಾಡುಗಳು ಬಹಳ ರಸವತಾಗಿವೆ, ಅರ್ಥವತ್ತಾಗಿವೆ. ಬಿಸರಹಳ್ಳಿ, ಸಾರೆವ್ವಕಾಳಿ, ಹಟ್ಟಿಯ ಲಕ್ಕವ್ವ, ಅಲ್ಲಾನಗರದ ಲಕ್ಷ್ಮವ್ವ ಹಾಗೂ ಸಂಗಡಿಗರು, ಇರಕಲ್ಲಗಡಾದ ಸೋಬಾನಿ ಗುಂಡಮ್ಮ ಮತ್ತು ದೇಸಾಯಿ ಬುಡ್ಡಮ್ಮ, ಲೇಬಗೇರಿ ರಾಮವ್ವ, ಹಡಪದ ದ್ಯಾಮವ್ವ, ಕೊಪ್ಪಳ ತಾಲೂಕಿನ ಪ್ರಮುಖ ಹೆಣ್ಣುಮಕ್ಕಳ ಸಂಪ್ರದಾಯದ ಹಾಡುಗಾರರಾಗಿದ್ದಾರೆ. ಯಲಮಗೇರಾ, ಚಾಮಲಪುರ, ಹನುಮನಹಟ್ಟಿ, ಬಿಸರಹಳ್ಳಿ ಬಹದ್ದೂರ ಬಂಡಿ, ವಡ್ಡರಹಟ್ಟಿ ಮಹಿಳೆಯರು ಇಂದಿಗೂ ಹಾಡು ಹೇಳುವುದನ್ನು ಕರಗತ ಮಾಡಿಕೊಂಡಿದ್ದಾರೆ. ಕುಷ್ಟಗಿ ತಾಲೂಕಿನ ತಾವರೆಗೆರೆಯ ಯಮನಮ್ಮ ಮಲ್ಲೇಶಪ್ಪ ಹಾಗೂ ಹವಾಲ್ದಾರ ಲಕ್ಷ್ಮಪ್ಪನು ಹಾಡುವ ಧಾಟಿ ವಿಶೇಷವಾಗಿದೆ. ಯಲಬುರ್ಗಾ ತಾಲೂಕಿನ ಶಾಂತಮ್ಮ ಹಿರೇಮನಿ ಸುಟ್ಟವ್ವ ಮಸಬಹಂಚಿನಾಳ, ಗಂಗಾವತಿ ತಾಲೂಕಿನ ಜವಳಗೇರಿಯ ಭಾಗಮ್ಮ, ತಾವರಗೆರೆಯ ಯಮನಮ್ಮ ಹಾಗೂ ಸಂಗಡಿಗರು, ಇವರಲ್ಲದೆ ಜಿಲ್ಲೆಯ ಪ್ರತಿಯೊಂದು ತಾಲೂಕಿನಲ್ಲಿ ಹೆಣ್ಣುಮಕ್ಕಳ ಹಾಡು ಹೇಳುವ ಹಾಡುಗಾರರು ಇದ್ದಾರೆ.[೭]

ಮಾನವ ಜೀವನದ ಕಷ್ಟ-ಸುಖ, ಆಸೆ-ಆಕಾಂಕ್ಷೆ ಅದ್ಭುತ ಮುಗ್ಧತೆಗಳಿಂದ ಜನ್ಯವಾದ ನಂಬಿಕೆ ಈ ಎಲ್ಲಾ ಅನುಭವಗಳ ತೀವ್ರತೆಯಿಂದ ಗಂಭೀರವಾಗಿ, ಸಹಜ ಸುಂದರವಾಗಿ ಮೂಡಿಬಂದುದೇ ಜನಪದ ಸಾಹಿತ್ಯ. ಇದು ಮೌಖಿಕ ಸಂಪ್ರದಾಯದಲ್ಲಿ ಸ್ಥಿರವಾಗಿ ನಿಂತು ಸಮಷ್ಟಿ ಪ್ರತಿನಿಧಿಯೂ,

ಸಂಸ್ಕೃತಿಯ ತವನಿಧಿಯೂ ಆಗಿದೆ. ಜನಪದ ಸಂಸ್ಕೃತಿಯ ಅಧ್ಯಯನವೆಂದರೆ ಸಾಮಾನ್ಯವಾಗಿ ಎರಡು ಸಂದರ್ಭಗಳಲ್ಲಿ ಸೃಷ್ಟಿಯಾಗುತ್ತದೆ. ಒಂದು ದುಡಿತದ ಸಂದರ್ಭ; ಎರಡನೆಯ ಸಾಂಸ್ಕೃತಿಕ ಸಂದರ್ಭ. ಕಲೆ ಧರ್ಮ ಪುರಾಣ ಐತಿಹ್ಯ, ಗಾದೆ, ಒಗಟು, ಕಥೆ, ಗೀತೆ, ಲಾವಣಿ, ನಂಬಿಕೆ, ಆಚರಣೆಗಳೊಂದಿಗೆ ತಳುಕು ಹಾಕಿಕೊಂಡಿರುವ ಜಾನಪದ ವಸ್ತುವಿಷಯ ಮುಖ್ಯವಾಗಿ ಮಾನವನ ಹಾಗೂ ಪರಿಸರದ ನಡುವಿನ ಆಪ್ತ ಸಂಬಂಧವನ್ನು ಗುರುತಿಸುವ ಭೌತಿಕ ನೆಲೆಯ ಪ್ರಕ್ರಿಯೆಯಾಗಿ ಕಂಡುಬರುತ್ತದೆ.

ನಂಬಿಕೆ-ಸಂಪ್ರದಾಯಗಳು ಜನಪದ ಬದುಕಿನ ಬೆನ್ನೆಲುಬು, ಜನಪದದಲ್ಲಿ ಧರ್ಮ ಎನ್ನುವುದು. ಬದುಕಿನ ರೀತಿಗೆ ಸಂಬಂಧಿಸಿದ್ದು. ಜನಪದ ಧರ್ಮದಲ್ಲಿ ಜೀವನ ಪ್ರೀತಿ ಕಾಣುತ್ತೇವೆ. ಆದ್ದರಿಂದಲೇ ಅಲ್ಲಿ ಬದುಕನ್ನು ಧಿಕ್ಕರಿಸುವುದು ಕಂಡುಬರುವುದಿಲ್ಲ. ಬಾಳಿನ ಬಗ್ಗೆ ಜನಪದರ ಅಪಾರ ಶ್ರದ್ಧೆ ಆಸಕ್ತಿಗಳೇ ಜಾನಪದ ವಿರಾಟಸ್ವರೂಪಕ್ಕೆ ಕಾರಣವಾಯಿತು.

ಭೂಮಿರೂಪಿಯಾದ ಜಾನಪದ ವ್ಯಾಪ್ತಿಗೆ ಬರಲಾರದ ವಿಷಯಗಳೇ ಇಲ್ಲ. ಅನಕ್ಷರಸ್ಥರ ವಿಶ್ವಕೋಶ ಇಡೀ ಒಂದು ಚಕ್ರವಾದರೆ, ಜನಪದ ಅದರ ಒಂದೊಂದು ಪುಟಗಳು. ಜನಾಂಗಗಳ ಪಳೆಯುಳಿಕೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುವ ವಿಜ್ಞಾನ ಜಾನಪದ ಜನಜೀವನದಲ್ಲಿ ಇಂದಿಗೂ ಕಂಡುಬರುವುದು. ಆದರೆ, ಈ ಕಾಲದ್ದಲ್ಲದ ಕಥೆಗಳನ್ನು, ನಂಬಿಕೆಯನ್ನು, ವಿಚಾರಗಳನ್ನು ಇದು ಅಧ್ಯಯನ ಮಾಡುತ್ತದೆ. ಸಮಾಜದ ಕೆಳಸ್ಥರ ಐತಿಹ್ಯಗಳು, ಸಂಪ್ರದಾಯಗಳು, ನಂಬಿಕೆಗಳ ಮೊತ್ತವೇ ಜಾನಪದ.[೮]

ಕೊಪ್ಪಳ ಜಿಲ್ಲೆಯು ಹಿಂದುಳಿದ ಜಿಲ್ಲೆಯಾಗಿದ್ದರೂ ಜಾನಪದ ಸಾಹಿತ್ಯದಲ್ಲಿ ಮಾತ್ರ ಹಿಂದೆ ಬಿದ್ದಿಲ್ಲ. ಜಾನಪದ ಸಾಹಿತ್ಯ ರಚಿಸಿದ ಕವಿಗಳು ಜನಿಸಿದ ನೆಲೆಬೀಡು ಇದಾಗಿದೆ. ಜಾನಪದ ಸಾಹಿತ್ಯ ಯಾವ ದೇಶದಲ್ಲಿಯೇ ಆಗಲಿ, ಯಾವ ಜನಾಂಗದಲ್ಲಿಯೇ ಆಗಲಿ ಸುತ್ತ ಮುತ್ತಲಿನ ವಾತಾವರಣದಿಂದ ಬದಲಾಗಬಹುದಲ್ಲದೆ ಅವನ ಮನೋಭಾವನೆಗಳು ಎಲ್ಲಿದ್ದರೂ ಒಂದೇ. ಗಂಡ ಹೆಂಡಿರ ಪ್ರೇಮ, ತಾಯಿ ಮಕ್ಕಳ ವಾತ್ಸಲ್ಯ ಮೊದಲಾದ ಜೀವನ ಚಿತ್ರಗಳು ಎಲ್ಲಾ ಕಡೆಗೂ ಬೇರೆ ಬೇರೆಯಾಗಿ ಕಂಡರೂ ಆಶಯಗಳು ಒಂದೇ. ಕನ್ನಡ ನಾಡು ಇದಾವುದಕ್ಕೂ ಹಿಂದೆ ಬಿದ್ದಿಲ್ಲ. ಇಂದು ನಮಗೆ ಕರ್ನಾಟಕದ ತುಂಬೆಲ್ಲ ಸರಳ ಜೀವನದ ತಿರುಳು ಚಿತ್ರಣಗಳನ್ನೊಳಗೊಂಡ ಜಾನಪದ ಸಾಹಿತ್ಯವೇ ಇದಕ್ಕೆ ಸಾಕ್ಷಿ.

ಜನಸಾಮಾನ್ಯರ ಬಾಯಿಂದ ಕಿವಿಗೆ ಕಿವಿಯಿಂದ ಬಾಯಿಗೆ ಕಂಠಸ್ಥವಾಗಿ ಹರಿದು ಬಂದಿರುವ ಸಾಹಿತ್ಯವೇ ಜಾನಪದ ಸಾಹಿತ್ಯವೆಂದು ಹೇಳಬಹುದು. ಸಮೂಹ ಮಾಧ್ಯಮದಿಂದ ಸೃಷ್ಟಿಯಾಗಿ ಬಾಯಿಂದ ಬಾಯಿಗೆ ಕಂಠಪಾಠ ಸಂಪ್ರದಾಯಬದ್ಧ ಮೂಲಕ ತಲೆಮಾರಿನಿಂದ ತಲೆಮಾರಿಗೆ ಬಳುವಳಿಯಾಗಿ ಬಂದಿದೆ. ಇವುಗಳಲ್ಲಿ ಜೀವಂತ ಕೊಡುಗೆಯಾಗಿ ಬಂದಿರುವ ಕಥೆ, ಗೀತೆ, ಒಗಟು, ಗಾದೆ, ಐತಿಹ್ಯ, ಪುರಾಣ, ನಂಬಿಕೆ, ಮೂಢನಂಬಿಕೆ, ಆಚಾರ, ಹಬ್ಬ ಹರಿದಿನ, ಮಾಟ, ಮಂತ್ರವಿದ್ಯೆ, ಜಾನಪದ ವೈದ್ಯ ಮುಂತಾದವುಗಳು ಜಾನಪದವೆನಿಸಿಕೊಳ್ಳುತ್ತವೆ. ಕ್ರಿ.ಶ.೧೮೪೬ರಲ್ಲಿ ವಿಲಿಯಂ ಜಾನ್‌ಥಾಂಸ್ ಎಂಬುವರು 'Folklore' (ಫೋಕ್‌ಲೋರ್) ಎಂಬ ಪದವನ್ನು ಸೃಷ್ಟಿಸಿ

ಬಳಕೆಗೆ ತಂದರು. ಮಾನವ ಜನಾಂಗದ ವಿವಿಧ ತರಹದ ವರ್ಗಗಳಲ್ಲಿಯೂ ಜಾನಪದ ಇರುತ್ತದೆ.

'ಜೋನಾಸ್ ಬೆಲಿಯಸ್' ಎಂಬ ವಿದ್ವಾಂಸರು ಆದಿವಾಸಿ ಮತ್ತು ನಾಗರಿಕ ಸಮಾಜಗಳು ಸಾಂಪ್ರದಾಯಿಕವಾಗಿ ಸೃಷ್ಟಿಸಿ ಬೆಳೆಸಿಕೊಂಡು ಬರುವ ಅಂಶಗಳನ್ನು ಜಾನಪದ ಒಳಗೊಂಡಿರುತ್ತದೆಂದು ಹೇಳಿದ್ದಾರೆ. ಅವರ ಅಭಿಪ್ರಾಯದಲ್ಲಿ ಈ ಸಮಾಜಗಳ ಸಾಹಿತ್ಯಿಕ ಮತ್ತು ಭೌತಿಕ ಸಂಪ್ರದಾಯಗಳೆಲ್ಲ ಜಾನಪದವೇ. ಆದರೆ ಈ ಎರಡು ಸಮಾಜಗಳಲ್ಲೂ ಉಳಿದು ಬರುವ ಸಂಪ್ರದಾಯಗಳು ತಮ್ಮ ಸ್ವರೂಪಗಳಲ್ಲಿ ಬಹಳಷ್ಟು ವ್ಯತ್ಯಾಸವನ್ನು ಹೊಂದಿರುತ್ತವೆ. ಎಂದರೆ ಜಾನಪದ Folk-ಜನಪದ Lore ಜ್ಞಾನಕಲಿಕೆ ಎಂದು ವಿಭಾಗಿಸಿದ್ದಾರೆ.

ಕವಿರಾಜಮಾರ್ಗದಲ್ಲಿ ಚದುರರ್ ನಿಜದಿಂಕುರಿತೋದದೆಯಂ ಕಾವ್ಯ ಪ್ರಯೋಗ ಪರಿಣತಿ ಮತಿಗಳ್ ಎಂಬುದಾಗಿ ಜನಪದ ಸಾಹಿತಿಗಳನ್ನು ಕೊಂಡಾಡಿದ್ದಾರೆ. ನಿರಕ್ಷರಿಗಳೆಂದು ಹೇಳುವ ಹಳ್ಳಿಯ ಹೆಂಗಸರು, ಗಂಡಸರು ರಚಿಸಿದ ಸಾಹಿತ್ಯವು ಅಪಾರವಿದೆ. ಆದರೆ ಹಿಂದಿನ ಜಾನಪದ ಸಾಹಿತ್ಯವನ್ನು ಇಂದು ನಾವು ಮರೆಯುತ್ತಿರುವುದು ಅನಿಷ್ಟಕಾರಿಯಾದ ಸಂಗತಿ.

ಕೊಪ್ಪಳ ಪ್ರದೇಶದ ಜನಪದ ಸಾಹಿತ್ಯ ಮತ್ತು ಕಲೆಗಳಿಗೆ ಸಂಬಂಧಿಸಿದಂತೆ ಗಂಭೀರವಾಗಿ ಆಲೋಚಿಸುವುದು ಈ ಸಂದರ್ಭದಲ್ಲಿ ಅವಶ್ಯವಾಗಿದೆ. ಹಲವು ಭಾಷೆಗಳ ಆಕ್ರಮಣಗಳು ಜಿಲ್ಲೆಯಲ್ಲಿ ನಡೆದಿವೆ. ಉಸಿರುಗಟ್ಟಿ ಹೋಗುವ ಸಂದರ್ಭದಲ್ಲಿ ಕನ್ನಡ ಭಾಷೆ ಜನಪದ ಮೌಖಿಕ ಸಾಹಿತ್ಯ ಕಲೆಗಳನ್ನು ಉಳಿಸಿಕೊಂಡು ಬಂದಿದ್ದು ಈ ಜಿಲ್ಲೆಯ ಮತ್ತೊಂದು ವೈಶಿಷ್ಟ್ಯವಾಗಿದೆ.

ಶತಮಾನಗಳಿಂದಲೂ ಸುಡುಬಿಸಿಲು, ಬೆವರಿಳಿಸುವ ಬರದ ನಾಡು, ನೀರಿಲ್ಲದ ಬೆಳೆ ಇಲ್ಲವಾಗಿ ಕಂಗಾಲಾದ ರೈತ ಸಮೂಹ, ದುಡಿದು ಬೆಳೆದ ಬೆಳೆಗೆ ಬೆಲೆ ಸಿಗದೇ ಹೋದಾಗ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಲ್ಲದೇ ಊರೂರಿಗೆ ಅಲೆಮಾರಿ ಜೀವನ ಆರಂಭಿಸಿದ್ದನ್ನು ನಾವು ಕಾಣುತ್ತೇವೆ. ಇಂತಹ ಸಾಕಷ್ಟು ಕಥೆ ವ್ಯಥೆಗಳ ನಡುವೆಯೂ ಈ ಜಿಲ್ಲೆಯಲ್ಲಿ ಶ್ರೀಮಂತ ಜನಪದ ಸಾಹಿತ್ಯಕ್ಕೆ ಕೊರತೆಯಿಲ್ಲ.

ಕರ್ನಾಟಕದಲ್ಲಿ ಜಾನಪದ ಅಧ್ಯಯನ ಪಾಶ್ಚಾತ್ಯ ವಿದ್ವಾಂಸರಿಂದ ಆರಂಭಗೊಂಡಿತು. ಅವರ ಪ್ರಭಾವದಿಂದ ನಂತರ ದೇಶಿಯ ವಿದ್ವಾಂಸರು ಇದರ ಕಡೆಗೆ ಒಲವು ತೋರಿಸುತ್ತಿರುವುದನ್ನು ಕಾಣುತ್ತೇವೆ. ಇಂದು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಜಾನಪದ ವಿದ್ವಾಂಸರು ಕ್ಷೇತ್ರಕಾರ್ಯಕ್ಕೆ ಗೊಂಡು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿದ ಕೃತಿಗಳನ್ನು ನಾವು ಮರೆಯುವಂತಿಲ್ಲ. ಹೈದರಾಬಾದ್ ಕರ್ನಾಟಕ ಪ್ರದೇಶದ ಜಾನಪದ ಅಧ್ಯಯನ ಪ್ರಾರಂಭವಾಗಿದ್ದು ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯ ಪ್ರಾಧ್ಯಾಪಕರಿಂದ, ಕ್ಯಾತನಹಳ್ಳಿ ರಾಮಣ್ಣ, ಟಿ.ಎಸ್. ರಾಜಪ್ಪ, ಅವರು ರಾಯಚೂರು ಜಿಲ್ಲೆಯ ಜಾನಪದ ಕಥೆಗಳು, ರಾಯಚೂರು ಜಿಲ್ಲೆಯ ಜಾನಪದ ಗೀತೆಗಳು ಎಂಬ ಕೃತಿಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಆದರೆ ಇದರಲ್ಲಿ ಕೊಪ್ಪಳ ತಾಲ್ಲೂಕಿನ ಜಿಲ್ಲೆಯ ಯಾವ ಪ್ರಸ್ತಾಪವೂ ಇಲ್ಲ. ನಂತರದಲ್ಲಿ ಬಿ.ಬಿ. ಹೆಂಡಿಯವರು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಜಾನಪದ ಅಧ್ಯಯನ, ಸಂಗ್ರಹ ಆರಂಭಿಸಿದರು. ಅದರಲ್ಲಿ ೧೯೭೪ರಿಂದಲೇ ಬಸವರಾಜ ಪೊಲೀಸ್ ಪಾಟೀಲರು

ಕೊಪ್ಪಳ ಜಿಲ್ಲೆಯ ಜಾನಪದ ಕಲೆ ಕಲಾ ಕೇಂದ್ರಗಳನ್ನು ಗುರುತಿಸಿ ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯದಲ್ಲಿ ದಾಖಲಿಸಿದ್ದಾರೆ. ಇವರನ್ನು ಬಿಟ್ಟರೆ ಜಿಲ್ಲೆಯ ಜಾನಪದ ಕಡೆಗೆ ಲಕ್ಷ್ಯವನ್ನು ಯಾವ ವಿದ್ವಾಂಸರೂ ಕೂಡ ತೋರಲಿಲ್ಲ.[೧೦]

ಹೆಣ್ಣುಮಕ್ಕಳ ಹಾಡುಗಳು, ಸಂಪ್ರದಾಯದ ಹಾಡುಗಳು ಎಂದು ಕರೆಯುವ ಹಾಡಿನಲ್ಲಿ ಬೀಸುವ, ಕುಟ್ಟುವ ಪದ, ಮೈನೆರೆದ ಸಂದರ್ಭ ಹಾಡು, ಮದುವೆ ಹಾಡು, ಜೋಗುಳ ಹಾಡು, ಸೀಮಂತ ಹಾಡು, ಬೀಗರ ಹಾಡು, ಒಳಕಲ್ಲುಪದ, ತೊಟ್ಟಿಲು ಪದ, ಆರತಿ ಬೆಳಗುವಾಗ ಅರಿಶಿಣ ಹಚ್ಚುವ ಪದ, ಕೋಲುಪದಗಳು ವಿಶೇಷವಾಗಿ ದೊರಕುತ್ತವೆ. ಒಗಟು, ಕಲೆ, ಶಿಶುಪ್ರಾಸ ಒಡಪು, ಗಾದೆಗಳು, ನುಡಿಗಟ್ಟು, ನೃತ್ಯಗೀತೆಗಳು ಆಯಾ ಸಂದರ್ಭನುಸಾರವಾಗಿ ಮೂಡಿಬಂದಿವೆ. ಹೊಲದಲ್ಲಿ ಕೃಷಿಕನ ಕೆಲಸಗಳ ನಡುವೆ ಸಸಿ ನೆಡುವ, ಕೊಯ್ಯುವ ಹಾಡುಗಳು ದೊರಕಿವೆ.

ಈ ಎಲ್ಲ ಜನಪದ ಹಾಡು, ಪದ್ಯ ಸಾಹಿತ್ಯಗಳ ರಚನೆ ಮೌಖಿಕವಾಗಿದ್ದರೂ ಕೂಡ ಇಂದು ಬಳಕೆಯಲ್ಲಿವೆ. ಗಂಡು, ಹೆಣ್ಣು ಪ್ರತ್ಯೇಕವಾಗಿ ಹಾಡುವ, ಮಕ್ಕಳ ಹಾಡುಗಳು ಹಾಗೂ ಹೆಣ್ಣು, ಗಂಡು ಕೂಡಿ ಹಾಡುವ ಹಾಡುಗಳನ್ನು ಕಾಣುತ್ತೇವೆ. ಬುಡಕಟ್ಟು ಸಂಸ್ಕೃತಿಯ ಹಲವು ಜಾತಿ ಸಮುದಾಯಗಳ ಸಾಹಿತ್ಯ ಕಲೆಗಳ ಅಸ್ತಿತ್ವವಿದೆ. ಸುಡುಗಾಡಸಿದ್ದರು, ವೇಷಗಾರರು, ಕುರುಬಗೊಲ್ಲರು, ಪರ್ವತಮಲ್ಲಯನವರು, ಪುರುವಂತರು, ಸಾರೋವನೋರು, ದುರುಗುಮುರಿಗಿಯರು, ಅಡವಿಚೆಂಚರು, ಬುಡಬುಡಕಿಯವರು, ಗೊಂದಲಿಗರು, ಕಿಂದರಿಜೋಗಿಗಳು, ಮೋಡಿಕಾರರು ಮುಂತಾದ ಬುಡಕಟ್ಟು ಉಪಸಂಸ್ಕೃತಿಯ ಆಚರಣೆಗಳು ದಟ್ಟವಾಗಿ ಕಂಡುಬರುತ್ತವೆ. ಕುಣಿತಗಳು ಎಂದೇ ಪ್ರಸಿದ್ಧವಾದ ಡೊಳ್ಳು ಕುಣಿತ, ಹುಲಿವೇಷ, ಹೆಜ್ಜೆಕುಣಿತ, ಕೋಲಾಟ, ಕವಳೆತ್ತಿನವರು, ಕರಡಿಮಜಲು, ನಂದಿಕೋಲು ಕುಣಿತಗಳು ಬಹು ಆಕರ್ಷಕವಾಗಿ ಪ್ರತಿವರ್ಷ ಪ್ರದರ್ಶನಗೊಳ್ಳುತ್ತಿವೆ. ಅನೇಕ ಸಂಪ್ರದಾಯ, ಆಚರಣೆ, ಹಬ್ಬ, ಉತ್ಸವ, ಜನಪದ ಕ್ರೀಡೆಗಳು ಹತ್ತು ಹಲವು ಮೈದಾಳಿ ನಿಂತಿವೆ. ಇವುಗಳಿಂದ ಜನಪದ ಸಾಹಿತ್ಯ ಕಲೆ ಜಿಲ್ಲೆಯಲ್ಲಿ ಶ್ರೀಮಂತಗೊಂಡಿದೆ.[೧೧]

ಕುರುಬರು ಸಮುದಾಯದ ಸಾಂಸ್ಕೃತಿಕ ವೀರರಾದ ಬೀರಪ್ಪ, ರೇವಣಸಿದ್ಧ, ಅಮೋಘಸಿದ್ದ, ಸಿದ್ದೇಶ್ವರ ಮೈಲಾರಲಿಂಗ, ಮುಂತಾದ ದೇವರಿಗಾಗಿ ಡೊಳ್ಳು ಬಾರಿಸುತ್ತಾರೆ; ಹಾಡುತ್ತಾರೆ. ಅಲ್ಲದೇ ಇತ್ತೀಚೆಗೆ ಸಭೆ, ಸಮಾರಂಭ, ಮಹೋತ್ಸವ, ಸಮ್ಮೇಳನಗಳಲ್ಲಿ ಆಕರ್ಷಕವಾಗಿ ಡೊಳ್ಳು ಬಾರಿಸುತ್ತಾರೆ. ಪ್ರತಿಯೊಂದು ಹಳ್ಳಿಗಳಲ್ಲಿ ಡೊಳ್ಳುಗಳಿವೆ. ಚರ್ಮದಿಂದ ತಯಾರಿಸುವ ಡೊಳ್ಳು ಶಬ್ದದ ನಾದ ಗಮನ ಸೆಳೆಯುತ್ತದೆ. ಡೊಳ್ಳು ಕುಣಿತ ನಾದ ಲಯದ ಕುಣಿತ, ಹಾಡುಗಳ ಮೂಲಕ ಪ್ರಸಿದ್ಧವಾಗಿದೆ. ಪ್ರತಿಹಳ್ಳಿ ಹಳ್ಳಿಗಳಲ್ಲೂ ಹಾಡು ಹಾಡುವವರು ಇದ್ದಾರೆ. ಅವರಿಗೆ ಇಂದು ಸರಿಯಾದ ಮಾರ್ಗದರ್ಶನವಿಲ್ಲದೇ ಕಲೆ ನಶಿಸುತ್ತಿದೆ. ಅಂಥವುಗಳಲ್ಲಿ ಉಳಿಸಿಕೊಂಡು ಬಂದಿರುವ ಕುಷ್ಟಗಿ ತಾಲ್ಲೂಕಿನ ಬೆಂಚಿಮಟ್ಟಿಯ ಶಿವಪ್ಪ, ಯಲಬುರ್ಗಾ ರೇವಣಪ್ಪ, ಏಗನೂರು ಸಣ್ಣಯಲ್ಲಪ್ಪ, ಕೊಪ್ಪಳದ ಹಲಗೇರಿ ರೇವಣೆಪ್ಪ ಮತ್ತು ಸಂಗಡಿಗರು, ಬಿಸರಹಳ್ಳಿಯ ಭೀಮಣ್ಣ ಕಾಟಿ, ಕಾಟಿ ಭರಮಪ್ಪ, ಹಲಗೇರಿಯ ಶಾಂಭವಿ, ಭುವನೇಶ್ವರಿ ಯುವಕ ಮಂಡಳಿ ಹಾಗೂ ಇತರ ಹಲವಾರು ಊರುಗಳ ಡೊಳ್ಳು ಕುಣಿತ ಹಾಗೂ ಹಾಡಿಗೆ ಹೆಸರುವಾಸಿಯಾಗಿವೆ. ಈ ಜಿಲ್ಲೆಯ ಕೆಲವೊಂದು

ಕಡೆ ಮರಗಾಲು ಕಟ್ಟಿಕೊಂಡು, ಇಲ್ಲವೇ ಒಬ್ಬರ ಮೇಲೊಬ್ಬರು ಹತ್ತಿ ಸ್ಪರ್ಧೆಯಿಂದ ಡೊಳ್ಳು ಬಾರಿಸುತ್ತಾರೆ. ಜಿಲ್ಲೆಯ ಮತ್ತೊಂದು ವಿಶೇಷವೆಂದರೆ ಕೊಪ್ಪಳದ ಹೆಣ್ಣುಮಕ್ಕಳು ಕುರುಬರ ಓಣಿಯಲ್ಲಿ ಹಾಡು ಹೇಳುವುದಲ್ಲದೆ ಡೊಳ್ಳನ್ನು ಬಾರಿಸುತ್ತಾರೆ. ಹನುಮವ್ವ ಮಸಿಲಿ ಎನ್ನುವ ಮಹಿಳೆ ಹಾಡುತ್ತಿರುವುದು ವಿಶೇಷವಾಗಿದೆ. ಜೊತೆಗೆ ತಾಲೂಕಿನ ಇಂದರಗಿ ಗ್ರಾಮದಲ್ಲಿ ಜನಪದ ಸಾಹಿತ್ಯ ಸ್ತ್ರೀಯರ ಜೀವನದಲ್ಲಿ ಹಾಸುಹೊಕ್ಕಾಗಿ ಬಂದಿರುವುದು ಕಾಣುತ್ತೇವೆ.[೧೨]

ಜನಪದ ಹಾಡುಗಾರರು ಜನಪದದ ವಿವಿಧ ಪ್ರಕಾರದ ಹಾಡುಗಳನ್ನು ಹೇಳುವುದನ್ನು ಕಾಣುತ್ತೇವೆ. ಜನಪದ ಲಾವಣಿ, ಹಂತಿ ಹಾಡು ನಾನಾ ಬಗೆಯ ಹಾಡುಗಳನ್ನು ಹಾಡುವವರಿದ್ದಾರೆ. ಕುಷ್ಟಗಿಯ ಲಕ್ಷ್ಮಪ್ಪ ಹವಾಲ್ದಾರ್ ಮತ್ತು ಮಲ್ಲೇಶಪ್ಪ, ಜೀವನಸಾಬ ವಾಲಿಕಾರ ಬಿನ್ನಾಳ, ಜಂಗಮರ ಕಲ್ಲುಗಡಿಯ ಸಿದ್ಧಪ್ಪ ಕಾರಪುಡಿ, ಕನಕಗಿರಿಯ ಪರ್ವತ ಮಲ್ಲಯ್ಯ, ಆನೆಗೊಂದಿಯ ರಾಮಚಂದ್ರದೇವರು, ಮರಳಿಯ ಕಲಾವಿದರು, ಕಂದಕೂರಿನ ವಾಲ್ಮೀಕಿ ತಂಡ, ಕುಷ್ಟಗಿಯ ಶರಣಪ್ಪ ವಡಿಗೆರಿ ಅವರು ಎಡಗೈಯಲ್ಲಿ ಹಲಗೆ ಹಿಡಿದು ಬಲಗೈಯಲ್ಲಿ ಚಿಟಿಕೆ ಬಾರಿಸುತ್ತಾ ಏಕಕಾಲದಲ್ಲಿ ಜಾನಪದ ಗೀತೆಗಳನ್ನು ಹಾಡುವುದು ವಿಶೇಷ ಸಾಧನೆಯಾಗಿದೆ. ಈ ಜಿಲ್ಲೆಯಲ್ಲಿ ಜಾನಪದದ ಮೂಲ ಧಾಟಿಯಲ್ಲಿ ಹಾಡಬಲ್ಲ ಕಲಾವಿದರು ಇದ್ದಾರೆ. ಜನಪದ ಹಾಡುಗಾರರಾದ ಫಕೀರಪ್ಪ ಗಮಗೇರಿ, ಈರಪ್ಪ, ತೋಟದ, ಗಂಗಾವತಿ ಶಾಂತಾ ಕುಲಕರ್ಣಿ ಜಾನಪದದ ದಾಟಿಯಲ್ಲಿ ಹಾಡುತ್ತಿದ್ದರೆ, ಸಭೀಕರಲ್ಲದೇ ಆಕಾಶ ಭೂಮಿ ಬಾಯ್ದೆರೆದು ಕೇಳುತ್ತವೆ. ತಾಳಕೇರಿ ಬಸವರಾಜ, ತುಮರಗುದ್ಧಿ ಮಾರೆಪ್ಪ ಮರೆಪ್ಪದಾಸರ ದಾಸರ ಜನಪದ ತತ್ವಪದ ಹಾಡು ಹೇಳುವರು. ಮಾರೆಪ್ಪ ದಾಸರು ೨೦೦೪ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದಾರೆ. ರಾಮಮೂರ್ತಿ, ಜ್ಯೋತಿ ಕುಲಕರ್ಣಿ, ಕಿನ್ನಾಳ ವೀಣಾ ದೇಸಾಯಿ ಜಿಲ್ಲೆಯ ಜಾನಪದ ಪ್ರಶಸ್ತಿ ಪಡೆದಿದ್ದಾರೆ. ದೇವೇಂದ್ರಕುಮಾರ ಮುಧೋಳ, ಸದಾಶಿವ ಪಾಟೀಲ, ದೇವೇಂದ್ರಕುಮಾರ ಮಂಡಲಗಿರಿ, ಜಿಲ್ಲಾ ಯುವ ಪ್ರಶಸ್ತಿ ಪಡೆದ ಹನುಮಕ್ಕ ರಾಜಪುರೋಹಿತ ಮುಂತಾದ ಹಾಡುಗಾರರು ಇದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಜನಪದ ಕಲೆಗಳು ಇವೆ.[೧೩]

**ಹೋಳಿ ಹಾಡುಗಳು**

'ಹೋಳಿ' ಭಾರತೀಯ ಪ್ರಮುಖ ಹಬ್ಬಗಳಲ್ಲಿ ಒಂದು. ಇದನ್ನು ಭಾರತದ ಉದ್ದಗಲಕ್ಕೂ ವೈವಿಧ್ಯಮಯ ಸಂಭ್ರಮದಿಂದ ಆಚರಿಸಲಾಗುತ್ತದೆ. ಬಹಳಷ್ಟು ಪ್ರದೇಶಗಳಲ್ಲಿ ಹಬ್ಬದ ಹೆಸರು 'ಹೋಳಿ' ಎಂದೇ ಇದ್ದರೂ, 'ಕೆಲವು ಕಡೆ ಹೋಲಿ', 'ಹೋಲಿಕಾ', 'ಕಾಮದಹನ', 'ಹೋಲಿಕಾ ದಹನ', 'ವಸಂತೋತ್ಸವ', 'ಹೋಳಿಯ ಹಬ್ಬ' ಮೊದಲಾದ ಪ್ರಾದೇಶಿಕ ಭಿನ್ನತೆಗಳೂ ಇವೆ. ಆದರೆ ಹಬ್ಬದ ಉದ್ದೇಶ ಮಾತ್ರ ಒಂದೇ. ಆಚರಣೆಯ ವಿಧಾನಗಳೂ ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುವುದು ಸ್ವಾಭಾವಿಕ. ಈ ಹಬ್ಬದಲ್ಲಿ ಧಾರ್ಮಿಕ ವಿಧಿವಿಧಾನಗಳಿವೆ, ಇದು ಹುಣ್ಣಿಮೆಯಂದು ಆಚರಿಸಲ್ಪಡುವುದರಿಂದ ಇದಕ್ಕೆ ಹೋಳೀ ಹುಣ್ಣಿಮೆ ಎಂದು ಕರೆಯಲಾಗುತ್ತದೆ. ಹೋಳಿ ಹಬ್ಬದ ಪ್ರಖ್ಯಾತಿಗೆ ಎರಡು ಪ್ರಮುಖ ಕಾರಣಗಳಿವೆ.

ಒಂದನೆಯದಾಗಿ, ಭಾರತೀಯ ಹಬ್ಬ, ಹೋಳಿ ಒಂದು ಮಾತ್ರ ಗಂಡಸರ ಹಬ್ಬ. ಜನಪದದಲ್ಲಿ ಇದನ್ನು ಕುರಿತು ಒಂದು ಕಥೆಯೂ ಇರುವುದಾಗಿ ಡಾ. ಗದ್ದಗಿಮಠ ಅವರು ಪ್ರಸ್ತಾಪಿಸುತ್ತಾರೆ.

ಆಗಾಗ ಬರುವ ಹಬ್ಬಗಳಲ್ಲಿ ಹೆಣ್ಣುಮಕ್ಕಳು ಉಟ್ಟು ತೊಟ್ಟು ಸಿಂಗರಿಸಿಕೊಂಡು ಆನಂದಪಡುವುದನ್ನು ನೋಡಿದುಡಿದ ಗಂಡಸು ದೇವರಲ್ಲಿ ಮೊರೆಯಿಟ್ಟು ತನಗೂ ಒಂದು ಹಬ್ಬಬೇಕೆಂದು ಕೇಳಿಕೊಂಡನಂತೆ! ಆಗ ದೇವರು ಈ ಹೋಳಿ ಹಬ್ಬವನ್ನು ಆಚರಿಸಿ ಹಾಡಲು, ಬಣ್ಣ ಆಡಲು ಸೃಷ್ಟಿಸಿ ಕೊಟ್ಟನಂತೆ! ಎರಡನೆಯದಾಗಿ ಎಲ್ಲ ಮತ-ಧರ್ಮ ವಯೋಮಾನದವರು ಸಾಮೂಹಿಕವಾಗಿ ಬೀದಿ ಬೀದಿಗಳಲ್ಲಿ ಅಬ್ಬರದೊಂದಿಗೆ ಬಣ್ಣ ಎರಚಾಡಿ, ಹಲಗೆ ಹೊಡೆದು, ಹಾಡಿ ಕುಣಿದು ಆಚರಿಸುವರು. ಬೌದ್ಧರು, ಜೈನರು ಸಹಿತ ಹೋಳಿಯನ್ನು ಆಚರಿಸುತ್ತಾರೆ. ಹಳ್ಳಿಗಳಲ್ಲಿ ಮುಸ್ಲಿಮರೂ ಆಚರಿಸುವುದುಂಟು. ಸಂವತ್ಸರ ಕೊನೆಗೆ, ಅಂದರೆ ಫಾಲ್ಗುಣ ಮಾಸದಲ್ಲಿ ಬರುವ ಈ ಹಬ್ಬ ವಸಂತನಾಗಮನದ ಸಂದೇಶವಾಹಕವಾಗಿಯೂ ಬರುತ್ತದೆ. ಹಳೆಯ ಬಾಳದುರಿಸಿದ ತರಗೆಲೆ, ರವದಿ ಹುಲ್ಲು ಕಸಕಡ್ಡಿಯನ್ನೆಲ್ಲ ಸುಂಟರಗಾಳಿಯ ಕಸ ಪೊರಕೆಯಿಂದ ಗುಡಿಸಿ, ಸುಟ್ಟು ಬೂದಿ ಮಾಡಿ, ಅಡ್ಡ ಮಳೆಯಿಂದ ಥಳಿ ಹೊಡೆದು, ಮರ ಬಳ್ಳಿಗಳಿಗೆಲ್ಲ ಬಣ್ಣ ಬಣ್ಣದ ಚಿಗುರು ಮೂಡಿಸಿ, ಹೂ ಮುಡಿಸಿ, ಮಿಡಿಗಾಯಿಗಳ ಸರಮಾಲೆ ಹಿಡಿದು ಪ್ರಕೃತಿ ವಸಂತನ ಸ್ವಾಗತದ ಸಿದ್ಧತೆಯಲ್ಲಿರುತ್ತದೆ. ಚೈತ್ರದ ಈ ಚೇತನ ಹೂವಿನ ಚೆಲುವಾಗಿ ಹಕ್ಕಿಯ ಉಲಿಯಾಗಿ, ಕೋಗಿಲೆಯ ಝೇಂಕಾರ, ದುಂಬಿಯ ಝೇಂಕಾರವಾಗಿ ಇಡೀ ಸೃಷ್ಟಿಯನ್ನೇ ನವನವೋನ್ಮೇಷಶಾಲಿಯಾಗಿ ಮಾಡುತ್ತದೆ. ಆಗ ಮಾನವನೂ ತನ್ನ ಹಳೆಯ ಕಾಮನೆಗಳನ್ನು ಸುಟ್ಟು ಶಿವನಾಗುವ ಚೇತನ ತಳೆವ ಸಂಕಲ್ಪ ಮಾಡಬೇಕು. ಇದೆಲ್ಲದರ ಸಂಕೇತದ ಆಚರಣೆ ಈ ಬಣ್ಣ ಬಣ್ಣದ ಹೋಳಿ. ಹಳೆಯದೆಲ್ಲ ಹೋಳಿಯ ಈ ಕಿಚ್ಚಿನಲ್ಲಿ ಸುಟ್ಟು ಬೂದಿಯಾಗುತ್ತದೆ. ಆ ಬೂದಿಯಲ್ಲೇ ಫೀನಿಕ್ಸ್ ಪಕ್ಷಿಯಂತೆ ಹೊಸ ಬದುಕು ಹುಟ್ಟಿ ಬರುತ್ತದೆ. ಹೊಸ ಸಂವತ್ಸರ ಆರಂಭವಾಗುತ್ತದೆ.

ಅದರ ಸಂಕೇತದ ಹಬ್ಬವೇ ಯುಗಾದಿ. ಋತುಚಕ್ರದಲ್ಲಿ ನಿನ್ನೆ ಸತ್ತು ನಾಳೆ ಹುಟ್ಟಿಬರುವ ರೀತಿ ಇದು. ಹಲವು ಜನಪದ ಪಂಡಿತರು ಅಗ್ನಿ ಪೂಜೆಯ ವಿಧಾನ ಈ ಹೋಳಿ ಎಂದು ಹೇಳಿದ್ದೂ ಉಂಟು. ಯಾರು ಏನೇ ಹೇಳಿಕೊಳ್ಳಲಿ ಜನಪದರು ಯಾವುದೇ ಭೇದಭಾವವಿಲ್ಲದೆ ಹೋಳಿಯನ್ನು ಆಚರಿಸುತ್ತಾರೆ, ಆಡುತ್ತಾರೆ. 'ಹೊಯ್ಕಂಡ ಬಾಯಿಗೆ ಹೋಳ್ಗಿ ತುಪ್ಪ' ಎಂದು ಹೋಳಿಗೆ ಊಟ ಮಾಡಿ ಸಂತೋಷಪಡುತ್ತಾರೆ.

ಈ ಹಬ್ಬದ ಎಲ್ಲ ಅಂಗಗಳಲ್ಲೂ ಗಂಡಸರ ಉಲ್ಲಾಸ, ಸಂತೋಷ, ಚಟುವಟಿಕೆ ಮತ್ತು ಸೃಜನಶೀಲ ಆಕಾಂಕ್ಷೆಗಳು ತುಂಬಿಕೊಂಡಿವೆ. ಪ್ರತಿ ವರ್ಷ ಫಾಲ್ಗುಣ ಮಾಸದಲ್ಲಿ ಆಚರಿಸಲಾಗುವ ಈ ಹಬ್ಬ ಜಗತ್ತಿನ ಮನಮೋಹಕ ಕಾಲಘಟ್ಟವೆನಿಸಿದ ವಸಂತದ, ವೈಭವದ ಆಗಮನದ ಮುನ್ಸೂಚನೆಯಾಗಿರುತ್ತದೆ. ಈ ಹೋಳಿ ಹಬ್ಬದಲ್ಲಿಯೇ 'ಕಾಮದಹನ' ನಡೆಯುತ್ತದೆ. ಈ ಕಾಮದಹನ ಕೇವಲ ಪೌರಾಣಿಕ ಕಲ್ಪನೆಯ ಕತೆಯಾಗಿರದೆ ಮನುಷ್ಯ ತನ್ನೊಳಗೆ ಅಡಗಿಸಿಕೊಂಡಿರುವ ಜೀವ ವಿರೋಧಿಯಾದ ಕಾಮನೆಗಳನ್ನು ದಹಿಸಿ, ಮಾನವೀಯ ಸಂವೇದನೆಗಳನ್ನು ಆವಾಹಿಸಿಕೊಳ್ಳುವ ಸಂಕೇತವಾಗಿದೆ. ಈ ಹಬ್ಬದ ಸಂದರ್ಭದಲ್ಲಿ ಹೊಸ ಭಾವನೆಯ ಹಾಡುಗಳು ಅತ್ಯಂತ ಶಕ್ತಿಯುತವಾಗಿ ಮೈದಳೆದು ಮನುಷ್ಯನ ಜೀವ ಚೈತನ್ಯಗಳನ್ನೆಲ್ಲಾ ಗರ್ಭೀಕರಿಸಿಕೊಂಡು ಹೊಮ್ಮುತ್ತವೆ. ಈ ಹಾಡುಗಳ ಭಾವ ವೈವಿಧ್ಯ, ಭಾಷಾವೈವಿಧ್ಯ ಮತ್ತು ಲಯ ವೈವಿಧ್ಯ ಸಹೃದಯರ ಮನಸ್ಸನ್ನು ಕುಣಿಸುತ್ತವೆ, ತಣಿಸುತ್ತವೆ. ಹೋಳಿ ಹಾಡುಗಳಲ್ಲಿ ಪೌರಾಣಿಕ ಹಾಡುಗಳಿವೆ. ಸಾಮಾಜಿಕ ಹಾಡುಗಳಿವೆ.

ಭಾವಗೀತಾತ್ಮಕ ಹಾಡುಗಳಿವೆ ಮತ್ತು ಸಂಕೀರ್ಣ ಹಾಡುಗಳೂ ಇವೆ. ಅವುಗಳ ಭಾಷೆ, ಭಾವ ಮತ್ತು ರಾಗ ವೈವಿಧ್ಯಗಳು ಒಂದು ಗಂಭೀರ ಅಧ್ಯಯನಕ್ಕೆ ಆಹ್ವಾನವೀಯುತ್ತವೆ. ಹೋಳಿ ಹಬ್ಬದ ಬಹುಮುಖತೆಯ ದರ್ಶನ ಮಾಡಿಸುವ ಈ ಹಾಡುಗಳು ಜನಪದ ಹಾಡುಗಳ ಭಂಡಾರಕ್ಕೆ ಅಮೂಲ್ಯವಾದ ಸೇರ್ಪಡೆಯಾಗಿವೆ. ಅವುಗಳ ಇನ್ನೊಂದು ವೈಶಿಷ್ಟ್ಯವೆಂದರೆ ಅವು ಕೇವಲ ತ್ರಿಪದಿ ಸ್ತರದಲ್ಲೇ ಉಳಿಯದೇ ವಿವಿಧ ಜನಪದ ಛಂದೋಬಂಧಗಳಲ್ಲಿ ವಿಶಾಲ ವ್ಯಾಪ್ತಿಯ ಅಭಿವ್ಯಕ್ತಿಯ ಹಾಡುಗಳಾಗಿ ರೂಪುಗೊಂಡಿವೆ.

ಹೋಳಿಹುಣ್ಣಿವಿ ಬಂತು ಹೋಳಿಗಿ ಮಾಡುದು
ಬೋಳೆಮ್ಮಿ ತುಪ್ಪ ಕಾಸುದು ಬತ್ತು! ಎಲ್ಲಾರಿಗಿ
ಹೋಳಬಾಯಿ ಹಿಡಿದು ತುರುಕೂದುಬತ್ತು[೧೪]

ಎಂದು ಹಾಡುತ್ತ ಹಲಗೆ ಹೊಡೆಯುತ್ತಾರೆ, ಹೊಯ್ಕೊಳ್ಳುತ್ತಾರೆ.

**ಹಂತಿ ಹಾಡುಗಳು**

ಒಕ್ಕಲಿಗನು ಕೃಷಿ ಜೀವನದ ಕಣ ಮಾಡುವ ಸಂಭ್ರಮದಲ್ಲಿ ಹಂತಿ ಹಾಡುಗಳನ್ನು ಹಾಡುತ್ತಾನೆ. ಈ ಹಂತಿ ಜನಪದ ಹಾಡುಗಳು ಎಲ್ಲರ ಮನವನ್ನು ಆಕರ್ಷಿಸುವುದರಲ್ಲಿ ಎರಡು ಮಾತಿಲ್ಲ. ನಮ್ಮ ಗಡಿನಾಡಿನ ಹಂತಿಗಳೆಂದರೆ ನೂರಾರು ಚೀಲಗಳ ರಾಶಿ ನೋಡಿದರೆ ಸುಗ್ಗಿಯ ಸೊಬಗನ್ನು ಕಾಣಬೇಕು. ನೂರು ಎತ್ತುಗಳ ಮೋಡಿಯ ಖಣವನ್ನು ನೋಡಿದರೆ, ಮಲೆನಾಡಿನವರಿಗೆ ದಂಗು ಬಡಿಯುವಂತಿದ್ದು, ಉತ್ತಿ-ಬಿತ್ತಿ ಬೆಳೆ ಬೆಳೆದು ರೈತನಿಗೆ ಸುಗ್ಗಿಯು ದೊಡ್ಡ ಹಬ್ಬವೆಂದೇ ಆಚರಿಸುತ್ತಾರೆ. ಹಂತಿ ಮಾಡಿದ ರೈತರು ದಣಿವನ್ನು ಇಂಗಿಸಲು ಹಲಗೆ, ವಾದ್ಯಗಳೊಂದಿಗೆ ಕುಣಿದಾಡಿ ಹಾಡುವ ನೋಟ ರಮ್ಯವಾದದು. ರೈತರು ಹಂತಿಯ ಹಾಡುಗಳನ್ನು ಬೆಳಗು ಹರಿಯುವವರೆಗೂ ಹಾಡುತ್ತಾರೆ.

ದುಡಿದು ಬಸವಳಿದ ರೈತನಿಗೆ ವಿವಿಧ ವಿನೋದಾವಳಿಗಳು ಬೇಕು. ಈ ಸಮಯ ಪ್ರಸಂಗಗಳನ್ನು ಅವನ್ನು ವಿಶೇಷವಾಗಿ ತನ್ನ ಬಿಡುವಿನ ವೇಳೆಯಲ್ಲಿ ತಂದುಕೊಳ್ಳುವನು. ಸುಗ್ಗಿ ಮುಗಿಸಿ ಬೇಸಿಗೆಯ ವಿರಾಮ ಕಾಲದಲ್ಲಿ ರೈತರು ಆಟ-ನೋಟಗಳ ಹವ್ಯಾಸಕ್ಕೆ ಮೊರೆಹೋಗುವರು. ಮೋಜು-ಮಜಲಿ ಹಬ್ಬಗಳೂ ಜಾತ್ರೆಗಳೂ ಬರುವವು. ಇವೆಲ್ಲ ಬರುವ ಮುನ್ನವೇ ಅನೇಕ ದಿನಗಳವರೆಗೆ ದಿನನಿತ್ಯ ಹೆಜ್ಜೆ ಹಾಕುವುದನ್ನು ಕಲಿತು ಸಮಯ ಬಂದಾಗ ಅವರು ನಲಿನಲಿದು ಕುಣಿಯುವುದನ್ನು ರೂಢಿಸಿಕೊಳ್ಳುತ್ತಾರೆ.

ಬಿತ್ತಿ ಹೊಲದಾಗ ಬಿತ್ತಿ ಹಾಯಕಿ ಯಾರು
ಮುತ್ತಿನ ಉಡಿಯಕ್ಕಿ ಬನದಮ್ಮ । ಹಾಯ್ದರ ।
ಬಿಚ್ಚಿ ಬಿದ್ದಾವ ಬಿಳಿ ಜ್ವಾಳ ॥[೧೫]

ಕೃಷಿಯನ್ನೇ ಬದುಕಿನ ಜೀವಾಳವನ್ನಾಗಿಸಿಕೊಂಡ ಕೊಪ್ಪಳ ಜಿಲ್ಲೆ ಜನಪದರು ವಿಶೇಷ ಸಂದರ್ಭಗಳಲ್ಲಿ ಹಾಡಿ-ಕುಣಿದಾಗುವ ಉಲ್ಲಾಸಿತದು ಮನೋಭಾವದವರಾಗಿದ್ದಾರೆ. ಭೂಮಿತಾಯಿಯ ಹರಕೆಯು ನಮ್ಮೆಲ್ಲರ ಬದುಕನ್ನು ಬಂಗಾರವಾಗಿಸುತ್ತದೆ. ವರ್ಷವಿಡೀ ದುಡಿದು ಬೆಳೆದ ಬೆಳೆಯನ್ನು ರಾಶಿ ಮಾಡಿ ವರ್ಷವಿಡೀ ಬಳಸುವುದು ಕೃಷಿಕರ ಜೀವನವಾಗಿದೆ. ರಾಶಿ ಮಾಡುವಾಗ ಹಂತಿ

ತಿರುಗಿಸುತ್ತ ರಾತ್ರಿಯೆಲ್ಲ ಹಾಡುತ್ತ ಮೇಟಿ ಕಟ್ಟಿಗೆಯ ಮೇಲೆ ಕುಳಿತು ಎತ್ತುಗಳನ್ನು ತಿರುಗಿಸುತ್ತ ಹಾಡುವುದನ್ನು ಕೇಳಿಯೇ ಆನಂದಿಸಬೇಕು.

ಎಂಟೆತ್ತು ಕಟ್ಟಿಕೊಂಡು ಕಂಟ್ಯಾಗ ಬರುವಾಗ
ಗಂಟ ಬಿದ್ದಾಳೊ ಗೋಪಮ್ಮ । ಗೋಪಮ್ಮನ ಹೊಟ್ಟೀಲಿ
ಬಂಟ ಹುಟ್ಯಾನೋ ಬಸವಣ್ಣೋ ॥[೧೬]

ಜನಪದರಿಗೆ ಎತ್ತುಗಳೆಂದರೆ ಶಿವನ ವಾಹನವಾದ ನಂದಿಯೇ ಆಗಿದೆ. ಅದು ಭೂಲೋಕಕ್ಕಿಳಿದು ಬಂದಿದೆಯೆಂಬ ನಂಬಿಕೆಯನ್ನು ಹೊಂದಿದ್ದಾರೆ. ಎತ್ತುಗಳನ್ನು ಕಾರಹುಣ್ಣಿಮೆ ಸಂದರ್ಭದಲ್ಲಂತೂ ವಿಶೇಷವಾಗಿ ಸಿಂಗರಿಸುತ್ತಾರೆ. ಕೂರಿಗೆ ಸಾಗುವಾಗ ಮೊದಲು ಬಸವನ ಪೂಜೆಯಾಗಬೇಕು ಎಂಬ ಸಂಪ್ರದಾಯವನ್ನಿಟ್ಟಗಕೊಂಡಿದ್ದಾರೆ.

ತುಂಬಿದ ಹೊಳೆಯಾಗ ಕೊಂಬೆರಡು ಕಾಣತಾವ
ಬಂಗಾರ ದಿಣಿಯ ಬಸವಣ್ಣೋ, ಬರುವಾಗ
ರೆಂಬೆರಾರುತಿ- ಬೆಳಗ್ಯಾರೋ ॥
ಹಾದಿಯ ಹೊಲನೋಡು ಗೋಧಿಯ ತೆನೆ ನೋಡು
ಹೋರಿ ಮೇಸಿನಿ ಭುಜನೋಡು । ಮಾವಯ್ಯ
ಮೀಸಿ ತಿರಿವಿನಿ ಉರಿನೋಡೋ ॥[೧೭]

ಬೆಳದಿಂಗಳ ರಾತ್ರಿಯಲ್ಲಿ ಹಂತಿ ತಿರುಗಿಸುತ್ತ ದೇವ-ಸ್ತುತಿ, ಬಸವ ನಾಮಾವಳಿ, ಭೂಮಿತಾಯಿಯ ನೆನೆಕೆ, ಶೃಂಗಾರ, ಸಂವಾದ, ವೀರ ಮುಂತಾದ ರಸಗಳುಳ್ಳ ಹಾಡುಗಳು ಎಲ್ಲ ಹೊಲಗಳಲ್ಲಿ ಕೇಳಿಬರುತ್ತವೆ. ಸುಗ್ಗಿಯ ಸಂತಸದ ಸೌಹಾರ್ದತೆಯ ಜೀವನ ಇಂದು ಬದಲಾಗಿದೆ. ಯಂತ್ರಯುಗದ ಆರ್ಭಟದ ಅಟ್ಟಹಾಸದಿಂದ ಇಂಥ ಮಧುರಕ್ಷಣಗಳು ಮರೆಯಾಗುತ್ತಿವೆ. ಹಳ್ಳಿ ಜೀವನ ಸೊಗಡು, ಜನಪದತತ್ವ ಈ ಹಾಡುಗಳಲ್ಲಿ ನುಡುಗಟ್ಟು ನಿಲ್ಲುತ್ತದೆ.

### ಡೊಳ್ಳಿನ ಪದಗಳು

ಡೊಳ್ಳು ಎಂಬುದೊಂದು ಚರ್ಮವಾದ್ಯ. ಅದನ್ನು ಬಾರಿಸುತ್ತ ಹಾಡುವ ಪದಗಳನ್ನು ಡೊಳ್ಳಿನ ಪದಗಳೆಂದು ಕರೆಯಲಾಗುತ್ತದೆ. ಇಲ್ಲಿ ಡೊಳ್ಳು ಪ್ರಧಾನವಾದ ವಾದ್ಯವಾಗಿರುವುದರಿಂದ ಈ ರೀತಿ ಕರೆಯುವುದು ವಾಡಿಕೆ. ಅಂದರೆ ಜನಪದರ ಪರಿಪಾಠ ಏನೆಂದರೆ, ತಾವು ಕರಗತ ಮಾಡಿಕೊಂಡು ಬಂದಿರುವ ಹಾಡಾಗಲಿ ಕುಣಿತವಾಗಲಿ ಅದರಲ್ಲಿ ಮುಖ್ಯವಾದ್ಯವನ್ನು ಹೆಸರಿಸಿ ಅದಕ್ಕೆ ಹೆಸರಿಸುವುದು. ಉದಾಹರಣೆಗೆ ಚೌಡಕಿ ಪದಗಳಲ್ಲಿ ಚೌಡಕಿ, ಏಕತಾರಿ ಪದಗಳ, ಎಕತಾರಿಕಾಯಿ, ಕೋಲಾಟದ ಪದಗಳಲ್ಲಿ ಕೋಲು ಹಾಗೆಯೇ ಕುಣಿತಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಜಗ್ಗಲಗಿ ಮೇಳದಲ್ಲಿ ಜಗ್ಗಲಗಿ, ಕರಡಿ ಮೇಳದಲ್ಲಿ ಕರಡಿ, ಹಲಗಿ ಮಜಲಿನಲ್ಲಿ ಹಲಗಿ ಇತ್ಯಾದಿಯಾಗಿ ಡೊಳ್ಳು ವಾದ್ಯವನ್ನು ಬಳಸಿಕೊಂಡು ಬಾರಿಸುತ್ತ ಹಾಡುತ್ತಿದ್ದರೆ ಡೊಳ್ಳಿನ ಪದಗಳೆಂದು, ಅದನ್ನು ಸೊಂಟಕ್ಕೆ ಕಟ್ಟಿಕೊಂಡು ಬಾರಿಸುತ್ತ ಕುಣಿದರೆ ಡೊಳ್ಳು ಕುಣಿತ ಎಂದು ಕರೆಯುತ್ತಾರೆ. ಜನಪದ ವಾದ್ಯಗಳಿಲ್ಲದ ಗ್ರಾಮೀಣ ಬದುಕೇ ಇಲ್ಲ ಎನ್ನುವಷ್ಟರಮಟ್ಟಿಗೆ ಅವು

ಅವರ ಜೀವನದಲ್ಲಿ ಬೆರೆತುಕೊಂಡಿವೆ. ಅವು ಜಾತ್ರೆ, ಉತ್ಸವ, ಮದುವೆ, ಮೆರವಣಿಗೆ, ಶುಭಾಶುಭ ಸಂದರ್ಭಗಳಲ್ಲಿ ಮಹತ್ವದ ಪಾತ್ರವಹಿಸುತ್ತವೆ.

ಜಾತಿ ವ್ಯವಸ್ಥೆ ಹಾಗೂ ಜನಪದ ವಾದ್ಯಗಳು ಪರಸ್ಪರಾವಲಂಬಿಗಳಾಗಿರುತ್ತವೆ. ಕೊರವರು ಸನಾದಿ, ಕಹಳೆ ಊದುವುದು, ಹೊಲೆಯರು ಕೊಂಬು ಕಹಳೆ ಊದುವುದು, ಮಾದಿಗರು ಹಲಗೆ ಬಾರಿಸುವುದು, ಕುರುಬರು ಡೊಳ್ಳು ಬಡಿಯುವುದು ಹೀಗೆ ಆಯಾ ಸಮುದಾಯಕ್ಕೆ ಸಂಬಂಧಿಸಿದವುಗಳಾಗಿವೆ. ಡೊಳ್ಳು ಚರ್ಮವಾದ್ಯಕ್ಕೆ ಸಂಬಂಧಿಸಿದುದು. ಚರ್ಮವಾದ್ಯಗಳ ಹುಟ್ಟಿನ ಬಗ್ಗೆ ಗಮನಿಸಿದರೆ, ಬೇಟೆಯ ಮೂಲಕ ಪ್ರಾಣಿಗಳ ಚರ್ಮವನ್ನು ಸಂಗ್ರಹಿಸಿ ನಾನಾ ಮಾದರಿಯ ವಸ್ತುಗಳನ್ನು ತಯಾರಿಸಿಕೊಂಡು ನಾದ ಹುಟ್ಟಿಸಿಕೊಂಡಿರಬೇಕು.

ಬೌದ್ಧಿಕವಾದ ಬೆಳವಣಿಗೆ ಹೊಂದಿದಂತೆ ವಾದ್ಯಗಳು ಬೇರೆ ಬೇರೆ ಆಕಾರ ಪಡೆದು ನಾದ ಕೊಡುವ ಕಾರ್ಯ ಮಾಡಿರಬೇಕು. ಚರ್ಮ ಭಾರತೀಯರ ಧಾರ್ಮಿಕ ಪರಿಕಲ್ಪನೆಯಲ್ಲಿ ಮೈಲಿಗೆಯ ವಸ್ತು ಎಂಬ ಭಾವನೆ ಇರುವುದರಿಂದ ಚರ್ಮವಾದ್ಯಗಳೆಲ್ಲ ಕೆಳವರ್ಗದವರ ಪಾಲಿಗೆ ಉಳಿದು, ಮಿಕ್ಕ ಚರ್ಮೇತರ ವಾದ್ಯಗಳಲ್ಲಿ ಮೇಲ್ವರ್ಗದವರ ಪಾಲಾಗಿದೆ ಎಂದು ಹೇಳಬಹುದು. ಕುರುಬ ಸಮುದಾಯದಲ್ಲಿ ಬಳಕೆಯಲ್ಲಿರುವ ಡೊಳ್ಳು ವಾದ್ಯ ಕೂಡ ಆ ಸಮುದಾಯಕ್ಕೆ ಸಂಬಂಧಿಸಿದುದಾಗಿದೆ. ಕುರುಬ ಸಮುದಾಯದ ಸಾಂಸ್ಕೃತಿಕ ಜೀವನದೊಂದಿಗೆ ಸಮರಸವಾದ ಬೆರೆತುಕೊಂಡಿರುವ ಡೊಳ್ಳುವಾದ್ಯ, ಹಳ್ಳಿಗರ ಸಾರ್ವಜನಿಕ ಹಬ್ಬ-ಹರಿದಿನ, ಜಾತ್ರೆ-ಉತ್ಸವ ಮೊದಲಾದ ಸಂದರ್ಭಗಳಲ್ಲಿ ವಿಶೇಷವಾದ ಬಳಕೆಯಾಗುತ್ತದೆ. ನಮ್ಮ ಜನಪದ ವರ್ಗಗಳಲ್ಲಿ ಪ್ರತಿಯೊಂದು ಜನಪದ ವಾದ್ಯದ ಬಗೆಗೆ ದಂತಕಥೆಗಳು ಕೇಳಿಬರುತ್ತವೆ.

ಪರಮೇಶ್ವರನು ಸಿದ್ದಗಿರಿಯಲ್ಲಿ ಜಪ ಮಾಡಲು ಕುಳಿತಿರುವಾಗ ಚಾರವಾದಕನೆಂಬುವವನು ಅಲ್ಲಿ ಪರಿಚಾರಕವಾಗಿ ಇದ್ದನು. ಶಿವದರ್ಶನಕ್ಕಾಗಿ ಬಂದ ಪಾರ್ವತಿ ಹಾಗೂ ನಂದಿಯನ್ನು ಸೇವಕ ಚಾರವಾದಕ ತಡೆದು ನಿಲ್ಲಿಸಿದನು. ಚಾರವಾದಕನ, ಪ್ರಾಮಾಣಿಕತೆ ಕಾರ್ಯದಕ್ಷತೆ, ಶ್ರೇಷ್ಠ ಭಕ್ತಿಗೆ ಮೆಚ್ಚಿದ ಶಿವನು ಅವನ ದೇಹದ ಚರ್ಮ ನರನಾಡಿಗಳಿಂದ ಡೊಳ್ಳನ್ನು ತಯಾರಿಸಿ ಕುರಿಕಾಯುವ ಕುರುಬರಿಗೆ ನೀಡಿದನೆಂದು ದಂತಕಥೆ ಹೇಳುತ್ತದೆ. ಹಾಲುಮತದ ಆರಾಧ್ಯ ದೇವರಾದ ಮಾಳಿಂಗರಾಯ, ಬೀರಣ್ಣ ದೇವರು, ಮಾಯವ್ವ, ಅಮೋಘಸಿದ್ದ, ಸೂರಂದೇವಿ ಮುಂತಾದ ದೇವರುಗಳನ್ನು ಕುರಿತು ಹಾಡುಗಳು ದಟ್ಟವಾಗಿ ಬೆಳೆದುಬಂದ ಉತ್ತಮ ರೀತಿಯ ಜಾನಪದ ಸಾಹಿತ್ಯ ಡೊಳ್ಳುಕುಣಿತ ಪ್ರತಿ ಉತ್ಸವಗಳಲ್ಲಿ ಇದ್ದೇ ಇರುತ್ತವೆ. ದೇವರ ಸ್ತುತಿಗಳಲ್ಲದೆ, ರಾಮಾಯಣ–ಮಹಾಭಾರತಗಳನ್ನು ಪುರಾಣ ಕಥೆಗಳನ್ನು ಡೊಳ್ಳು ಚಳ್ಳಮ್ಮಗತ್ತಿನಲ್ಲಿ ಹಾಡುತ್ತಾರೆ.

ದೇವರ ಮುಂದ ಕುಂತಿಯೋ ತಮ್ಮ
ದೇವರ ದ್ಯಾನೊಂದಿರಬೇಕೋ
ದೇವರ ದ್ಯಾನೊಂದಿದ್ದರ ಸಾಕೋ
ದೇವರ ನಿನ್ನಲ್ಲಿದ್ದಂಗೋ ||

ಹೀಗೆ ಡೊಳ್ಳಿನ ಹಾಡು ಉತ್ತಮ ಸಾಹಿತ್ಯ ಅಂಶಗಳನ್ನು ಒಳಗೊಂಡಿವೆ. ಹಾಲುಮತ ಸಮುದಾಯದ ಸಮಾಜ, ಸಂಸ್ಕೃತಿ ಈ ಹಾಡುಗಳಲ್ಲಿ ಹುದುಗಿರುತ್ತದೆ.

## ಕೋಲಾಟ ಪದಗಳು

ಜನಪದ ಗೀತ ಪ್ರಕಾರಗಳಲ್ಲಿ ಕೋಲಾಟ ಪದಗಳು ಒಂದು. ಕೋಲಾಟ ಪದಗಳಲ್ಲಿ ಹಾಡಿನೊಂದಿಗೆ ವಾದ್ಯ, ನೃತ್ಯ ಸಮಾಗಮ ಹೊಂದಿರುವುದು ಕಂಡುಬರುವುದು. ಕೋಲಿನಿಂದ ಕೋಲಿಗೆ ಕುಟ್ಟಿ ಅದನ್ನೇ ತಾಳ ಲಯವನ್ನಾಗಿ ಮಾಡಿಕೊಂಡು ಅದಕ್ಕೆ ಸರಿಯಾಗಿ ಹೆಜ್ಜೆ ಹಾಡುತ್ತಲೇ ಕುಣಿಯುವುದು ಕೋಲಾಟ. ಈ ವಾದ್ಯದ ಮೂರ್ತಕ್ಕೆ ಮಣಿದು ಕೋಲಾಟದಲ್ಲಿ ಏರಿಳಿತ ಉಂಟಾಗುವುದು. ಕೋಲಾಟದೊಡನೆ ಹಾಡುವ ಪದಗಳಿಗೆ ಕೋಲು ಪದಗಳೆಂದು ಕರೆಯಲಾಗಿದೆ. ಕೋಲಾಟಕ್ಕೆ ಕನಿಷ್ಠ ಮೂರು ಜನರಾದರೂ ಬೇಕು. ಸಂಖ್ಯೆ ಹೆಚ್ಚಿದ್ದರೆ ವಾಸಿ; ಭಾಗವಹಿಸುವವರ ಸಂಖ್ಯೆ ಮಿತಿಮೀರಿದರೆ ಗುಂಪು ಕುಣಿತದ ಲಯದ ಬದ್ದತೆಗೆ ಭಂಗ ಬರುವುದು ಸುಲಭಸಾಧ್ಯ. ಆದ್ದರಿಂದಲೇ ಕೋಲಾಟದ ಮೇಳದಲ್ಲಿ ಎಂಟು ಇಲ್ಲವೆ ಹನ್ನೆರಡು ಜನರಿದ್ದರೆ ಆಟ ಹತೋಟಿಗೆ ಬರುವುದು. ಮೇಳದ ಸಂಖ್ಯೆ ಯಾವಾಗಲೂ ಸಮಸಂಖ್ಯೆಯಲ್ಲಿರ ಬೇಕಾದುದು ಅಗತ್ಯ. ವಿಷಮ ಸಂಖ್ಯೆಯಲ್ಲಿದ್ದರೆ ಗುಂಪಿನಲ್ಲಿಯೇ ಒಳಗುಂಪು ಮಾಡಿ ಆಡಲು ಬರುವುದಿಲ್ಲ.

ಕೋಲು ಹಾಕುವಾಗ ಒಬ್ಬರಿಗೊಬ್ಬರು ತಂತಮ್ಮ ಕೈ ಗೋಲುಗಳಿಂದ ಇತರರೊಡನೆ ಪೆಟ್ಟು ಹಾಕುತ್ತ ಮುಂದೆ ಸಾಗುವರು. ಪ್ರತಿಯೊಬ್ಬರಲ್ಲಿ ಎರಡು ಕೋಲುಗಳಿರುವುವು. ಒಂದು ಕೈಯಿಂದ ಒಬ್ಬನ ಕೈ ಕೋಲಿಗೆ ಪೆಟ್ಟು ಕೊಡುತ್ತಲೇ ಇನ್ನೊಬ್ಬನ ಕೈ ಗೋಲಿಗೆ ಎರಡನೆಯ ಕೈಯಲ್ಲಿರುವ ಕೋಲಿನಿಂದ ಪೆಟ್ಟು ಕೊಡುತ್ತಾನೆ. ಕೋಲಿನ ಪೆಟ್ಟುಗಳಿಗೆ ಸರಿಯಾಗಿ ಅವರು ಕಾಲು ಕೀಳುವರು. ಆ ತಾಳಕ್ಕೆ ಸರಿಯಾಗಿ ಕೋಲಾಟದ ಪದ ಹಾಡುವರು.

ಕೋಲಾಟ ಪದಗಳಿಗೆ ಹಿಂದೆ ನಡೆದ ಯಾವುದೇ ಒಂದು ಘಟನೆ ವಸ್ತುವಾಗಿ ನಿಲ್ಲಬಲ್ಲುದು. ಅವರು ಹಾಡುವ ಹಾಡುಗಳಲ್ಲಿ ಪೌರಾಣಿಕವಾಗಿರಬಹುದು. ಇಲ್ಲವೆ ಐತಿಹಾಸಿಕವಾಗಿರಬಹುದು. ಮುಂದೆ ನಡೆಯ ಬಹುದಾದ ಕಾಲಜ್ಞಾನವಿದ್ದರೂ ಇರಬಹುದು. ಆ ಘಟನೆಯನ್ನೇ ಮುಖ್ಯವಾಗಿಟ್ಟುಕೊಂಡು ಕೋಲು ಪದ ರಚಿತವಾಗುತ್ತದೆ. ಕೋಲಾಟ ಒಂದು ಮುಖ್ಯ ಜನಪದ ಕಲೆ, ಸಾಹಿತ್ಯ, ಸಂಗೀತಗಳನ್ನೊಳಗೊಂಡ ಆಕರ್ಷಕ ಕೂಟನೃತ್ಯ. ಇದು ಹಳ್ಳಿಗರಿಗೆ ಸುಲಭ ಸಾಧ್ಯವೂ, ವೈವಿಧ್ಯಮಯವೂ ಆದ ಒಂದು ಪ್ರಮುಖ ಮನೋರಂಜನಾ ಪ್ರಕಾರ. ಸಾಮಾನ್ಯವಾಗಿ ಪ್ರತಿಹಳ್ಳಿಗಳಲ್ಲಿ ಈ ಕೋಲಾಟ ಇದ್ದೇಇರುತ್ತದೆ. ಅವರಲ್ಲಿ ನೂರಕ್ಕೆ ಎಂಬತ್ತು ಮಂದಿಯಾದರೂ ಇದನ್ನು ಬಲ್ಲವರೇ ಆಗಿರುತ್ತಾರೆ. ಹಬ್ಬ-ಹರಿದಿನಗಳಲ್ಲಿ, ಮದುವೆ ಉತ್ಸವಗಳಲ್ಲಿ, ವಿಶೇಷ ಸಮಾರಂಭಗಳಲ್ಲಿ ಅವರು ತಪ್ಪದೇ ಕೋಲು ಹುಯ್ಯುವುದು ಅಭ್ಯಾಸವಾಗಿದೆ. ಕೋಲಾಟ ಇಲ್ಲದ ಯಾವ ವಿಶೇಷ ಕಾರ್ಯಕ್ರಮಗಳೂ ಅವರಿಗೆ ಕಳೆಕಟ್ಟುವುದಿಲ್ಲ. ಸುಗ್ಗಿಯ ಸಮಯಗಳಲ್ಲಿ ರೈತರಿಗೆ ಹೆಚ್ಚಾಗಿ ವಿರಾಮ ದೊರೆಯುವುದರಿಂದ ಅವರ ಹಿಗ್ಗಿಗೆ ಪಾರವಿರುವುದಿಲ್ಲ. ಏಕೆಂದರೆ ಆ ಸಮಯಗಳಲ್ಲಿ ನಾಟಕ ಕಲಿಯುವುದು, ಕೋಲಾಟವಾಡುವುದು, ಮೀನು ಬೇಟೆ ಹೋಗುವುದು, ರಾತ್ರಿಯ ವೇಳೆ ಕಣದಲ್ಲಿ ಹುಲ್ಲು ಒಕ್ಕುತ್ತ ಗಾಡಿ ಪದಗಳನ್ನು ಹಾಡುವುದು ಜನರ ಮನೋರಂಜನೆಯ ಶೈಲಿ.

ಕೋಲು ಕೋಲೆನ್ನ ಕೋಲೆ
ರನ್ನದ ಕೋಲು ಕೋಲ
ಕೋಲು ಕೋಲೆನ್ನಿರೆ ಶಂಭು ಶಂಕರಗೆ
ಕೋಲು ಕೋಲೆನ್ನಿರೆ

ಕೋಲು ಕೋಲ ಶ್ರೀ ಮುದ್ದು ಕೋಲು ಕೋಲುಕೋಲ
ಕೋಲು ಕೋಲಿನ ರನ್ನದ ಕೋಲು ಕೋಲಿನ
ಕೋಲುವಾಡಿರಿ ಶಿವನ ಸ್ಮರಿಸಬನ್ನಿರಿ[೧೯]

ಹೆಚ್ಚು ಕಲಾಮಯವೂ ಸುಲಭ ಸಾಧ್ಯವೂ ಆದ ಈ ಕೋಲಾಟವನ್ನೇ ಬಹಳವಾಗಿ ಅವಲಂಬಿಸುತ್ತಾರೆ. ಸುಗ್ಗಿಯ ಸಮಯಗಳಲ್ಲಿ ತಿಂಗಳು ಬೆಳಕಿನಲ್ಲಿ ಊರ ಬೀದಿಗಳಲ್ಲಿ ಊಟವಾದ ನಂತರ ಕೋಲಾಟವಾಡುವುದು ವಾಡಿಕೆ. ದಸರಾ, ದೀಪಾವಳಿ ಹಾಗೂ ಮೊಹರಂ ಹಬ್ಬದ ಸಂದರ್ಭದಲ್ಲಿಯೂ ಕೋಲಾಟ ಹಾಡುಗಳು ಕಂಡುಬರುತ್ತವೆ. ಕೋಲುಪದಗಳನ್ನು ಹೆಚ್ಚಾಗಿ ಬೇಡ ಸಮುದಾಯದವರು ಹಾಡುತ್ತಾರೆ.

### ಗೀಗೀ ಪದಗಳು

ಕರ್ನಾಟಕದಲ್ಲಿ ತುಂಬ ಪ್ರಸಿದ್ಧ ಮತ್ತು ವೈಶಿಷ್ಟ್ಯಪೂರ್ಣವಾದ ಜನಪದ ಗೀತ ಸಾಹಿತ್ಯದ ಪ್ರಕಾರಗಳಲ್ಲಿ ಲಾವಣಿಯೂ ಒಂದಾಗಿದೆ. ಕಥನಾತ್ಮಕ ಮತ್ತು ಭಾವಗೀತಾತ್ಮಕವಾದ ಈ ಮೌಖಿಕ ಸಂಪ್ರದಾಯ ವಸ್ತು, ತಂತ್ರ ಮತ್ತು ಧಾಟಿಗಳಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು, ಶೈಲಿಯನ್ನು ಹೊಂದಿದೆ. ಲಾವಣಿಗಳಲ್ಲಿ ಬಯಲು ಲಾವಣಿ ಮತ್ತು ಮೇಳ ಲಾವಣಿಗಳೆಂದು ಎರಡು ಪ್ರಕಾರಗಳಿವೆ. ಬಯಲು ಲಾವಣಿಯನ್ನು ಒಬ್ಬನೇ ಹಾಡಿದರೆ, ಮೇಳ ಲಾವಣಿಯಲ್ಲಿ ಮುಮ್ಮೇಳದಲ್ಲಿ ಇಬ್ಬರು, ಹಿಮ್ಮೇಳದಲ್ಲಿ ಇಬ್ಬರು ಗುಂಪಾಗಿ ಹಾಡುತ್ತಾರೆ. ಮೇಳ ಲಾವಣಿಯಲ್ಲಿ ದಪ್ಪ, ತುಂತಣಿ ತಾಳ ವಾದ್ಯಗಳು ಬಳಕೆಯಾಗುತ್ತವೆ. ಮೇಳ ಲಾವಣಿಗಳಲ್ಲಿ ಕೆಲವು ಸಾರಿ ಎರಡು ಪಕ್ಷಗಳು ಸ್ಪರ್ಧೆಗೆ ನಿಲ್ಲುತ್ತವೆ. ಹೆಣ್ಣು ಹೆಚ್ಚು ಎನ್ನುವ ಪಕ್ಷ ನಾಗೇಶಿ(ಕಲ್ಲ); ಗಂಡು ಹೆಚ್ಚು ಎನ್ನುವ ಪಕ್ಷ ಹರದೇಶಿ ತುರಾಯಿ ನೀತಿ ಬೋಧೆ ಮತ್ತು ಮನರಂಜನೆಯನ್ನು ದೊರಕಿಸಿಕೊಡುವುದೇ ಲಾವಣಿಯ ಉದ್ದೇಶವಾಗಿದೆ.

ಲಾವಣಿಯಲ್ಲಿ ಕಲಾವಿದರು ಮೊದಲು ದೇವತಾಸ್ತುತಿ ಹೇಳಿ ನಂತರ ಕಥಾಸಾರ ಆರಂಭಿಸುತ್ತಾರೆ. ಆರಂಭದ ಹಾಡು 'ಸಖಿ', ಕೊನೆಯ ಹಾಡು 'ಖ್ಯಾಲಿ' ಎನಿಸಿಕೊಂಡರೆ, ಮಧ್ಯದ ಹಾಡುಗಳೇ 'ಚೌಕುಗಳು'. ಇದು ಲಾವಣಿಯ ಶಿಲ್ಪ; ಒಂದು ಲಾವಣಿಯಲ್ಲಿ ೫ ರಿಂದ ೧೮ ಚೌಕುಗಳಿರುತ್ತವೆ. ಲಾವಣಿಯ ಕೊನೆಯ ಭಾಗದಲ್ಲಿ ಕವಿಯ ಊರು, ಆರಾಧ್ಯ ದೇವತೆಯ ಹೆಸರು ಇತ್ಯಾದಿಗಳು ಕಾಣಿಸುತ್ತವೆ. ಹಾಡುವಾಗ ಆರಂಭದಲ್ಲಿ ಪಲ್ಲವಿಯಿದ್ದು ಆ ಮೇಲೆ ಚೌಕು ನುಡಿ ಬರುತ್ತದೆ. ಪ್ರತಿಯೊಂದು ಚೌಕದ ನಂತರ ಪಲ್ಲವಿ ಪುನರಾವರ್ತನೆಯಾಗುತ್ತದೆ. ಪಲ್ಲವಿಯು ಹಾಡಿನ ಆಶಯವನ್ನೊಳಗೊಂಡಿರುತ್ತದೆ. ಪ್ರತಿ ಪಾದದ ಕೊನೆಗೆ ಹಿಮ್ಮೇಳದವರು ತುಂಬು ಉತ್ಸಾಹದಿಂದ ಗೀಗೀ ಜೀಜೀ ಎಂದು ರಾಗ ಎಳೆಯುತ್ತ ಲಾವಣಿಗೆ ಕರೆತರುತ್ತಾರೆ.

ಸರಸ್ವತೀ ಮಾಡುವೇನ ಸ್ತುತೀ
ಕೊಡು ಎನಗ ಮತಿ ಹಿಡಿಯುವೇನ ಚರಣಾ
ದೆಯೆ ತೋರಿ ಮಾಡು ವರಕರುಣಾ[೨೦]

ವಿದ್ಯಾಮಾತೆ ಸರಸ್ವತಿಯನ್ನು ಹಾಡಿಗೆ ಮೊದಲು ಸ್ಮರಿಸಿ ವಿಘ್ನಗಳು ಬರದಂತೆ ಪ್ರಾರ್ಥಿಸುತ್ತಾರೆ. ಲಾವಣಿ ಉತ್ತರ ಕರ್ನಾಟಕದ ಬೆಳಗಾವಿ, ಧಾರವಾಡ, ವಿಜಾಪುರ, ಬಾಗಲಕೋಟೆ, ಕೊಪ್ಪಳ, ಗುಲಬರ್ಗಾ ಮತ್ತು ಬೀದರ್ ಜಿಲ್ಲೆಗಳಲ್ಲಿ ಹೆಚ್ಚು ಪ್ರಚಾರದಲ್ಲಿರುವ ಒಂದು ಜನಪ್ರಿಯ ಗೀತ ಪ್ರಕಾರ. ಇದು ಮಹಾರಾಷ್ಟ್ರದಿಂದ ನಮ್ಮಲ್ಲಿಗೆ ಬಂದಿದೆ ಎಂಬುದು ನಿರ್ವಿವಾದ. ಲಾವಣಿ ಶಬ್ದದ ನಿಷ್ಪತ್ತಿಯ ಬಗ್ಗೆ ಮರಾಠಿ ವಿದ್ವಾಂಸರ ಅಭಿಪ್ರಾಯಗಳು ಈ ರೀತಿಯಾಗಿವೆ. ಲಾವಣಿವೆಂದರೆ ಸೌಂದರ್ಯ. ಸ್ತ್ರೀಯ ಸೌಂದರ್ಯವನ್ನು ಕುರಿತು ಹಾಡುವ ಹಾಡು ಲಾವಣಿಯಾಯಿತು. ಲಾವಣಿ ಎಂದರೆ ಬಿತ್ತಿಗೆ ಹೊಲದಲ್ಲಿ ಬಿತ್ತಿಗೆ ಮಾಡುವ ಹಾಡುವ ಲಾವಣಿಯಾಯಿತು. ಲಾವಣಿ ಎಂದರೆ ಮಾಂಡಣೆ, ಮಂಡಿಸುವುದು, ರಚಿಸುವುದು ಎಂದು ಇದರರ್ಥ. ಹೀಗಾಗಿ ವ್ಯವಸ್ಥಿತ ಪದರಚನೆಯೇ ಲಾವಣಿ ಆಯಿತು.

ಕನ್ನಡದಲ್ಲಿ ಲಾವಣಿ ಪ್ರಾರಂಭವಾದುದು ವಿಶಿಷ್ಟ ಧೋರಣೆಯಿಂದ. ಮರಾಠಿಯಿಂದಲೇ ಕನ್ನಡಕ್ಕೆ ಲಾವಣಿ ಬಂದಿದ್ದರೂ ಅವೆರಡರ ಆರಂಭಿಕ ಕೃಷಿ ಭಿನ್ನವಾಗಿದೆ. ಮರಾಠಿ ಲಾವಣಿ ತಮಾಶಾದ ಒಂದು ಭಾಗವಾಗಿ ಶೃಂಗಾರ ಪ್ರಧಾನ ಗೀತ ಪ್ರಕಾರವಾಗಿ ಬೆಳೆದು ಬಂದಿತು. ಕನ್ನಡದಲ್ಲಿ ಅದು ಒಂದು ಸ್ವತಂತ್ರ ಗೀತ ಪ್ರಕಾರವಾಗಿ ಬೆಳೆಯಿತು. ಶೃಂಗಾರ ಇಲ್ಲಿ ಅಪ್ರಧಾನವಾಯಿತು. ಆದಾಯ ತೆರಿಗೆ, ಸಂಗೊಳ್ಳಿ ರಾಯಣ್ಣನ ಗಲ್ಲು, ಹಲಗಲಿ ಬೇಡರ ನಿಶ್ಯಸ್ತ್ರೀಕರಣ ಹೋರಾಟ, ಸಾಲಗಾರ ಸಂಗ್ಯಾನ ಶೋಷಣೆ ಈ ಮುಂತಾದ ಸಮಕಾಲೀನ ಸಂಗತಿಗಳು ಲಾವಣಿಗೆ ವಸ್ತುವಾದದ್ದೊಂದು ವಿಶೇಷ. ಲಾವಣಿಯೊಂದಿಗೆ ಲಾವಣಿ ರಚನೆಕಾರರ ಹೊಸ ಪರಂಪರೆ ನಮ್ಮಲ್ಲಿ ಹುಟ್ಟಿಕೊಂಡಿತು. ಲಾವಣಿ ಕವಿಗಳಿಗೆ 'ವಸ್ತಾದಿ' ಎಂದು ಹೆಸರಿದೆ. ಇವರನ್ನು ಗುರು ಸಮಾನವಾದ ಗೌರವದಿಂದ ಕಾಣಲಾಗುತ್ತದೆ. ಬಹಳಷ್ಟು ಲಾವಣಿ ರಚಕರಿಗೆ ಅದು ಹವ್ಯಾಸವಾಗಿತ್ತು.

**ಮೊಹರಂ ಹಾಡುಗಳು**

ಇಸ್ಲಾಂ ಧರ್ಮದ ಐತಿಹಾಸಿಕ ಘಟನೆ ಹಾಗೂ ಆ ಧರ್ಮದ ಸಾಧು, ಸಂತರ ಚರಿತ್ರೆಗಳನ್ನು ನಿರೂಪಿಸುವ ಜೊತೆಗೆ ಹಿಂದೂ, ಮುಸ್ಲಿಂ ಬಾಂಧವ್ಯದ ಕೊಂಡಿಗಳಂತಿರುವ ಮೊಹರಂ ಪದಗಳನ್ನು ಹಾಡುವ ಪದ್ಧತಿ ಉತ್ತರ ಕರ್ನಾಟಕದಲ್ಲಿದೆ. ಅದರಲ್ಲೂ ಹೈದರಾಬಾದ್ ಕರ್ನಾಟಕ ಪ್ರದೇಶ ಕೊಪ್ಪಳ ಜಿಲ್ಲೆಯಲ್ಲಿ ವಿಶೇಷವಾಗಿ ರೂಢಿಯಲ್ಲಿದ್ದು ಅವುಗಳನ್ನು ಮೊಹರಂ ಸಂದರ್ಭದಲ್ಲಿ ಮಾತ್ರ ಹಾಡಲಾಗುತ್ತದೆ. ಹಿಜರಿ ಶಕೆಯ ಮೊಹರಂ ತಿಂಗಳಿನಲ್ಲಿ ಮುಸ್ಲಿಂ ಜನಾಂಗದವರು ಆಚರಿಸುವ ಒಂದು ವಿಶೇಷ ಆಚರಣೆ ಮೊಹರಂ.

ಧರಮಕ ಸತ್ತವರು ಸಿಗತಾರ ಕೋಟಿಗೊಬ್ಬ ಜನರಾ
ಮುಸಲ್ಮಾನ ಮಂದ್ಯಾಗ ದೊರಿತಾರ ಹುಸೇನ ಸಾಹೇಬರಾ
ಎಂದು ಪ್ರಾರಂಭವಾಗುವ ಒಂದು ಜನಪದ ಹಾಡು, ಮುಂದುವರಿದು.

ಜಂಗ ಎದರ ಬದರಾ ವೈರಿಯ ಮೋಸಕ ಜಯಕಾರಾ
ಶರಣು ಹೋಗುದವರಾ ಸ್ವರ್ಗಕ ಹೋದರಾ ಹಜರತರಾ[೨೧]

ಎಂಬ ವಿಷಯವನ್ನು ಹೇಳಿ ಮೊಹರಂ ಆಚರಣೆಗೆ ಮೂಲ ಕಾರಣವಾದ ಘಟನೆಯತ್ತ ನಮ್ಮ ಲಕ್ಷ್ಯವನ್ನು ಸೆಳೆದು ಮುಕ್ತಾಯಗೊಳ್ಳುತ್ತದೆ.

ಸುಮಾರು ಹದಿಮೂರು ನೂರು ವರ್ಷಗಳ ಹಿಂದೆ ಇಮಾಮ ಹುಸೇನರು ಧರ್ಮ ರಕ್ಷಣೆಗಾಗಿ ಸತ್ಯಕ್ಕಾಗಿ ಅರಬಸ್ತಾನದ ಕರ್ಬಲಾ ಮರುಭೂಮಿಯಲ್ಲಿ ಪ್ರಾಣ ನೀಡಿದ ಕಥೆಯನ್ನು ಈ ಹಾಡು ತಿಳಿಸುತ್ತದೆ. ಅಂದು ಅವರು ಕರ್ಬಲಾ ಕಾಳಗದಲ್ಲಿ ಸತ್ಯವನ್ನು ಎತ್ತಿ ಹಿಡಿಯಲು ಸುರಿಸಿದ ರಕ್ತ ಶಾಂತಿಪ್ರಿಯರಿಗೆ ಧರ್ಮ ರಕ್ಷಕರಿಗೆ, ನ್ಯಾಯಪರರಿಗೆ ಸ್ಫೂರ್ತಿಯ ಸೆಲೆಯಾಗಿದೆ. ಸತ್ಯ, ಧರ್ಮ, ನ್ಯಾಯಗಳ ಉಳಿವಿಗಾಗಿ ತಮ್ಮ ಪ್ರಾಣವನ್ನು ಬಲಿದಾನ ಮಾಡಿದ ಐತಿಹಾಸಿಕ ಸತ್ಯವನ್ನು ಒಮ್ಮೆ ಅಭಿಮಾನದಿಂದ ಮತ್ತೊಮ್ಮೆ ಭಾರವಾದ ಹೃದಯದಿಂದ ನಮ್ಮ ಜನಪದ ಕವಿಗಳು ಹಾಡಿದ ಹಾಡುಗಳೇ ಮೊಹರಂ ಪದಗಳು. ಈ ಹಾಡುಗಳನ್ನು ಕರ್ಬಲಾ ಪದಗಳು ಮತ್ತು ರಿವಾಯಿತ ಪದಗಳೆಂದು ಈ ಪ್ರದೇಶದಲ್ಲಿ ಕರೆಯುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಇವುಗಳನ್ನು ಹಾಡುವ ರೀತಿಯ ಬಗೆಗೆ ಹೆಚ್ಚು ವಿವರಗಳು ದೊರೆಯುವುದಿಲ್ಲ. ಉತ್ತರ ಕನ್ನಡದಲ್ಲಿ ಕರ್ಬಲಾ ಪದಗಳನ್ನೇ ಅಲಾಯಿ ಪದಗಳೆಂದು ಹೇಳುತ್ತಾರೆ. ಉತ್ತರ ಪ್ರದೇಶದ ಲಖನೌ, ರಾಜಾಸ್ತಾನ, ಜಯಪುರ, ಮಹಾರಾಷ್ಟ್ರದ ಫತೇಹಪುರ, ಆಂಧ್ರಪ್ರದೇಶದ ಹೈದರಾಬಾದ್ ನಗರಗಳಲ್ಲಿ ಮರ್ಶಿಯಾ ಗೀತೆ ಎಂದು ಹೇಳುತ್ತಾರೆ. ಇವು ಉರ್ದುವಿನಲ್ಲಿದ್ದು ಕರ್ಬಲಾ ಕಾಳಗದ ವಸ್ತು ವಿವರಣೆಗಳನ್ನು ಒಳಗೊಂಡಿರುತ್ತದೆ.[೨೨]

ಮುಸ್ಲಿಮರ ಹಿಜರಿ ಶಕ ವರ್ಷದಲ್ಲಿ ೧೨ ತಿಂಗಳುಗಳಿದ್ದು ಅವುಗಳಲ್ಲಿ ಮೊಹರಂ ತಿಂಗಳು ಒಂದು. ಹಿಜರಿಸನ್ ೬೧ನೆಯ ಮೊಹರಂ ತಿಂಗಳು ೧೦ನೆಯ ದಿನಾಂಕ ಹಾ।ಇ। ಹುಸೇನ ಮತ್ತು ಅವರ ಅನುಯಾಯಿಗಳು ಕರ್ಬಲಾ ಮರುಭೂಮಿಯಲ್ಲಿ ಹುತಾತ್ಮರಾದರು. ಇದರ ನೆನಪಿಗಾಗಿ ಶೋಕಗೀತೆಗಳನ್ನು ಮೊಹರಂ ತಿಂಗಳಿನಲ್ಲಿ ಹಾಡುವುದರಿಂದ ಇವುಗಳನ್ನು ಮೊಹರಂ ಪದಗಳೆಂದು ಕರೆಯಲಾಗುತ್ತದೆ. ಮೊಹರಂ ಆಚರಣೆಯ ಸಂದರ್ಭದಲ್ಲಿ ಅಲಂ ಇಡುವ ಕೋಣೆಯ ಎದುರು ಅಲಾವಿ ತೋಡಿ. ಅಲಾವಿ ಸುತ್ತ ಪ್ರದಕ್ಷಿಣೆ ಹಾಕುತ್ತ ಹಾಡುವ ಹಾಡುಗಳಿಗೆ ಈ ಪ್ರದೇಶದಲ್ಲಿ ಅಲಾವಿ ಹಬ್ಬದ ಪದಗಳು ಎನ್ನುವರು. ರಿವಾಯಿತ್ ಎಂದರೆ ಪರ್ಶಿಯನ್ ಭಾಷೆಯಲ್ಲಿ ರೂಢಿ, ಸಂಪ್ರದಾಯ ಎಂದರ್ಥ. ಹಾ।ಇ। ಹುಸೇನರ ಕತೆಗೆ ಸಂಬಂಧಿಸಿದ ಶೋಕಗೀತೆಗಳನ್ನು ಮೊಹರಂ ಆಚರಣೆಯ ಸಂದರ್ಭದಲ್ಲಿ ವರ್ಷವರ್ಷವೂ ಸಾಂಪ್ರದಾಯಕ ವಾಗಿ ಹಾಡುತ್ತಾ ಬಂದಿರುವುದರಿಂದ ಇವುಗಳನ್ನು ರಿವಾಯಿತ ಪದಗಳೆಂದು ಹೇಳುವರು. ಇಂದಿಗೂ ಗ್ರಾಮೀಣ ಭಾಗಗಳಲ್ಲಿ ಹಾಡುವ ಹಸ್ತಪ್ರತಿಗಳ ಹಳೆಯ ಹೊತ್ತಿಗೆಗಳ ಮೇಲೆ ರಿವಾಯಿತ ಪದಗಳೆಂದೇ ಬರೆದಿರುವುದನ್ನು ಕಾಣಬಹುದು.

**ಗೊಂದಲಿಗರ ಹಾಡುಗಳು**

ಗೊಂದಲಿಗರು ಕರ್ನಾಟಕದ ವೃತ್ತಿಗಾಯಕರಲ್ಲಿ ಪ್ರಮುಖ ಸಮುದಾಯದವರಾಗಿದ್ದಾರೆ. ಗೊಂದಲವೆಂಬುದು ದೇವತಾರಾಧನೆಯ ಒಂದು ವಿಧಿ-ವಿಧಾನ. ಈ ವಿಧಿ-ವಿಧಾನಗಳನ್ನು

ಕ್ರಮಬದ್ಧವಾಗಿ ನಡೆಸುವವರು ಗೊಂದಲಿಗರೆನಿಸಿಕೊಂಡಿದ್ದಾರೆ. ಗೊಂದಲಿಗರು ದೇವಿ ಆರಾಧಕರು. ದೇವಿ ಆರಾಧನೆಯನ್ನು ಇವರು ನಡೆಯಿಸುವುದಕ್ಕೆ ಗೊಂದಲ ಹಾಕುವುದು ಎಂದು ಹೇಳಲಾಗುತ್ತದೆ. ಹೀಗೆ ಗೊಂದಲಿಗ ಅನ್ನುವುದು ಒಂದು ಜಾತಿ; ಗೊಂದಲ ಅನ್ನುವದು ಕುಲಕಸುಬು. ಮೂಲತಃ ಆರಾಧನೆಗೆ ಸಂಬಂಧಿಸಿದ ಈ ಕಸುಬು ಅನಂತರದ ದಿನಗಳಲ್ಲಿ ಕಥಾಗೋಷ್ಠಿಯಾಗಿ ರೂಪಾಂತರ ಪಡೆದಿದೆ. ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹನ್ನೆರಡನೆಯ ಶತಮಾನದ ವಚನಕಾರರ ದೃಷ್ಟಿಯಲ್ಲಿ, ಶರಣರ ಚಿಂತನೆಗಳಲ್ಲಿ ಕಸುಬುಗಳ ಮೇಲಿಂದಲೇ ಸಮುದಾಯವನ್ನು ಗುರುತಿಸಿದ್ದುಂಟು. ಆದರೂ ಮಾನವರೆಲ್ಲ ಒಂದೇ ಕೀಳು ಮೇಲಲ್ಲ ಎಂಬ ಸಮತಾವಾದದ ಕೂಗು ಎಲ್ಲರ ಮನ ಮುಟ್ಟುವಂತಹ ಧ್ವನಿಯಾಗಿದೆ. ಕನ್ನಡದ ಪಂಪ, ರುದ್ರಭಟ್ಟ, ಅಲ್ಲಮಪ್ರಭು, ಹರಿಹರ, ವಿರೂಪಾಕ್ಷ ಪಂಡಿತ, ಲಕ್ಷ್ಮೀಶ ಮೊದಲಾದ ಕವಿಗಳು ಗೊಂದಳ, ಗೊಂದಲ ಶಬ್ದವನ್ನು ಸಮೂಹ ಎಂದರ್ಥದಲ್ಲಿ ಪ್ರಯೋಗಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಪ್ರಭುದೇವರು ತಮ್ಮ ವಚನಗಳಲ್ಲಿ ಗೊಂದಣಗೊಂಡು ಎಂದು ಪ್ರಯೋಗಿಸಿದ್ದಾರೆ.

ಎಂಬತ್ತು ನಾಲ್ಕು ಲಕ್ಷ ಯೋನಿಮುಖ ಜೀವಗಳಿಗೆ
ಎಂಬತ್ತು ನಾಲ್ಕು ಲಕ್ಷಾರಾಧನೆ
ಒಂದೊಂದ ಆರಾಧನೆಯನೊಂದಂದಜೆಯದೆ
ಗೊಂದಣಗೊಂಡು ಲಯವಾದುದಲ್ಲಾ[೨೩]

ಗೊಂದಲಿಗರು ಪೂರ್ವಕಾಲದಿಂದ ಇಂದಿನವರೆಗೆ ಸಂಚಾರಿ ಸಮುದಾಯವಾಗಿದೆ. ಅವರು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿ ಇದ್ದಾರೆ. ತಮಿಳುನಾಡಿಗೂ, ಆಂಧ್ರಪ್ರದೇಶಕ್ಕೂ, ಗೋವೆಗೂ ಎಲ್ಲಾ ಸಂಚಾರ ಮಾಡುತ್ತಿದ್ದಾರೆ. ಆದರೆ ಪ್ರಮುಖವಾಗಿ ಅವರ ವಾಸ ರಾಜ್ಯಗಳಿಗೂ ಕರ್ನಾಟಕದಲ್ಲಿಯೇ ಇದೆ. ಜನಸಂಖ್ಯೆಯ ಪ್ರಮಾಣವೂ ಹೆಚ್ಚಿದೆ. ಅಖಿಲ ಕರ್ನಾಟಕದ ಗೋಂದಳಿ ಸಂಘ, ಹುಬ್ಬಳ್ಳಿಯವರು ಕರ್ನಾಟಕದ ಗೋಂದಳಿ ಜನರ ಬಗೆಗೆ ಅರಿವಿನ ಹಾಗೂ ಸುಧಾರಣೆಯ ಜಾಗ್ರತೆ ನಡೆಸಿದ್ದಾರೆ. ಅವರ ಎಣಿಕೆಯ ಪ್ರಕಾರ ಕರ್ನಾಟಕದಲ್ಲಿ ಎರಡು ಲಕ್ಷ ಮೇಲ್ಪಟ್ಟು ಜನರು ಇದ್ದಾರೆಂದು ತಿಳಿದುಬಂದಿದೆ. ಮೊದಲೆಲ್ಲ ಅನೇಕ ಕಡೆ ಸಂಚಾರಿಯಾಗಿದ್ದು, ಅನಂತರ ಅವರು ಅವಶ್ಯ ಅನುಕೂಲ ನೋಡಿಕೊಂಡು ವಾಸಿಸಿದ್ದಾಗಿ ಸಮಾಜದ ಕೆಲವು ಹಿರಿಯರು ಹೇಳುತ್ತಾರೆ. ಕರ್ನಾಟಕದಲ್ಲಿ ಬಿಜಾಪುರ, ಕೆರೂರ, ಬಾದಾಮಿ, ಕೊಪ್ಪಳ, ಜಮಖಂಡಿ, ಕಡಕೋಳ್, ಮುರಗೊಡ, ಬೈಲವಾಡ, ಒಕ್ಕುಂದ, ಗದಗ, ಮುಳುಗುಂದ, ಲಕ್ಷ್ಮೇಶ್ವರ ಈ ಎಲ್ಲ ಸ್ಥಳಗಳಲ್ಲೂ ಗೊಂದಲಿಗರು ಬಹುಪ್ರಾಚೀನ ಕಾಲದಿಂದಲೂ ವಾಸವಾಗಿದ್ದಾರೆ.

**ಬೀಸುವ ಕುಟ್ಟುವ ಹಾಡುಗಳು**

ಜನಪದರು ಹಬ್ಬ, ಮಹೋತ್ಸವಗಳು ಬಂದಾಗ ಹಾಡುಗಳನ್ನು ಹಾಡಿ ತಣಿಯುತ್ತಾರೆ. ಹೆಂಗಸರಿಗೆ ಮಾತ್ರ ದಿನನಿತ್ಯ ಪ್ರಪಂಚದ ಜಂಜಡದ ಭಾರವನ್ನು ಇಳಿಸಲು ಬೀಸುವ, ಕುಟ್ಟುವ ಹಾಡುಗಳು ಅನಿವಾರ್ಯವೆನಿಸಿವೆ. ಹಾಡುವ ಬೆಳಗಿನ ಜಾವದಲ್ಲಿ ಕೋಳಿ ಕೂಗುವ ಮುನ್ನ ಹಳ್ಳಿಯ ಹೆಂಗಸು ಎದ್ದು ತನಗಾದ ಕುಟುಂಬದ ಭಾರವನ್ನು ತೋಡಿ ತೋಡಿ ಬೀಸುತ್ತ ಹಾಡಿ, ಕಷ್ಟ ನಷ್ಟಗಳನ್ನು ಮರೆತು ಹೊಸಬಳಾಗಿ ಬೆಳಗು ಹರಿಯಲು, ಹಸನು ಮನಸ್ಸಿನಿಂದ ಪ್ರಪಂಚಕ್ಕೆ

ಮತ್ತೆ ಧುಮುಕುವಳು. ಸಂಸಾರ ಸಾಗರದಲ್ಲಿ ಹೆಣ್ಣೇ ಚುಕ್ಕಾಣಿ; ಅವಳನ್ನುಳಿದು ಗಂಡಿಗೆ ಗತಿಯಿಲ್ಲ. ಅನೇಕ ಎಡರುತೊಡರು ಬಂದರೂ ಕುಟುಂಬದ ಭಾರವನ್ನು ಹೊರಲು ಗಂಡು ಹೆಣ್ಣಿನ ಮನವು ಅವುಗಳನ್ನು ಕುಟುಂಬ ಸುಲಲಿತವಾಗಿ ಸಾಗಲೇಬೇಕು. ಆದದ್ದನ್ನು ಮರೆತು ಬರುವುದನ್ನು ಮನೆ ಬಿಟ್ಟು, ಕೊಟ್ಟ ಮನೆಯನ್ನು ಸೇರುವ ಹೆಣ್ಣು ಆ ಮನೆಯ ವಾತಾವರಣಕ್ಕೆ ಹೊಂದಿಕೊಂಡು ಹೋಗಲೇಬೇಕು. ಗಂಡು ಬಿರುಸಾದರೂ ಹೆಣ್ಣು ಕೋಮಲ ಹೃದಯದವಳಾಗಿ ಗಂಡಿನೊಡನೆ ಸಹಕರಿಸಿ ಜೀವನ ಸಾಗಿಸಲೇಬೇಕು. ಅಂತೆಯೇ ನಮ್ಮ ಬಾಳು ನಗೆ ಹೊಗೆಗಳ ಸುಳಿವುಳ್ಳ ಮನೋಹರ ರಂಗಶಾಲೆ. ಗಂಡನ ಮನೆಯಲ್ಲಿದ್ದ ಹೆಣ್ಣಿಗೆ ತವರುಮನೆ, ಗೆಳತಿಯರು, ಮನೆಗೆಲಸ ಸತಿಪತಿಯಾಟ, ಮಕ್ಕಳ ಲಾಲನೆ, ಪಾಲನೆ ಹಾಗೂ ಸಂಭ್ರಮ ಮೊದಲಾದ ಜೀವನ ಸನ್ನಿವೇಶಗಳು ಆಗಾಗ ಒಂದರ ಮೇಲೊಂದು ನೆನಪಾಗುವುದು ಸಹಜ. ಇವೆಲ್ಲವುಗಳನ್ನು ಮರೆಯಲು ಆವೇಶ ತುಂಬಿದಾಗ ಹಾಡಿ ತನಗಾದ ಬೇಸರವನ್ನು ನೀಗಿಸಿಕೊಳ್ಳುವಳು. ಅವಳು ಹಾಡುವ ವಿಶೇಷ ಸಮಯವೆಂದರೆ ದಿನನಿತ್ಯ ಬೀಸುವಾಗ, ಕುಟ್ಟುವಾಗ ಬೀಸುವ ಕಲ್ಲು ಸಪ್ಪಳಕ್ಕೆ ಕೈ ಬಳೆಗಳ ರುಣತ್ಕಾರ ಕೂಡಿಸಿ ನಾದ ಕಿವಿ ತುಂಬಲು ತಲೆ ಹಾಕಿ ಹಾಕಿ ಗತ್ತಿನೊಡನೆ ರಾಗವೆತ್ತಿ ಹಾಡಿತ್ತಿದಳೆಂದರೆ, ಬೀಸುವ ಕಾಲ ಮುಗಿಯುವರೆಗೆ ಅವಳಿಗೆ ಬೇರೊಂದು ಪರಿವೆಯೇ ಇರುವುದಿಲ್ಲ. ಅದರಲ್ಲಿ ಲೀನಳಾಗಿ ತನ್ನನ್ನು ತಾನೇ ಮರೆಯುವಳು.[೨೪]

ಪಾಪವು ಹೆಚ್ಚಾದ ಸನ್ನಿವೇಶದಲ್ಲಿ ಪಾಪದ ಕಲ್ಲು ಪುಣ್ಯದ ಕೈಯಿಂದ ತಿರುಗುವುದು. ಒಂದು ಕುಟುಂಬದ ಚಿತ್ರಣದಲ್ಲಿ ಬರುವ ಅತ್ತೆ, ಮೈದುನ, ಮಾವ, ಪತಿದೇವರು ಬರುವರು. ಸುಂದರವಾದ ಬೀಸುಕಲ್ಲು ಸುಂದರವಾಗಿ ತಿರುಗುವುದು. ಬೀಸಕಲ್ಲು ಮಾರುವರು ತೆಗೆದುಕೊಳ್ಳುವರ ಸನ್ನಿವೇಶವನ್ನು ಕಾಣಬಹುದು.

ಕುಟ್ಟುವಾಗ, ಬೀಸುವಾಗ ಜನಪದರು ಕೆಲವು ದೇಶಿ ಮಟ್ಟಿನ ಹಾಡುಗಳನ್ನು ಹೇಳುತ್ತಿರುವುದು ಸ್ಪಷ್ಟವಾಗಿದೆ. ಇನ್ನು ಜನಪದ ಕ್ರಿಯೆಗಳಿಗೂ ಮತ್ತು ಜನಪದ ಹಾಡುಗಳಿಗೂ ಇರುವ ಒಂದು ಸಂರಚನಾತ್ಮಕ ಸ್ವರೂಪವನ್ನು ಅವುಗಳ ಪರಸ್ಪರ ಆಂತರಿಕ ಸಂಬಂಧದ ಸೂಕ್ಷ್ಮಾಂಶಗಳನ್ನು ಗುರುತಿಸುವುದು ಮುಖ್ಯ. ಆಗ ಕ್ರಿಯೆ ಮತ್ತು ಹಾಡುಗಳ ಒಂದು ಸಾವಯವ ಸೂತ್ರ ತಂತಾನೇ ರೂಪುಗೊಳ್ಳುತ್ತದೆ.

ಯಾವುದೇ ದವಸ-ಧಾನ್ಯವನ್ನು ವಿಶೇಷತಃ ಸಿಪ್ಪೆಯಿರುವ ಧಾನ್ಯ ಭತ್ತ ಕಂಕಿ ಅಥವಾ ಸೆರಗು ಉಳಿದಿರಬಹುದಾದ ಜೋಳ ಒರಳಿಗೆ ಹಾಕಿ ಒನಕೆಯಿಂದ ಕುಟ್ಟಿ ಕಾಳನ್ನು ಬೇರ್ಪಡಿಸುವುದು, ಸ್ವಚ್ಛಗೊಳಿಸುವುದು ಸಹಜ ಬೇಳೆಕಾಳುಗಳನ್ನು ಒರಳಿಗೆ ಹಾಕಿ ಕುಟ್ಟುವುದೂ ಉಂಟು. ಆಗ ಅದಕ್ಕೆ ಥಳಿಸುವುದು ಎನ್ನುತ್ತಾರೆ.[೨೫] ಕುಟ್ಟುವ ಕ್ರಿಯೆಯ ಬಾಹ್ಯ ಸ್ವರೂಪ ರಚನೆಯಲ್ಲಿ ಕಾಣುವ ಮುಖ್ಯ ವಸ್ತುಗಳು ಮನೆಯ ಒಂದು ಮೂಲೆ, ಅಂಕಣ ಬಂಕ ಅಥವಾ ನಡುಮನೆಯ ಪಡಸಾಲೆಯ ಒಂದು ಭಾಗದಲ್ಲಿ ಹಾಕಿರುವ ಕಲ್ಲಿನ ಒರಳು. ದವಸ ಧಾನ್ಯಗಳನ್ನು ಕುಟ್ಟಲು ಉಪಯೋಗಿಸಲಾಗುವ ಒನಕೆಯು ಬಗನೆ ಮರದ ಒಂದು ಒಳ್ಳೆ ಹಿಡಿಗಾತ್ರದ ಸುಮಾರು ನಾಲ್ಕು ಅಡಿ ಉದ್ದದ ಒಂದು ಕಟ್ಟಿಗೆ ತುಂಡು. ಒಂದು ತುದಿ ಮುಖ್ಯವಾಗಿ ಕುಟ್ಟುವ ಮುಖ್ಯ ದುಂಡಗೆ,

ಇನ್ನೊಂದು ತುದಿ ಸಪಾಟಾಗಿ ನುಣುಪಾಗಿಸಿ ಕೆತ್ತುತ್ತದೆ. ಇದನ್ನು ತಳಿಸಲು ಬಳಸುವ ತುದಿ ಒಮ್ಮೊಮ್ಮೆ ಈ ಸಪಾಟು ತುದಿಗೆ ಅಣಸು, ಕಟ್ಟುಹಾಕಿರುವುದೂ ಉಂಟು. ಹಳ್ಳಿಗರ ಸಂಸ್ಕೃತಿ ಈ ಹಾಡುಗಳಲ್ಲಿ ಹೆಪ್ಪುಗಟ್ಟಿರುತ್ತದೆ.

**ಜೋಗುಳ ಹಾಡುಗಳು**

ಜಗತ್ತಿನಾದ್ಯಂತವಾಗಿ ಎಲ್ಲಾ ಜನಾಂಗಗಳಲ್ಲೂ ಕೂಸುಗಳನ್ನು ರಮಿಸಿ ಮಲಗಿಸುವ ಸಲುವಾಗಿ ತಾಯಂದಿರಾಗಲಿ, ಕೂಸಿಗೆ ಸಂಬಂಧಿಸಿದ ಇತರ ಹೆಣ್ಣುಮಕ್ಕಳಾಗಲಿ ಅವರವರ ಭಾಷೆಗಳಲ್ಲಿ ಹಾಡುವ ಪರಿಪಾಠವಿದೆ. ಕನ್ನಡದಲ್ಲೂ ಮಕ್ಕಳನ್ನು ತೊಟ್ಟಿಲಲ್ಲಾಗಲಿ, ತೊಡೆಯ ಮೇಲಾಗಲಿ, ಎದೆಗವಚಿಕೊಂಡಾಗಲಿ ಆಡಿಸುತ್ತ ಹಾಡುವ ಹಾಡುಗಳಿಗೆ ತೊಟ್ಟಿಲ ಹಾಡು, ಲಾಲಿಹಾಡು, ಜೋಗುಳ ಪದಗಳೆಂದು ಕರೆಯುತ್ತಾರೆ. ಡಾ. ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯದಂತೆ ಇದರ ರೂಪ 'ಜೋಕುಳ್' ಇದಕ್ಕೆ ಮಕ್ಕಳು ಎಂದು ಅರ್ಥ. ಮಕ್ಕಳ ಹಾಡು ಎಂಬರ್ಥದಲ್ಲಿ ಇರಬಹುದಾದ ಜೋ ಕುಳ್ ಹಾಡು ಜೋಗುಳ ಹಾಡು ಎಂಬುದು ಕಾಲಕ್ರಮದಲ್ಲಿ ಜೋಗುಳ ಎಂಬ ಸಂಕ್ಷಿಪ್ತ ರೂಪದಲ್ಲಿ ನಿಂತುಕೊಂಡಿತು ಎಂದು ಅಭಿಪ್ರಾಯಪಡುತ್ತಾರೆ. ಡಾ. ದೇವೇಂದ್ರಕುಮಾರ ಹಕಾರಿಯವರ ಪ್ರಕಾರ ತೊಟ್ಟಿಲು ತೂಗುವ ಕ್ರಿಯೆಯನ್ನು ಅನುಸರಿಸಿ ಬೆಂಕಿಗೆ ಅಥವಾ ನಾಗಂದಿಗೆ ಕಟ್ಟಿದ ಹಗ್ಗ ಜಿಂಯಾ ಜಿಂಯ್ ಸೊಲ್ಲು ಕೊಡುತ್ತದೆ. ಆಗ ಇದರಲ್ಲಿಯೇ ಲಯ ರೂಪುಗೊಳ್ಳುತ್ತದೆ. ಕ್ರಿಯೆ, ಲಯಗಳು ಬೆರೆತಾಗ ಜಿಂಯಾ ಜಿಂಯ್ ಲಯ ಜೋ ಜೋ ನಾದವಾಗುತ್ತದೆ ಎಂದಿದ್ದಾರೆ.

ತೊಟ್ಟಿಲಲ್ಲಿಯ ಕೂಸು ಕಿರಿಕಿರಿ ಮಾಡಿ ಕಾಡುತ್ತಿರುವಾಗ
ಹೆತ್ತ ತಾಯಿ ತನ್ನೆಲ್ಲ ಕೆಲಸ ಬಿಟ್ಟು ತನ್ನಷ್ಟಕ್ಕೆ ತಾನೇ
ಮಗುವಿನೊಂದಿಗೆ ಹಾಡಿಕೊಂಡು ಮಲಗಿಸುತ್ತಾಳೆ.

ಜೋಜೋ ಎನ್ನ ಜ್ಯೋತಿಯ ಕಂದಾ ಜೋಜೋ
ಕಂದನ ಕಿರಿಕಿರಿ ಇಂದೇನ ಹೇಳಲಿ
ಬಿಂದೀಗಿ ಹಾಲ ಸುರುವಂತ । ಸಂಜೆಯ ।
ಚಂದ್ರಮನ ತಂದುನಿಲಸೆಂದ ॥[೨೬]

ಹೀಗೆ, ಮಗುವನ್ನು ರಮಿಸುವುದರಲ್ಲಿ, ಮಲಗಿಸುವುದರಲ್ಲಿ ತಾಯಿ ತನ್ನ ತನ್ಮಯತೆಯಲ್ಲಿ ತನ್ನ ಜೀವನ ಸಾರ್ಥಕತೆಯನ್ನು ಪಡೆಯುತ್ತಾಳೆ. ಅಂದರೆ ಈ ಜೋಗುಳ ಪದಗಳು ಕ್ರಿಯೆ ಲಯನಾದ ಲೇಪಿತ ಶಾಬ್ದಿಕ ರೂಪದ ಹಾಡುಗಳು ಎಂದು ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ, ತಾಯಿಯಾದವಳು ತನ್ನ ಮಗುವನ್ನು ನಾದದ ಗುಂಗಿನಲ್ಲಿ ಮೈಮರೆಸಿ ಮಲಗಿಸಿ ಆ ಮೂಲಕ ತಾನು ಆನಂದಿಸುವಳೆಂಬುದು ಸ್ಪಷ್ಟವಾಗಿದೆ. ಮಗುವನ್ನು ತೋಳಿನಲ್ಲಿ ಅಥವಾ ಹಾಸಿಗೆ ಇಲ್ಲವೇ ತೊಟ್ಟಿಲಲ್ಲಿ ಮೆದುವಾಗಿ ತೂಗುತ್ತಾ, ಹೇಳುವ ಈ ಪ್ರಕಾರದ ಹಾಡು ಯಾವುದೇ ದಾಟಿ ಅಥವಾ ಭಾಷೆಯಲ್ಲಿರಲಿ ಆ ಜೋಗುಳಗಳಲ್ಲೆಲ್ಲಾ ತಾಯಿ ಇದ್ದಾಳೆ. ನೀನು ಮಲಗು ಎಲ್ಲವೂ ಸರಿಯಾಗಿದೆ. ನೀನು ಸುರಕ್ಷಿತವಾಗಿದ್ದೀಯ ಎಂಬ ಮಾತುಗಳು ಇರುತ್ತವೆ.

**ಮದುವೆ ಹಾಡುಗಳು**

ಕಾಲದಿಂದ ಕಾಲಕ್ಕೆ ತಲೆಮಾರಿನಿಂದ ತಲೆಮಾರಿಗೆ ಸಾಗಿಕೊಂಡು ಬಂದಿರುವ ಆಚರಣೆಗಳೇ ಸಂಪ್ರದಾಯ. ಅದು ಒಂದು ವಿಶಿಷ್ಟ ಉದ್ದೇಶದಿಂದ ಕೂಡಿ, ಸಾಮೂಹಿಕವಾಗಿ ಬಹುಕಾಲದಿಂದಲೂ ನಡೆದು ಬರುತ್ತಿರುವ ಒಂದು ರೂಢಿ ಅಥವಾ ಪದ್ಧತಿ. ಕಾಲಕಾಲಕ್ಕೆ ಈ ಸಂಪ್ರದಾಯಗಳು ಜನರ ವಿಶ್ವಾಸವನ್ನು ಕಳೆದುಕೊಂಡು ಅರ್ಥಹೀನವಾಗಿ ಡಂಭಾಚಾರಗಳಾಗಿ ಬಿಡುವುದೂ ಉಂಟು. ಇವುಗಳಿಂದ ಜನಸಾಮಾನ್ಯರಿಗೆ ಯಾವ ಹಿತವೂ ಆಗದು. ಸಂಪ್ರದಾಯ ಎಂದಾಕ್ಷಣ ಅದರ ಹಿಂದೆ ಅಸಡ್ಡೆಯ ಭಾವನೆ ಇಂದು ಆಧುನಿಕರಲ್ಲಿ ಸರ್ವೇಸಾಮಾನ್ಯವಾಗಿದೆ. ಯಾವ ಸಂಪ್ರದಾಯಗಳಿಂದ ಸಮಾಜೋತ್ಕರ್ಷ ಸಾಧಿಸುವುದೋ ಅವುಗಳೇ ನಿಜವಾಗಿ ಜೀವಂತವಾದ ಸತ್‌ಸಂಪ್ರದಾಯಗಳು. ಇಂತಹ ರೂಢಿಗಳ ಅಗತ್ಯ ಸಮಾಜಕ್ಕೆ ಇದೆ. ಸಹಕಾರ ಭಾವ, ಸಾಮೂಹಿಕ ಪ್ರಜ್ಞೆ ಇತ್ಯಾದಿಗಳನ್ನು ಮೂಡಿಸಲು ಪ್ರಗತಿಯ ಪಥವನ್ನರಿಯಲು, ನೆಮ್ಮದಿಯ ಜೀವನವನ್ನು ಸಾಧಿಸಲು ಈ ಸಂಪ್ರದಾಯಗಳು ಅಗತ್ಯವಾಗಿರುತ್ತವೆ. ಕಾಲಾನುಸಾರವಾಗಿ ಇವುಗಳು ಬಾಹ್ಯ ಸ್ವರೂಪದಲ್ಲಿ ಬದಲಾವಣೆಯಾದರೂ ಮೂಲತತ್ತ್ವ, ಸತ್ತ್ವ ಹಾಗೆಯೇ ಉಳಿದಿರುತ್ತದೆ. ಹಲವಾರು ಧಾರ್ಮಿಕ ಮತ್ತು ಸಾಮಾಜಿಕ ಸಂಪ್ರದಾಯಗಳು ಇಂಥವುಗಳಾಗಿವೆ. ಮದುವೆ ಇವುಗಳಲ್ಲೊಂದು. ಭಾರತ ಹಳ್ಳಿಗಳ ನಾಡು ನಿರಕ್ಷರತೆ, ಬಡತನಗಳಿಂದಾಗಿ ಹೊಸತನ ಈ ಜನಜೀವನದಲ್ಲಿ ಬೇಗ ಬಂದು ಸೇರದು. ಇವರು ಸಂಪ್ರದಾಯ ನಿಷ್ಠರು, ಏನಿದ್ದರೂ ಹಿಂದಿನದರಲ್ಲಿ ಇವರಿಗೆ ಬಹಳ ನಿಷ್ಠೆ. ಗೌರವ ಮತ್ತು ಪ್ರೀತಿ ಎಷ್ಟೋ ರೂಢಿಗಳು ಇಂದು ಅರ್ಥಹೀನವಾಗಿದ್ದರೂ ಅವನ್ನು ಕೆದಕಿ ನೋಡುವ ಛಲ ಅವರದಲ್ಲ. ನಮ್ಮ ಗ್ರಾಮೀಣ ಸಮಾಜದಲ್ಲಿ ಮದುವೆಯಲ್ಲೂ ಇಂಥ ಪಳಿಯುಳಿಕೆ ಸಾಕಷ್ಟಿವೆ. ನಮ್ಮ ಗ್ರಾಮೀಣ ಸಮಾಜದಲ್ಲಿ ಮದುವೆಗೆ ಹಲವಾರು ದೃಷ್ಟಿಯಿಂದ ಪ್ರಾಮುಖ್ಯವಿದೆ. ಮದುವೆ ಎಂಬುದು ವ್ಯಕ್ತಿಗಳೀರ್ವರಿಗೆ ಸಂಬಂಧಿಸಿದ ಇಷ್ಟು ಬಂಗಾರ, ಇಂತಿಂಥ ಆಭರಣ. ಅಷ್ಟು ಅರಿವೆ, ಇಷ್ಟು ರೂಪಾಯಿ ತೆರವು ಎಂದು ಮಾತನಾಡಿ ಹೆಣ್ಣು ಗಟ್ಟಿ ಮಾಡುವುದು ಪದ್ಧತಿ. ಇದಕ್ಕೆ ನಿಶ್ಚಯ ಕಾರಣವೆಂತಲೂ ಕರೆಯುವುದುಂಟು. ಈ ಸಂಬಂಧ ಕೂಡದಿದ್ದರೆ ಅಲ್ಲಿಯ ಸಮೀಪದ ಬಳಗದಲ್ಲಿ ಸಮೀಪದ ಸುತ್ತಲ ಊರುಗಳಲ್ಲಿ ಹೆಣ್ಣು ಒಪ್ಪಿ ನಿಶ್ಚಯಿಸುವರು. ದೂರದ ಸಂಬಂಧ ಕ್ವಚಿತ್ತಾಗಿ ಮಾಡುವುದು ಕಂಡುಬರುತ್ತದೆ. ಆಸ್ತಿಪಾಸ್ತಿ, ಮನೆಯವರ ಸ್ವಭಾವ ನೋಡಿ ಹೆಣ್ಣು ಕೊಡುವರು.

ಅನಿಬತ್ತಾದಂದು ಆರು ಮಾರ್ಥುಲ್ಲ ಹಿರಿದೊ
ಆನೆಲ್ಲೊ ನಿಮ್ಮ ದಳವೆಲ್ಲೊನಮ ಬೀಗರು
ಹಾವಾಡಿಗರಂಗೆ ಇಳದಾರೆ

ಆನಿಬರತಾವಂತ ಆರಭಣವಿಕೊಂಡ
ಆನೆಲ್ಲಿನಿಮ ದಳವೆಲ್ಲಿ ಬೀಗಾ
ಜೋಳ್ಖೋರಿ ಮ್ಯಾಲ ಬರತಾರ[೨೭]

ಮದುವೆಯ ಹಾಡುಗಳನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು. ಅರಿಷಿಣ ಹಚ್ಚುವ, ಐರಾಣಿ ತರುವ, ಹಂದರ ಸಂಡಿಗೆ ಕಡಿಯುವ ಮೊದಲಾದ ದೇವತಾಕಾರ್ಯ ಮಾಡುವಾಗಿನ

ಮತ್ತು ಅಕ್ಷತೆಯ ಕಾಲದ ಹಾಡುಗಳು ಒಂದು ಗುಂಪು. ಭೂಮದ ಹಾಡನ್ನೂ ಈ ಗುಂಪಿಗೆ ಸೇರಿಸಬಹುದು. ಒಳಕಲ್ಲು ಪೂಜೆ, ಬೀಗರನ್ನು ಎದುರುಗೊಳ್ಳುವ ಕೂಸೊಪ್ಪಿಸುವ ಇತ್ಯಾದಿ ಹಾಡುಗಳದು. ಇನ್ನೊಂದು ಗುಂಪು. ಇವನ್ನೇ ಬೀಗರ ಹಾಡುಗಳೆನ್ನುವುದು. ಇದರಲ್ಲೂ ಎರಡು ತೆರ; ಹಳೆಯ ಬೀಗರನ್ನು ಸಂಬಂಧಿಕರನ್ನು ಕುರಿತವು. ಇವರೂ ಒಂದು ಕಾಲಕ್ಕೆ ಬೀಗರೇ ಈಗ ಹೊಸ ಬೀಗರ ಸ್ವಾಗತದ ಏರ್ಪಾಡಿನಲ್ಲಿ ನೆರವಾಗಲು ಬರುವರು. ಮೊದಲ ಗುಂಪಿನ ಹಾಡುಗಳಲ್ಲಿ ಬೀಗರ ಪ್ರಸ್ತಾಪವಿರದು. ಆಗ ಮಾಡುವ ಕಾರ್ಯ ದೇವರಿಗರ್ಪಿಸಿ ಹೇಳುವಂತಹವು. ಇತರ ಹಾಡುಗಳು ಬೀಗರನ್ನು ಕುರಿತವುಗಳು. ಕೂಸೊಪ್ಪಿಸುವ ಹಾಡು ಹೆಣ್ಣಿನ ಬೀಗರು ಮಾತ್ರ ಹೇಳುವ ಹಾಡು ಹೆಣ್ಣಿನ ಗಂಡಿನ ಕಡೆಯ ಬೀಗರು ಹಾಡುಗಳಿರುತ್ತವೆ.

ಮದುವೆ ಎನ್ನುವುದು ಪ್ರತಿಯೊಬ್ಬನಿಗೆ ಜೀವನದೊಳಗಿನ ಒಂದು ಮಹಾ ಸಂಸ್ಕಾರವಾಗಿರುತ್ತದೆ. ಗಂಡು ಪುರುಷನಾದರೆ, ಹೆಣ್ಣು ಪ್ರಕೃತಿ. ಧನ ಋಣ ವಿದ್ಯುತ್ತುಗಳು ಎಲ್ಲಿದ್ದರೂ ಹೇಗಿದ್ದರೂ ಒಂದುಗೂಡುವುದಕ್ಕೆ ಹಾತೊರೆಯುತ್ತವೆ. ಆ ಹಾತೊರೆ ತವಕಗಳನ್ನು ಯೋಗ್ಯ ದಿಶೆಯಲ್ಲಿ ಹರಿಸುವದಕ್ಕಾಗಿ ಸಾಮಾಜಿಕರು ಮದುವೆಯೆಂಬ ಮಹಾಸಂಸ್ಕಾರವನ್ನು ಕಲ್ಪಿಸಿದ್ದಾರೆ. ತವರುಮನೆಯ ಹೆಣ್ಣುಮಗಳು ಅತ್ತೆಯ ಮನೆಯ ಸೊಸೆಯಾಗಲಿರುವ ಸಂದರ್ಭ ತಂದೆಯ ಸಂರಕ್ಷಣೆಯಿಂದ ಗಂಡನ ಸಂರಕ್ಷಣೆಗೆ ಒಳಪಡಬೇಕಾಗಿರುವ ಗಳಿಗೆ, ತಾಯಿಯ ಅಕ್ಕರೆಯು ಅತ್ತೆಯ ಸಕ್ಕರೆಯಾಗಲಿರುವ ಮಹೂರ್ತ, ಬೆಟ್ಟದ ನೆಲ್ಲಿ ಸಮುದ್ರದ ಉಪ್ಪು ಒಂದು ಬಾಂಢದಲ್ಲಿ ಸಮರಸವಾಗುವ ಶುಭ ಸಮಯ. ಇವೆಲ್ಲವುಗಳಿಗೆ ಜೀವಾಳವಾಗಿರುವ ಪುರುಷನ ಸಂಕಲ್ಪ ಧನದೊಂದಿಗೆ ಪ್ರಕೃತಿಯ ಶಕ್ತಿ ಋಣವನ್ನು ಸಂಧಿಸುವ ದಿವ್ಯ ನಿಮಿಷ ಅಂತೆಯೇ ಮದುವೆ ಮಹಾಸಂಸ್ಕಾರವೆನಿಸುವುದು.

ನೆರೆದ ಬಳಗ ಅಣಿಗೊಳಿಸಿದ ಅನ್ನ ಸಾಮಗ್ರಿ, ಬೆಳಗುವ ದೀಪ, ಸಿಂಗಾರದ ಮಂಟಪ ಮೊದಲಾದವುಗಳೆಲ್ಲ ಆ ಸಂಸ್ಕಾರ ಸಿದ್ಧತೆಯೇ ಸರಿ. ಮದುವೆಯ ಹಾಡುಗಳೇ ಅಲ್ಲಿ ಘೋಷಿಸುವ ಮಂತ್ರಗಳು, ದಾಂಪತ್ಯವು ಜೀವನದ ಬಹುಮುಖ್ಯ ವಿಭಾಗವಾಗಿರುವುದರಿಂದ ಅದೊಂದು ಮಹಾ ಪವಿತ್ರ ಯಜ್ಞದಂತೆ ಸಾಗುವುದಕ್ಕಾಗಿ ಯಜ್ಞ ಮಂತ್ರಗಳಂತಿರುವ ಮದುವೆಯ ಹಾಡುಗಳನ್ನು ಮದುವೆಯ ಕಾಲಕ್ಕೆ ಬೇರೆ ಬೇರೆ ವಿಧಾನಗಳು ನಡೆದಾಗ ಹೆಣ್ಣುಮಕ್ಕಳು ಹಾಡುವರು.[೨೮] ಮದುವೆ ಹೆಣ್ಣಿನ ಮನೆಯ ಮುಂದೆ ಇಲ್ಲವೆ ಗಂಡಿನ ಮನೆಯ ಮುಂದೆ ನಡೆಯಬಹುದು. ಅಥವಾ ಇನ್ನೆಲ್ಲಿಯೋ ನಡೆಯಬಹುದು. ಸಾಮಾನ್ಯವಾಗಿ ಮದುವೆ ಮೂರು ದಿವಸ ನಡೆಯಬೇಕೆಂದು ಇಟ್ಟುಕೊಂಡಿದ್ದಾರೆ. ಮೊದಲನೆಯ ದಿವಸ ಮದುಮಕ್ಕಳಿಗೆ ಅರಿಶಿಣ ಹಚ್ಚುವುದು, ಇನ್ನೊಂದು ದಿವಸ ದೇವತಾಕಾರ್ಯ, ಮೂರನೆಯ ದಿವಸ ಅಕ್ಷತೆ ಅಂದರೆ ಅಕ್ಕಿ ಕಾಳು ಹಾಕುವುದು; ಇದಕ್ಕೂ ಮೊದಲಿಗೆ ನಿಶ್ಚಯ ಮೊದಲಾದ ವಿಧಾನಗಳು ನಡೆಯುತ್ತವೆ.

**ಚೌಡಿಕೆ ಹಾಡುಗಳು**

ಕರ್ನಾಟಕದಲ್ಲಿ ಕೊಪ್ಪಳ ಪ್ರದೇಶದಲ್ಲಿ ವಿಶೇಷವಾಗಿ ಚೌಡಿಕೆಯೆಂಬ ವಾದ್ಯ ವಿಶೇಷದ ಶೃತಿಯನ್ನು ಹಿನ್ನೆಲೆಯಿಟ್ಟುಕೊಂಡು ಚೌಡಿಕೆ ಹಾಡು ಇಲ್ಲವೆ ಜೋಗತಿಹಾಡು ಹಾಗೂ ಇದೇ ವಾದ್ಯವು ಪ್ರಧಾನವಾಗುಳ್ಳ ಗೊಂದಲಿಗರ ಹಾಡುಗಳು ಪ್ರಖ್ಯಾತವಾಗಿವೆ. ಇವೆರಡೂ ಬಗೆಯ

ಹಾಡುಗಳು ಧಾರ್ಮಿಕ ಸಂಪ್ರದಾಯಗಳಿಂದ ಪ್ರೇರೇಪಿತವಾಗಿವೆ. ಜಾನಪದ ಕಲೆಯ ಸತ್ವವನ್ನು ಒಳಗೊಂಡ ಈ ಹಾಡುಗಳಲ್ಲಿ ಕೇಳಿದೊಡನೆಯೇ ಮನವನ್ನು ಆಕರ್ಷಿಸುವ ಅಸಂಖ್ಯಾತ ಆಕರ್ಷಕ ಲಯಗಳಿವೆ, ಧಾಟಿಗಳಿವೆ, ಅಪಾರ ಹಾಗೂ ವೈವಿಧ್ಯಪೂರ್ಣವಾದ ಸಾಹಿತ್ಯರಾಶಿ ನಿರ್ಮಾಣಗೊಂಡಿದೆ. ತಾಳ, ಸಂಬಾಳ ತುಂತುಣಿ ಶೃತಿ ಚೌಡಿಕೆಗಳನ್ನು ಸಹವಾದ್ಯಗಳನ್ನಾಗಿ ಉಳ್ಳ ಚೌಡಿಕೆ ಅವುಗಳಿಂದ ಭಿನ್ನವಾಗಿ ವಿಶಿಷ್ಟ ಲಯದಿಂದ ಕೂಡಿದ ಒಂದು ಅಮೋಘವಾದ ವಾದ್ಯವಾಗಿದೆ.

ಅತ್ತ ಮಡಿಯಾಚೆಗೆ ಹುಲಿಗೆವ್ವ ಒಬ್ಬಾಕೆ ಬರುವಾಗ
ಒಬ್ಬ ಫಕೀರನ್ನ ಹೋಗಿ ಎದುರಾಗಿ ಕೇಳ್ಯಾಲೆ
ಅ ಫಕೀರ ನಾನಿನ್ನ ಮುಂದಲೊಳಗೆ ಹೋಗಬೇಕ ತಾಯಿ[೨೯]

ಕಟ್ಟಿಗೆಯ ಇಲ್ಲವೆ ತಾಮ್ರದ ಕೊಳಗದಾಕಾರದ ಈ ವಾದ್ಯಕ್ಕೆ ಒಂದು ಬದಿಗೆ ಪ್ರಾಣಿಯ ಚರ್ಮ ಬಿಗಿದು ಅದರ ಮಧ್ಯ ರಂಧ್ರದಿಂದ ಸುಮಾರು ಎರಡು ಅಡಿ ಉದ್ದನೆಯ ಕುರಿಯ ಕರುಳಿನ ಬೆಸೆದಾರವನ್ನು ಕಟ್ಟಲಾಗುತ್ತದೆ. ದಾರದ ಇನ್ನೊಂದು ತುದಿಯನ್ನು ಗಗ್ಗರ ಮತ್ತು ಗೆಜ್ಜೆಗಳನ್ನು ಕಟ್ಟಿದ ಆರು ಇಂಚಿನ ಕಟ್ಟಿಗೆಯ ಚಣಿಗೆ ಕಟ್ಟಿರುತ್ತಾರೆ. ಚಣಿಯನ್ನು ಜಗ್ಗಿ ಹಿಡಿದು ಕಡ್ಡಿಯಿಂದ ದಾರವನ್ನು ಮೀಟಿದರೆ ಜೋಯ್ ಜೋಯ್ ಎಂಬ ಗಂಭೀರ ಸ್ವರ ಹೊರಡುತ್ತದೆ. ಡೊಳ್ಳು, ಡಪ್ಪು, ಮದ್ದಳೆಗಳಂತೆ ಎಷ್ಟು ದೂರದಿಂದಲಾದರೂ ಗುರುತಿಸಬಹುದಾದ ಸ್ವರಮೌಲ್ಯದ ವಿಶಿಷ್ಟವಾದ್ಯ ವ್ಯಕ್ತಿತ್ವವೊಂದು ಇದಕ್ಕಿದೆ. ಈ ಪ್ರಮುಖ ಚೌಡಿಕೆಯೊಂದಿಗೆ ಶೃತಿ ಚೌಡಿಕೆ ಇಲ್ಲದೆ ತುಂತುಣಿ ಎಂದು ಕರೆಯಲ್ಪಡುವ ಇನ್ನೊಂದು ಪಕ್ಕವಾದ್ಯವು ಇರುವುದುಂಟು. ಆಕಾರ ಹಾಗೂ ರಚನೆಯಲ್ಲಿ ಇದೂ ಒಂದು ಚೌಡಿಕೆಯೇ ಆಗಿದೆ.

**ಮಕ್ಕಳ ಹಾಡುಗಳು**

ತಾಯಿ ಬೇನೆ ತಿನ್ನುವಾಗ "ಬೇಡವ್ವ ಮಕ್ಕಳು" ಎಂದವಳೇ ಬಾಗಿ ಬಾಗಿಲಿಗೆ ಹೋಗುವಾಗ "ನೂರೊಂದು ಫಲವ ಕೊಡು ಶಿವನೆ" ಎನ್ನುವಂತಾಗಬೇಕಾಗಿದೆ. ಅದು ಆನಂದ ಪರ್ಯವಸಾಯಿ ಯಾದ ಸಾತ್ವಿಕ ಸುಖವಾಗಿರಲಾರದೇ

ದೇವರ ಮನಿಯಾಗ ಜೋಡೆಯ ದೀವಿಗೆ
ದ್ವಾರೇದ ಕೈಯ ತಲೆದಿಂಬ ಇಟಗೊಂಡು
ಕಂದನ ಹಡೆದು ಮಲಗ್ಯಾಳ[೩೦]

ಜೋಡಿಗೆ ದೀವಿಗೆ ಕೈಯ ತಲೆದಿಂಬ ಮಗ್ಗುಲಲ್ಲಿ ಕಂದ, ಮಲಗಿದ ಬಾಣಂತಿ ಈ ಎಲ್ಲ ಚಿತ್ರಗಳನ್ನು ಹೊಂದಿಸಿಕೊಂಡು ನೋಡಿದರೆ, ಕ್ರಿಸ್ತನೂ ಕ್ರಿಸ್ತನ ತಾಯಿಯೂ ಬಂದಿಳಿದಿದ್ದಾರೆಂದು ತೋರುವುದು. ಪ್ರತಿಯೊಂದು ಕೂಸು ದೇವಶಿಶು! ಪ್ರತಿಯೊಬ್ಬ ತಾಯಿ ದೇವಮಾತೆ! ಒಬ್ಬ ಅತಿಥಿ ಬರುವನೆಂದರೆ, ಎರಡು ಗಿಂಡಿಗಳಲ್ಲಿ ಹಾಲು ತುಂಬಿ ಬಂದಿರುತ್ತವೆ. ಲೋಕಕ್ಕೆ ಅಪರಿಚಿತವಾದ ಶಿಶು ಬಂದರೂ ಅಗಾಧವಾದ ಸಲಕರಣೆ ಸಿದ್ಧವಾಗಿರುತ್ತವೆ. ಪರಿಸರವು ಬಡತನದ್ದೇ ಇರಲಿ ಶ್ರೀಮಂತಿಕೆಯದೇ ಇರಲಿ ಅದೇ ದೇವ ಶೀವಿ ಬತ್ತಲೆ ಬರಿಮೈ, ಹಾಲಿನ ನೋಂಪಿ, ಧ್ಯಾನಾವಸ್ಥೆ, ಮಾತಿಲ್ಲದ ಮೌನ ಇವೆಲ್ಲ ಶಿಶುವಿನ ಆತ್ಮನಿಮಗ್ನತೆಯನ್ನು ವ್ಯಕ್ತಪಡಿಸುವವು. ಅಳು-

ನಗುಗಳೇ ಅದರ ಅವ್ಯಕ್ತ ಭಾಷೆ. ಅತ್ತಾಗ ದೇವಲೋಕದ ಜಾಣಿ, ಭಾವಲೋಕದ ರಾಣಿಯಂತೆ ತೋರುವುದು. ನಕ್ಕಾಗ ಯಾರವ್ವ ಇಂವ ಚಲುವ ತನ್ನಷ್ಟಕ್ಕೆ ತಾನು ನೋಡಿ ನಗುವ ಎಂದೆನಿಸುವುದು.

ಚಂದಪ್ಪ ಚಂದಪ್ಪ ಚಲುವಾ
ಜುಟ್ಟಲಾ ಬಿಟಗೊಂಡ ಬಿರುವಾ
ಎಂಟ ಎತ್ತಿನ ಬಂಡಿ
ಬಂಡಿ ಮ್ಯಾಲಿ ನಾನಾ

ನನ್ನ ಹಿಂದ ನವಿಲಾ
ನವಿಲ ಗರಿ ತೆಗೆದ
ಚಿಗರಿ ಕೋಡಿಗೆ ಹಾಕಿ
ಚಿಗರಿ ಚಿಗರಿ ಚಿಕ್ಕಪ್ಪಾ
ಅವರಿ ಗುಗ್ಗರಿ ಮುಕ್ಕಪ್ಪಾ[೩೧]

ಬೆಳದಿಂಗಳ ರಾತ್ರಿಯಲ್ಲಿ ಮಕ್ಕಳು ಜೊತೆ ಜೊತೆಯಾಗಿ ಅಡ್ಡಾಡುತ್ತ ಕೈ ಕೈ ಚಪ್ಪಾಳೆ ಬಾರಿಸುತ್ತ ಚಂದಪ್ಪ ಚಂದಮಾಮನನ್ನು ಕೈಮಾಡಿ ಕರೆಯುತ್ತಾ ಹಾಡುತ್ತಾರೆ. ಕುಟುಂಬದ, ಸಮಾಜದ ಚಟುವಟಿಕೆಗಳ ಅನುಕರಣೆಯೇ ಪ್ರಾಸಕ್ಕೆ ಕಾರಣ. ಮಕ್ಕಳ ಅನುಕರಣ ಬುದ್ಧಿ ೫ ವರ್ಷದ ನಂತರ ಕಂಡುಬರುವುದು. ತಾಯಂದಿರು ಬೀಸುವಾಗ, ಕೇರುವಾಗ ಮಕ್ಕಳು ಅದನ್ನು ನೋಡಿ ಅನುಕರಣೆ ಮಾಡುವರು. ಶಿಶುಪ್ರಾಸಗಳು ಆಟಗಳೊಂದಿಗೆ ಬೆರೆತುಕೊಂಡಿರುತ್ತವೆ. ಎಂ.ಎಂ. ಕಲಬುರ್ಗಿ ಅವರು ಮಕ್ಕಳ ಹಾಡುಗಳನ್ನು ಉತ್ಸವದ ಹಾಡು ಉತ್ಸಾಹದ ಹಾಡುಗಳೆಂದು ವಿಭಜಿಸಿ ಶಿಶು ಪ್ರಾಸಗಳನ್ನು ಉತ್ಸಾಹದ ಹಾಡುಗಳಲ್ಲಿ ಸೇರಿಸಿದ್ದಾರೆ. ಅದರಲ್ಲಿ ವಿನೋದ ಪ್ರಾಸ, ಕ್ರೀಡಾ ಪ್ರಾಸಗಳೆಂದು ಉಪವರ್ಗೀಕರಣ ಮಾಡಿದ್ದಾರೆ. ಶ್ರೀಕಂಠ ಕೂಡಿಗೆಯವರು ವಯಸ್ಕರ ಪ್ರಾಸ, ಶಾಲಾ ಪ್ರಾಸಗಳೆಂದು ವರ್ಗೀಕರಿಸಿದ್ದಾರೆ. ತಾಯಿ ಮತ್ತು ವಯಸ್ಕರರಿಂದ ಕಲಿಯುವಂತಹವು ವಯಸ್ಕರ ಪ್ರಾಸವಾದರೆ. ಮಕ್ಕಳಿಂದ ಕಲಿಯುವಂತಹವು ಶಾಲಾ ಪ್ರಾಸ, ಶಿಶುಪ್ರಾಸ. ಇವುಗಳಲ್ಲಿ ಸಾಮಾನ್ಯ ಗುಣ ಒಂದು ಮತ್ತೊಂದರಲ್ಲಿರುವುದರಿಂದ ಅವುಗಳನ್ನು ಖಚಿತವಾಗಿ ವರ್ಗೀಕರಿಸುವುದು ಕಷ್ಟವೆಂದೇ ಹೇಳಬೇಕು ಗೆಳತಿಯ ಗೆಳೆಯರನ್ನು ಗೇಲಿ ಮಾಡುವಾಗ ವಿನೋದ ಪ್ರಾಸಗಳು ಕಂಡುಬರುತ್ತವೆ.

**ಅಡಿಟಿಪ್ಪಣಿಗಳು**

೧. ಹನುಮಂತಪ್ಪ ಸಂಜೀವಣ್ಣ., ೨೦೦೭, **ಕನ್ನಡ ಸಾಹಿತ್ಯಕ್ಕೆ ಹಾವೇರಿ ಜಿಲ್ಲೆಯ ಕೊಡುಗೆ,** ಪುಟ ೪೯೫.

೨. ಸೀತಾರಾಮಯ್ಯ ವಿ., ೨೦೧೨, **ಜನಪದ ಸಾಹಿತ್ಯ,** ಪುಟ ೭೭.

೩. ಗವಿಸಿದ್ಧ ಎನ್., ೧೯೯೭, ಕೊಪ್ಪಳ ಜಿಲ್ಲೆ-೫೦, ಸ್ಮರಣ ಸಂಚಿಕೆ, ಕೊಪ್ಪಳ, ಪುಟ ೨೩.

೪. ಪಾಟೀಲ ಎಚ್.ಎಸ್., ೨೦೧೦, **ಸಾಹಿತ್ಯ ಸಾಂಸ್ಕೃತಿಕ ಪರಂಪರೆ,** ಪುಟ ೧೭೧.

೫. ಅಲ್ಲಮಪ್ರಭು, ಬೆಟ್ಟದೂರು, ಪಾಟೀಲ ಎಚ್.ಎಸ್., ೨೦೦೫, **ಕೊಪ್ಪಳ ಜಿಲ್ಲಾ ದರ್ಶನ,** ಪುಟ ೨೧೭.

೬. ಶ್ರೀ ಜಗದೀಶ ನಾ ಬಾಲಹುಣಸಿ, ೨೦೦೬, **ಕೊಪ್ಪಳ ಗವಿಮಠ ಸಾಂಸ್ಕೃತಿಕ ಅಧ್ಯಯನ,** ಪುಟ ೧೯೪–೧೯೫.

೭. ಅಲ್ಲಮಪ್ರಭು ಬೆಟ್ಟದೂರು, ಪಾಟೀಲ ಎಚ್.ಎಸ್., ೨೦೦೫, **ಕೊಪ್ಪಳ ಜಿಲ್ಲಾ ದರ್ಶನ,** ಪುಟ ೨೧೫–೨೧೬

೮ ಶ್ರೀ ಜಗದೀಶ ನಾ ಬಾಲಹುಣಸಿ, ೨೦೦೬, **ಕೊಪ್ಪಳ ಗವಿಮಠ ಸಾಂಸ್ಕೃತಿಕ ಅಧ್ಯಯನ,** ಪುಟ ೧೯೮.

೯. ಅದೇ., ಪುಟ ೨೦೦.

೧೦. ಅಲ್ಲಮಪ್ರಭು ಬೆಟ್ಟದೂರು, ಪಾಟೀಲ ಎಚ್.ಎಸ್., ೨೦೦೫, **ಕೊಪ್ಪಳ ಜಿಲ್ಲಾದರ್ಶನ,** ಪುಟ ೨೧೫–೨೧೬

೧೧. ಅದೇ., ಪುಟ ೨೧೭–೨೧೮.

೧೨. ಅದೇ., ಪುಟ ೨೨೦.

೧೩. ಅದೇ., ಪುಟ ೨೨೬–೨೨೮.

೧೪. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪು. ೧೬೯.

೧೫. ಹನುಮಂತ ಬಿ. ದೊಡ್ಡಮನಿ, ೨೦೦೯, **ಜಾನಪದ ತೊಟ್ಟಿಲು,** ಪುಟ ೧೩–೧೪.

೧೬. ದಾವನಸಾಬ್, ಅತ್ತರ, ಆಬಲಕಟ್ಟಿ, ಕುಷ್ಟಗಿ.

೧೭. ಮೃತ್ಯುಂಜಯ ಹೊರಕೇರಿ, ಬಸವಲಿಂಗ ಸೊಪ್ಪಿಮಠ, ೨೦೦೫, **ರಾಯಚೂರು ಜಿಲ್ಲಾ ದರ್ಶನ,** ಪುಟ ೬೨.

೧೮. ಹನುಮಂತ ಬಿ. ದೊಡ್ಡಮನಿ, ೨೦೦೯, **ಜಾನಪದ ತೊಟ್ಟಿಲು,** ಪುಟ ೨೦.

೧೯. ಅಂಗಡಿ ಎಸ್.ಎಸ್., ೨೦೦೮, **ಜನಪದ ಸಾಹಿತ್ಯ ಭಾಷೆ,** ಪುಟ ೨೫೪.

೨೦. ಅದೇ., ಪುಟ ೨೨೬–೨೨೭.

೨೧. ರಜಾಕ್‌ಸಾಬ್ ಬಿಸರಹಳ್ಳಿ, ಕೊಪ್ಪಳ.

೨೨. ದಸ್ತಗೀರ್ ಅಲ್ಲೀಬಾಯಿ, ೧೯೯೯, **ಮೊಹರಂ ಪದಗಳು,** ಪುಟ ೬–೮.

೨೩. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೪೭೭–೪೭೮

೨೪. ಅದೇ., ಪುಟ ೨೮೦–೨೮೧

೨೫. ಅದೇ., ಪುಟ ೨೯೧–೨೯೨.

೨೬. ಅದೇ., ಪುಟ ೩೬೫.

೨೭. ಲಲಿತಮ್ಮ, ಕುಷ್ಟಗಿ.

೨೮. ವೀರಣ್ಣ ದಂಡೆ, **ಪೂರ್ವೋಕ್ತ,** ೨೦೦೬, ಪುಟ ೩೩೯.

೨೯. ಅದೇ., ಪುಟ ೪೫೩.

೩೦. ಸುಟ್ಟವ್ವ ಹರಿಜನ, **ಮಸಬಹಂಚಿನಾಳ,**

೩೧. ಸಿಂಪಿ ಲಿಂಗಣ್ಣ, ೧೯೬೦, **ಜನಾಂಗದ ಜೀವಾಳ,** ಪುಟ ೯೨–೯೩.

□□

## ಅಧ್ಯಾಯ : ನಾಲ್ಕು

# ಗಂಡಸರ ಹಾಡುಗಳು

---

೪.೧. ಹೋಳಿ ಹಾಡುಗಳು

೪.೨. ಹಂತಿ ಹಾಡುಗಳು

೪.೩. ಡೊಳ್ಳಿನ ಹಾಡುಗಳು

೪.೪. ಕೋಲಾಟದ ಹಾಡುಗಳು

೪.೫. ಗೀಗೀ ಪದಗಳು

೪.೬. ಮೊಹರಂ ಹಾಡುಗಳು

೪.೭. ಗೊಂದಲಿಗರ ಹಾಡುಗಳು

ಅಧ್ಯಾಯ : ನಾಲ್ಕು

# ಗಂಡಸರ ಹಾಡುಗಳು

## ೪.೧. ಹೋಳಿ ಹಾಡುಗಳು

ಹೋಳಿ ಹಬ್ಬವನ್ನು ಕಾಮನ ಹಬ್ಬ ಎಂದು ಕರೆಯಲಾಗುತ್ತದೆ. ಈ ಹಬ್ಬ ಭಾರತದಾದ್ಯಂತ ಪ್ರಚಲಿತದಲ್ಲಿದೆ. ಆದರೆ ಕನ್ನಡ ನಾಡಿನ ಹೋಳಿ ಉತ್ತರ ಹಾಗೂ ದಕ್ಷಿಣ ಸಂಸ್ಕೃತಿಗಳ ಸಂಗಮವಾಗಿ ಕಂಡುಬರುವ ಮೂಲಕ ಹೊಸದೊಂದು ಆಯಾಮಕ್ಕೆ ಕರೆದೊಯ್ಯುತ್ತದೆ. ಸಾಮಾನ್ಯವಾಗಿ ಮೂರರಿಂದ ಇಪ್ಪತ್ತು ದಿನಗಳವರೆಗೆ ಪಾಲ್ಗುಣ ಹುಣ್ಣಿಮೆ ಮೊದಲ್ಗೊಂಡು ಈ ಹೋಳಿ ಹಬ್ಬವನ್ನು ಆಚರಿಸುತ್ತಾರೆ.

ಪ್ರಸ್ತುತ ಸಂದರ್ಭದಲ್ಲಿ ಹೋಳಿ ಹಬ್ಬವು ನಗರ ಪ್ರದೇಶದಲ್ಲಿ ಎಲ್ಲರೂ ಜಾತಿ ಭೇದವಿಲ್ಲದೆ ಒಂದೇ ಎಂಬ ಭಾವನೆಯಿಂದ ಹಾಗೂ ಇದರಲ್ಲಿ ಎಲ್ಲ ಸಮುದಾಯಗಳು ಸೇರಿ ಆಚರಿಸುವುದು ಕಂಡುಬರುತ್ತವೆ. ಮತ್ತು ಈ ಪ್ರದೇಶದ ಭಾಗಗಳಲ್ಲಿ ನಿಜವಾದ ಹಬ್ಬ ಹುಣ್ಣಿಮೆಯ ದಿವಸವೇ ಪ್ರಾರಂಭವಾಗುವುದು. ಪ್ರತಿಯೊಂದು ಮನೆಯ ಅಂಗಳಲ್ಲಿ ಒಂದು ಕುಣಿ ತೋಡುತ್ತಾರೆ. ಅದು ಒಂದು ಅಡಿ ಉದ್ದ ಒಂದು ಅಡಿ ಅಗಲ ಇರುತ್ತದೆ. ಆಳ ಮಾತ್ರ ಒಂದು ಅಡಿಗಿಂತ ಹೆಚ್ಚಾಗಿರುವುದಿಲ್ಲ. ಆ ಕುಣಿಯ ಉತ್ತರದ ಗೋಡೆಯಲ್ಲಿ ಒಂದು ಸಣ್ಣ ಮಾಡ ಮಾಡಿ ಅದರಲ್ಲಿ ಹಣತಿಯೊಂದನ್ನು ಇಟ್ಟು ದೀಪ ಹಚ್ಚುವರು. "ಕುಣಿಯ ಮಧ್ಯದಲ್ಲಿ ಒಂದು ಸಣ್ಣ ಬೆನಕನನ್ನು ನಿಲ್ಲಿಸುವರು. ಅದು ಕಾಮದ ಪ್ರತಿಕೃತಿಯಾಗಿರಬೇಕು. ಕೆಲವರು ಕಾಗದದ ಕಾಮನನ್ನು ಮಾಡಿ ಆ ಕುಣಿಯಲ್ಲಿ ಇರಿಸುವುದೂ ಉಂಟು. ಅಂದು ಮಧ್ಯಾಹ್ನದ ಹೊತ್ತಿಗೆ ಅದರಲ್ಲಿ ಕುಳ್ಳು ಕಟ್ಟಿಗೆ ಹಾಕಿ ಮೇಲೊಂದು ಹೋಳಿಗೆಯನ್ನಿಟ್ಟು ಬೆಂಕಿ ಇಡುತ್ತಾರೆ. ಕಾಮ ಸುಡುವುದನ್ನು ಕಂಡು ದೊಡ್ಡವರೂ ಸಣ್ಣವರೂ ಕೂಡಿ ಹೊಯ್ಕೊಳ್ಳುತ್ತಾರೆ. ಆಮೇಲೆ ಮನೆಯವರೆಲ್ಲ ಹೋಳಿಗೆಯ ಊಟ ಮಾಡಿ ನಲಿದಾಡುವರು. ಇದು ಮನೆ ಮನೆಯಲ್ಲಿ ಮಾಡುವ ಹೋಳಿ ಆಚರಣೆ. ಇಷ್ಟರಿಂದಲೇ ಅವರಿಗೆ ತೃಪ್ತಿ ಇಲ್ಲ. ಸಾರ್ವಜನಿಕವಾಗಿ ಒಬ್ಬ ಕಾಮನನ್ನು ಕೂರಿಸುವ ಪರಿಪಾಠ ಕೆಲವು ಕಡೆಗಳಲ್ಲಿದೆ ಅದನ್ನು ಸಾರ್ವಜನಿಕ ಕಾಮನೆಂದು ಕರೆಯುವುದುಂಟು."[೧]

ಹೋಳಿ ಹುಣ್ಣಿಮೆಯ ದಿವಸ ರತಿಯನ್ನೊಳಗೊಂಡ ಕಾಮನ ಸುಂದರ ಮೂರ್ತಿಯೊಂದನ್ನು ತಂದು ಊರ ಮಧ್ಯದಲ್ಲಿರುವ ಕಾಮನ ಕಟ್ಟೆಯ ಮೇಲೆ ಅಂದವಾಗಿ ಕೂರಿಸುತ್ತಾರೆ. ಕಟ್ಟೆಗೊಂಡು ಹಂದರ ಹಾಕಿ, ಅದನ್ನು ತಳಿರು ತೋರಣಗಳಿಂದ ಸಿಂಗರಿಸುತ್ತಾರೆ. ಅದೊಂದು ಸುಂದರ ಮಂಟಪ; ಅದರ ವೆಚ್ಚವನ್ನು ಪೂರೈಸಲು ಊರವರೆಲ್ಲ ವಂತಿಗೆ ನೀಡುವುದು ವಾಡಿಕೆ. ಅಂದು

ಮಂಟಪದ ತುಂಬಾ ನೆರೆದು ಆನಂದದಿಂದ ನಲಿದಾಡುವರು. ಕಾಮನ ಮುಂದೆ ಹಗಲಿರುಳೂ ಮಂಗಳವಾದ್ಯ ಬಾರಿಸುವುದು ನಡೆಯುತ್ತದೆ.

ಕಾಮನ ಹಬ್ಬದಲ್ಲಿ ಹಲಗೆ. ಸಣ್ಣದೊಡ್ಡ ಹಲಗೆಗಳನ್ನು ಹಿಡಿದು ಬಾರಿಸುವ ಹುಡುಗರನ್ನು ಎಲ್ಲೆಡೆ ಕಾಣುತ್ತೇವೆ. ಇದು ಶಿವನ ಮೇಲೆ ದಂಡೆತ್ತಿ ಬಂದ ಕಾಮನ ಯುದ್ಧ ಸನ್ನಾಹವನ್ನು ಸೂಚಿಸುತ್ತದೆ. ಹಲಗೆಯ ಬಡಿತ ಕಿವಿಯಲ್ಲಿ ಚೀತ್ಕಾರ ಧ್ವನಿ ತುಂಬಿ ತುಳುಕುತ್ತದೆ. ಅಷ್ಟೊಂದು ಉತ್ಸಾಹದಿಂದ ಆಚರಿಸಲ್ಪಡುತ್ತದೆ ಹೋಳಿ ಹಬ್ಬ.

ಸಾರ್ವಜನಿಕರು ಕಾಮನನ್ನು ಸಾಮಾನ್ಯವಾಗಿ ಹುಣ್ಣಿಮೆಯ ದಿನ ಮಧ್ಯಾಹ್ನ ಮಂಟಪದಲ್ಲಿ ಕೂಡಿಸುವರು. ಕಾಮನ ತೊಡೆಯ ಮೇಲೆ ರತಿ ಕೂತಿರುತ್ತಾಳೆ. ಕಾಮನಷ್ಟೇ ರತಿಯು ಸುಂದರಳು. ಸುಂದರ ಗಂಡಸನ್ನು ಕಾಮನಿಗೂ, ಸುಂದರ ಸ್ತ್ರೀಯನ್ನು ರತಿಗೂ ಹೋಲಿಸುವುದು ನಮ್ಮ ಕಾವ್ಯಗಳಲ್ಲಿ ಕವಿಸಮಯವಾಗಿ ಬಿಟ್ಟಿದೆ. ಇಂತಹ ಸುಂದರ ಕಾಮ ರತಿಯರನ್ನು ಕಾಣಲು ಊರ ಜನರು ತಂಡೋಪತಂಡವಾಗಿ ಬರುತ್ತಾರೆ. ನೋಡಿ ಆನಂದ ಪಡುತ್ತಾರೆ. ಅಂದು ಸಂಜೆ ಏಳು ಗಂಟೆಯ ಸುಮಾರಿಗೆ ಕಾಮನ ಮೆರವಣಿಗೆ ನಡೆಯುತ್ತದೆ. ನಾಲ್ಕೆತ್ತಿನ ಬಂಡಿಯ ಮೇಲೆ ಕಾಮನನ್ನು ಕೂರಿಸಿ ಅಲಂಕರಿಸಿ, ಮೆಂಟು ಮಜಲು ಮಾಡುವುದು ಈ ಪ್ರದೇಶದಲ್ಲಿ ಬಹುಕಾಲದಿಂದ ಸಾಗಿಬಂದ ಸಂಪ್ರದಾಯಬಂಡಿಯ ಮುಂದೆ ಊರ ಜನರೆಲ್ಲ ಸಾಲು ಸಾಲಾಗಿ ನಿಂತು ಕೈಯಲ್ಲಿ ಹಲಗೆ ಗುಣಿಯಿಂದ ಬಾರಿಸುತ್ತ ಕುಣಿದಾಡುತ್ತಾರೆ. ಹರಳೆಣ್ಣೆ ಇಲ್ಲವೆ ಸೀಮೆಎಣ್ಣೆಗಳ ಬೆಳಕು ಸಾವಿರಾರು ಹಲಗೆಗಳ ಬಡಿತ ಸಾಮೂಹಿಕ ಹೆಜ್ಜೆಯ ಕುಣಿತ ನಡುನಡುವೆ ಸಿಳ್ಳೆ ಹೊಡೆದು ಕೇಕೆ ಹಾಕುವುದು ನಡೆದೇ ಇರುತ್ತದೆ. ಅದನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಕಾಮದೇವನು ಸೈನ್ಯ ಸಮೇತನಾಗಿ ಶಿವನ ಮೇಲೆ ದಂಡೆತ್ತಿ ನಡೆದ ದೃಶ್ಯ ಕಣ್ಣಿಗೆ ಕಟ್ಟಿದಂತಾಗುವುದು.

ಊರವರೆಲ್ಲ ಮೆರವಣಿಗೆ ನೋಡಲು ಬಂದ ಸಮಯವನ್ನು ಸಾಧಿಸಿ ಅನೇಕ ಪುಂಡ ಜನರು ಕುಳ್ಳು ಕಟ್ಟಿಗೆ ಕದ್ದು ತಂದು ಕಾಮನನ್ನು ಕೂರಿಸುವ ಚಪ್ಪರದ ಮುಂದೆ ರಾಶಿರಾಶಿಯಾಗಿ ಒಟ್ಟುವ ಕಾರ್ಯದಲ್ಲಿ ನಿರತರಾಗುತ್ತಾರೆ. ಕೈಗೆ ಸಿಕ್ಕ ಕಟ್ಟಿಗೆಯನ್ನು ತರುವಾಗ ಬೈಸಿಕೊಳ್ಳುವುದೂ, ಬಡಿಸಿಕೊಳ್ಳುವುದೂ ನಡೆದೇ ಇರುತ್ತದೆ. ಕಾಮನ ಮೆರವಣಿಗೆ ಊರ ಬೀದಿಗಳಲ್ಲಿ ತಿರುಗಿ ಕಾಮನ ಕಟ್ಟೆಗೆ ಬಂದಾಗ ಮಧ್ಯರಾತ್ರಿ ಮುಗಿದು ಬೆಳ್ಳಿ ಮೂಡುವ ಸಮಯ ಆದರೂ ಆಗಬಹುದು. ಆ ಸಮಯದಲ್ಲಿ ಹಸಿ ಬಿದಿರಿನ ಕಂಬವೊಂದನ್ನು ನೆಟ್ಟು ಅದರ ತುದಿಗೆ ಬಾಸಿಂಗ ಕಟ್ಟುತ್ತಾರೆ. ಕಂಬದ ಸುತ್ತಲೂ ಕದ್ದ ಕಟ್ಟಿಗೆ, ಕುಳ್ಳು, ಬಟ್ಟೆ, ಅದರ ಮೇಲೆ ಬಂಡಿಯಲ್ಲಿರುವ ಕಾಮನನ್ನು ತೆಗೆದು ಇಡುತ್ತಾರೆ. ಕಾಮನನ್ನು ಪೂಜಿಸಿ ಕಾಯಿ ಒಡೆಯುತ್ತಾರೆ. ಕಾಮನ ಜೀವನದಲ್ಲಿ ಈ ಸನ್ನಿವೇಶ ಮಸಣವೂ ಹೌದು ಮದುವೆಯೂ ಹೌದು. ಕಾಮನ ದೇಹ ಸುಟ್ಟರೂ ಅವನು ನಿರ್ದೇಹಿಯಾಗಿ ಇರಬಲ್ಲ.

"ಶಿವನು ಹಾಗೆ ಕರುಣೆ ದೋರಿದ್ದಾರೆ. ಕಾಮ ಉರಿಯುತ್ತಿರುವಾಗಲೇ ರತಿಯ ಮಾಂಗಲ್ಯ ಭದ್ರವಾಗಬೇಕು. ಅದರ ದ್ಯೋತಕವಾಗಿಯೇ ಚಿತೆಯ ಮಧ್ಯದ ಕಂಬ ಹಂದರಗಂಬವಾಗಿ, ಅದಕ್ಕೆ ಕಟ್ಟಿದ ಬಾಸಿಂಗ ಕಾಮನ ಮದುವೆಯ ಸಂಕೇತವಾಗಿ ಇರುವುದನ್ನು ಗಮನಿಸಬಹುದು."[೨]

ಹೋಳಿ ಹಬ್ಬ ಸಂಪ್ರದಾಯ ಆಚರಣಾತ್ಮಕ ಕಲೆಯಾಗಿದ್ದು, ಎಲ್ಲ ಜಾತಿಯ ಕೂಡುಕಟ್ಟಿನೊಳಗೆ ನಡೆಯುವುದರಿಂದ ಎಲ್ಲ ವರ್ಗದ ಪ್ರೇಕ್ಷಕರು 'ತಮ್ಮದು' ಎಂಬ ಭಾವದಿಂದ ಪಾಲ್ಗೊಳ್ಳುತ್ತಾರೆ ಹಾಗೂ ಸಂತೋಷ ವ್ಯಕ್ತಪಡಿಸುತ್ತಾರೆ.

ಹೋಳಿ ಹುಣ್ಣಿಮೆ ಬಂತು, ಹೋಯ್ಕೊಳ್ಳುವ ಬಂತು
ಹೋಳ್ಗಿ ತುಪ್ಪಣ್ಣುದು ಬಂತೋ

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

"ಪಾಗುಣ ಪೌರ್ಣಿಮಿಯಂದು ಬರುವ ಹೋಳಿ ಹುಣ್ಣಿಮೆಗೆ ಹೋಳಿ ಹಬ್ಬದ ಅಥವಾ ಕಾಮನಹಬ್ಬವೆಂದು ಕರೆಯುತ್ತಾರೆ. ಭಾರತದ ಎಲ್ಲಾ ಕಡೆಗಳಲ್ಲಿ ಮಕ್ಕಳಾದಿಯಾಗಿ ಆಚರಿಸುವ ರಂಗುರಂಗಿನ ಹಬ್ಬವಿದು. ಯಾವುದೇ ಜಾತಿ ಪಂಥ, ಮತ ಹಾಗೂ ಧರ್ಮ ನಿರ್ಬಂಧವಿಲ್ಲದೆ ಸ್ತ್ರೀ ಪುರುಷರು ಬಿಚ್ಚುಮನಸ್ಸಿನಿಂದ ಆಚರಿಸುವ ಹಬ್ಬ ಇದಾಗಿದೆ. ಪಾಲ್ಗುಣ ಶುದ್ಧ ಹುಣ್ಣಿಮೆಯಂದು ರಾತ್ರಿ ಹೋಳಿ ಆಚರಣೆ ಆರಂಭವಾಗುವುದು."[೩]

### ಹಿನ್ನೆಲೆ

ಕಾಡಿನ ಗಿಡ, ಮರ, ಬಳ್ಳಿಗಳು ಚಿಗುರಿ ನಳನಳಿಸುತ್ತಿರುತ್ತವೆ. ಆಗ ಎಲ್ಲೆಲ್ಲೂ ಕೋಗಿಲೆಯ ಇಂಚರ ಕೇಳಿ ಬರುತ್ತದೆ. ಮಾವು ಮಲ್ಲಿಗೆ, ಸಂಪಿಗೆ ಮುಂತಾದವುಗಳಿಂದ ನಿಸರ್ಗ ಕಂಗೊಳಿಸುತ್ತಿರುತ್ತವೆ. "ಈ ರೀತಿಯ ಶೃಂಗಾರ ರಸದ ಪರಿಸರ ಪರಿಸ್ಥಿತಿಗಳಿಂದ ಸ್ತ್ರೀ ಪುರುಷರಲ್ಲಿ ಹುದುಗಿದ್ದ ಕಾಮ ರತಿವಾಸನೆ ಚಿಗುರುತ್ತದೆ. ಪ್ರತ್ಯಕ್ಷ ಪರಶಿವನೂ ಸಹ ಕಾಮವನ್ನು ಸುಟ್ಟರೂ, ನಂತರ ಪಾರ್ವತಿಗೆ ಒಲಿದು ಅರ್ಧ ಶರೀರವನ್ನು ನೀಡಿರುವುದು ಕಾಮನಿಗೆ ಒಲಿದ ನಿದರ್ಶನವಾಗಿದೆ."[೪]

ಜನಪದರು ಯಾವ ಬೇಧಭಾವವಿಲ್ಲದೆ ಹೋಳಿಯನ್ನು ಆಚರಿಸುತ್ತಾರೆ, ಆಡುತ್ತಾರೆ. ಹೊಯ್ಕಂಡ ಬಾಯಿಗೆ ಹೋಳ್ಗಿ ತುಪ್ಪ ಎಂಬಂತೆ ಹೋಳಿಗೆ ಊಟ ಸಂತೋಷಪಡುತ್ತಾರೆ.

ಹೋಳೀ ಹುಣ್ಣಿವಿ ಬಂತು ಹೋಳಿಗಿ ಮಾಡುದು ಬಂತ್ತು
ಬೋಳೆಮ್ಮ ತುಪ್ಪ ಕಾಸೂದುಬಂತ್ತು । ಎಲ್ಲಾರಿಗಿ
ಹೋಳಬಾಯಿ ಹಿಡಿದ ತುರುಕೂದು ಬತ್ತು

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಎಂದು ಹಾಡುತ್ತ ಹಲಗೆ ಹೊಡೆಯುತ್ತಾರೆ, ಹೊಯ್ಕೊಳ್ಳುತ್ತಾರೆ. ಈ ಹೊಯ್ಕೊಳ್ಳುವ ಕ್ರಿಯೆ ಉಳಿದ ಕಾಲದಲ್ಲಿ ಅಶುಭ ಎನಿಸಿದರೆ ಈ ಸಂದರ್ಭದಲ್ಲಿ ಅದು ಶುಭ.

ಈ ಹೋಳಿಯ ಆಚರಣೆಯನ್ನು ಚೆನ್ನಾಗಿ ಮಾಡಿದರೆ ಆ ವರ್ಷದ ಭವಿಷ್ಯ, ಮಳೆ-ಬೆಳೆ ಸಮೃದ್ಧವಾಗುತ್ತದೆ ಎಂಬ ನಂಬಿಕೆಯೂ ಜನರಲ್ಲಿದೆ.

ಹೋಳಿ ಆಡದ ನಾಡು ಹಾಳಾತೊ ಹಳ್ಳಾತೊ
ಗೋಳಾತೊ ಜನರ ಜಿನಗಾಗಿ। ಮಳಿಹೋಗಿ
ಬೀಳಾತೋ ಭೂಮಿ ಬರಗಾಲ।[೫]

ಅದಕ್ಕಾಗಿ ಈ ಆಚರಣೆ ಅನಿವಾರ್ಯ ಎನ್ನುವ ಮಾತನ್ನು ಜನಪದರು ನಂಬಿದ್ದಾರೆ.

ಒಟ್ಟಿನಲ್ಲಿ, ವಸಂತೋತ್ಸವ ಮಾರ್ಗವಾದರೆ, ದೇಶಿಯಲ್ಲಿ ಬಸಂತನ ಹುಣ್ಣಿಮೆಯಾಯ್ತು. ಅದೇ ಜನಪದರಲ್ಲಿ ಹೋಳೀ ಹುಣ್ಣಿಮೆಯಾಗಿ ಮೊದಲೇ ಇತ್ತು ಎಂದು ಹೇಳುವುದು ಸೂಕ್ತವೇನೋ. ಮುಂದಿನ ವಿವರಣೆಗಳು ಇದಕ್ಕೆ ಪುಷ್ಠಿ ನೀಡುತ್ತವೆ. ಜನಪದ ಶಿಷ್ಟಕ್ಕೆ ಸೇರಿ ದೇಸಿಗಿಳಿದ ಸಾಹಿತ್ಯದ ಹಂತಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಈ ಕುರಿತು ಜನಪದರಲ್ಲೊಂದು ಕತೆಯೂ ಇದೆ. ಪುರುಷರಲ್ಲಿ ಕಾಮ ಚೆಲುವನಾದರೆ, ಸ್ತ್ರೀಯರಲ್ಲಿ ರತಿ ಚೆಲುವೆ. ಈರ್ವರೂ ಸೌಂದರ್ಯದ ಸಾಕಾರಮೂರ್ತಿಗಳೆಂಬ ತಿಳಿವಳಿಕೆ ಜನಪದರದು.

ಕಾಮಣ್ಣ ನಿನ್ನಂಥ ಚೆಲುವರ್‍ಯಾರಿಲ್ಲ
ಭೀಮಸೇನನಂಥ ದುರಳಿಲ್ಲ । ದೇಶದ ಮ್ಯಾಲ
ಸೀತಾದೇವಿಯಂಥ ಗರತಿಲ್ಲ ॥

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಎಂದು ಕಾಮನ ಚೆಲುವನ್ನು ಸಾರುವ ಹಲವಾರು ಹಾಡುಗಳಿವೆ. ಹುಡುಗೇನ ಕಾಮಣ್ಣಾ ಗ್ಯಾನ ಹುಡಿಗೇನ ರತಿ ಆಗ್ಯಾಳ ಎನ್ನುವುದು ಸಾಮಾನ್ಯ. ಒಮ್ಮೆ ಶಿವಪಾರ್ವತಿ ಓಲಗದಲ್ಲಿ ಕುಳಿತಾಗ ಶಿವ-ಪಾರ್ವತಿಯನ್ನು ಕುರಿತು ಪ್ರಪಂಚದಲ್ಲಿ ಯಾರು ಚೆಲುವರು ಎಂದು ಕೇಳಿದನಂತೆ. ಪಾರ್ವತಿ ಸಹಜವಾಗಿ ಕಾಮನೇ ಅಧಿಕ ಚೆಲುವ ಎಂದಳಂತೆ. ಗಂಡನನ್ನು ಬಿಟ್ಟು ಪರಪುರುಷನನ್ನು ಚೆಲುವ ಎನ್ನುವ ಹೆಂಡತಿಯ ಮಾತು, ಎಲ್ಲ ಪುರುಷರಂತೆ ಶಿವನಿಗೂ ಹಿಡಿಸಲಿಲ್ಲ. ಈರ್ವರಿಗೂ ಈ ವಿಷಯದಲ್ಲಿ ವಾದ ಬೆಳೆದು ಶಿವನಿಗೆ ಸಿಟ್ಟು ಬಂತಂತೆ. ಹೆಂಡತಿ ಪಾರ್ವತಿಗೆ ಏನೂ ಮಾಡಲಾಗದ ಶಿವ, ಪಾಪ ಕಾಮನ ಮೇಲೆ ಕೋಪಗೊಂಡ ಉರಿಗಣ್ಣು ತೆರೆದು ಕಾಮನನ್ನೇ ಸುಟ್ಟುಬಿಟ್ಟನಂತೆ–

ಸಿಟ್ಟಿಗೇಳುವ ಶಿವನು ಬಿಟ್ಟಾನ ಉರಿಗಣ್ಣು
ಸುಟ್ಟು ಬೂದ್ಯಾದ ಕಾಮಣ್ಣ । ರತಿದೇವಿ
ಹೊಟ್ಟೆ ಬಡಕೊಂಡ ಅಳತಾಳ[೬]

ಹೊಟ್ಟೆ ಬಡಕೊಂಡು ಗೋಳಾಡುವ ನಿರಪರಾಧಿ ರತಿಯ ಗತಿ ಕಂಡು ಸಭೆಯ ಜನರೆಲ್ಲ ಗೋಳಾಡಿದರಂತೆ. ರತಿಯ ಈ ಸ್ಥಿತಿಗೆ ತಾನೇ ಕಾರಣಳೆಂದು ತಿಳಿದ ಪಾರ್ವತಿ ಕಣ್ಣೀರಿಡತೊಡಗಿದಳು. ಅವಳ ಕಣ್ಣೀರು ಕಂಡ ಶಿವನಿಗೆ ಮರುಕಗೊಂಡು ಹೆಂಡತಿಯ ಸಮಾಧಾನಕ್ಕಾಗಿ ರತಿ ದೇವಿಯನ್ನು ಸಮಾಧಾನಪಡಿಸಲು

ಹೊರಳಾಡಿ ಅಳಬ್ಯಾಡ ಉರದ್ಹೋದ ಕಾಮಣ್ಣ
ಕರದಾಗ ಬರುವ ರತಿದೇವಿ । ಮನದಾಗ
ಇರತಾನ ಕಾಮ ನೆನೆದಾಗ

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಕಾಮಣ್ಣನನ್ನು ಸುಟ್ಟಾಗ ಅವನ ಹೆಂಡತಿ ರತಿದೇವಿ ತನ್ನ ಸಂಕಟ, ರೋಧನೆಯನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ಆಕೆಯನ್ನು ಸಂತೈಸುವುದರ ಸಲುವಾಗಿ ಕಾಮಣ್ಣನೇನು ನಿನ್ನನ್ನು ಬಿಟ್ಟು ಎಲ್ಲಿ

ಹೋಗಿಲ್ಲ. ಅವನನ್ನು ಯಾವಾಗ ಕರೆದರೂ ಬರುತ್ತಾನೆ. ಅವನು ಸದಾ ನಿನ್ನ ಮನದಲ್ಲಿರುವವನಾಗಿದ್ದಾನೆ. 'ನೆನೆದವರ ಮನದಲ್ಲಿ' ಎಂಬಂತೆ ಈ ಹಾಡಿನ ಅರ್ಥವನ್ನು ಗ್ರಹಿಸಬಹುದಾಗಿದೆ.

ಇವೆಲ್ಲಕ್ಕೂ ಪೂರಕವಾಗಿ ಹೋಳಿ ಹುಣ್ಣಿಮೆಯ ಮೂಲಕಥೆಯ ಸಂಗ್ರಹದ ಮೊದಲ ಹಾಡನ್ನು ಪರಿಶೀಲಿಸಬಹುದಾಗಿದೆ. ಸಂಪೂರ್ಣವಾಗಿ ಜನಪದ ಆಚರಣೆಯಲ್ಲಿ ಹೋಳಿಯ ಹಿನ್ನೆಲೆ ಅದರಲ್ಲಿದೆ. ಸಂಕ್ಷಿಪ್ತವಾಗಿ ಅದನ್ನಿಲ್ಲಿ ಅವಲೋಕಿಸಬಹುದಾಗಿದೆ. ನಮ್ಮಲ್ಲಿ ಬದುಕಿದಾಗಿನ ಸಂಸ್ಕಾರ ಮುಖ್ಯವಲ್ಲ. ಸತ್ತಾಗಿನ ಸಂಸ್ಕಾರ ಮಾತ್ರ ಅನಿವಾರ್ಯ. ಬಹಿಷ್ಕೃತ ಕಾಮನ ಶವಸಂಸ್ಕಾರ ಇನ್ನೂ ದೊಡ್ಡ ಸಮಸ್ಯೆಯಾಗುತ್ತದೆ. ಬ್ರಾಹ್ಮಣರಾರೂ ಬಾಗಿಲು ತೆರೆಯುವುದಿಲ್ಲ. ಇನ್ನುಳಿದ ಸಮಾಜದವರು ಸಂಸ್ಕಾರದ ವಿಧಿ-ವಿಧಾನ ಅರಿಯದೆ ಸುಮ್ಮನೆ ಮರುಕುಪಡುತ್ತಾರೆ.[೭]

ಆದರೆ ಜಾತಿ ಧರ್ಮಗಳಿರದ ಗೆಳೆಯರಿಗೆ ಇದು ಬಿಡಲಾರದ ಕರ್ಮ. ಅವರೆಲ್ಲ ಕೂಡಿ ಶವಸಂಸ್ಕಾರಕ್ಕೆ ಕುಳ್ಳು ಕಟ್ಟಿಗೆ ಬೇಡಿ ಸಂಗ್ರಹಿಸಲು ಮನೆಮನೆಗೆ ಹೋದರೆ ಬಹಳಷ್ಟು ಜನರ ಸಹಕಾರವಿಲ್ಲ. ಆಗ ಅನಿವಾರ್ಯವಾಗಿ, ಊರ ಹೊರಗಿನ ದಡ್ಡಿ ಹಿತ್ತಲುಗಳಲ್ಲಿ ಸಂಗ್ರಹಿಸಿಟ್ಟ ಕುಳ್ಳು, ಕಟ್ಟಿಗೆಗಳನ್ನು ಮಾಡಿ ತರುತ್ತಾರೆ. ಆದರೆ ದೊಡ್ಡ ಸಮಸ್ಯೆ ಎಂದರೆ ಕಿಚ್ಚು ಕೊಡಲು ಬೇಕಾದ ಬೆಂಕಿಯದ್ದು. ಬೆಂಕಿಯನ್ನು ಕೊಡಲು ಯಾರೂ ಒಪ್ಪಲಿಲ್ಲ. ಆಗ ಗೆಳೆಯರೆಲ್ಲರೂ ಸೇರಿ ಹೊಲಗೇರಿಗೆ ಹೋಗಿ, ಅದೂ ಹೋಳಿಯ ವಿರಹದಲ್ಲಿ ಸುತ್ತುದರಿಂದ ಅವಳ ಮನೆಯ ಬೆಂಕಿಯನ್ನೇ ತರಲು ನಿರ್ಧರಿಸುತ್ತಾರೆ. ಆದರೂ ಅದಕ್ಕೆ ಪ್ರತಿರೋಧ ಒಡ್ಡುತ್ತಾರೆ. ಭಾವಪರವಶರಾದ ತರುಣರು ಹೋರಾಡಿ ಬೆಂಕಿಯಷ್ಟನ್ನೇ ಅಲ್ಲಕಾಮನ ಪ್ರೇಯಸಿ ಹೋಳಿಯನ್ನು ಹೊತ್ತು ತಂದು ಕಾಮನ ಜೊತೆಗೆ ದಹನ ಮಾಡುತ್ತಾರೆ. ಹಲಗೆ, ವಾದ್ಯ, ಹೊಯ್ಕೊಳ್ಳುವುದು ಕಾಮನ ಅಗಲಿಕೆಯ ದುಃಖ ಮತ್ತು ಸಂಪ್ರದಾಯದ ಸಮಾಜ ಕುರಿತ ಪ್ರತಿಭಟನೆಯ ದ್ಯೋತಕವಾಗುತ್ತವೆ. ಇದು ಜನಪದ ಹೋಳಿಯ ಮೂಲ ಹಾಡಿನ ಆಶಯ

ಬಾಳ ಕಷ್ಟಪಟ್ಟು ಗೆಳೆಯ
ಹೋಳಿಯಿಂದ ಸತ್ತನೆಂದು
ಹೋಳಿ ಹುಣ್ಣಿಮೆಯೆಂದು ಹೆಸರಿಟ್ಟು[೮]

ಹೀಗೆ, ಸತ್ತ ಕಾಮನ ಜೊತೆ ಜೀವಂತ ಹೋಳಿಯನ್ನು ಸುಟ್ಟರು. ಅದಕ್ಕಾಗಿ ಈ ಬಸಂತನ ಹುಣ್ಣಿಮೆ ಹೋಗಿ ಹೋಳಿ ಹುಣ್ಣಿಮೆಯಾಯ್ತು. ಅಪರೂಪದ ಈ ಜನಪದ ದುರಂತ ಕಥೆಯ ಕೆಲವು ಅಂಶಗಳು ಪರಿಶೀಲನಾರ್ಹ. ಕವಿ ಪುರಾಣದ ಕಥೆಯನ್ನು ಹಿನ್ನೆಲೆಯಾಗಿ ಮಾತ್ರ ಹೇಳಿ, ಕಾಮ ರತಿಯರಿಗೆ ಈ ಭೂಮಿಯಲ್ಲಿ ಹರಿಹರನ ರಗಳೆ ಮಾದರಿಯಲ್ಲಿ ಮರುಹುಟ್ಟು ಕಲ್ಪಿಸಿ, ಜಾನಪದ ಚೌಕಟ್ಟಿನಲ್ಲಿ ಅದಕ್ಕೊಂದು. ಸಾಮಾಜಿಕ ಸ್ವರೂಪ ಕೊಟ್ಟಿದ್ದಾನೆ. ಮೊದಲ ನೋಟದಲ್ಲೇ ಹೋಳಿಗೆ ಮಾರುಹೋದ ಮಾರ ಕಂಗಾಲಾಗುತ್ತಾನೆ. ಗಣಿಕೆ ಹೋಳಿಗೆ ತನ್ನ ಕಾಮ ತೃಪ್ತಿಗಾಗಿ ಬಿಂದಿಗೆ ಹೊನ್ನ ಕಳವು ಮಾಡಿಕೊಡುತ್ತಾನೆ. ಕಣ್ಣಿಲ್ಲದ ಕಾಮಾಂಧನ ನೈಜ ಸ್ವಭಾವವನ್ನೇ ಇದು ಪ್ರತಿಬಿಂಬಿಸುತ್ತದೆ.

## ಆಚರಣೆಯ ವಿಧಾನ

ಹೋಳಿ ಆಚರಣೆ ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿರುವುದು ಸ್ವಾಭಾವಿಕ. ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ರೂಢಿಯಲ್ಲಿರುವ ಆಚರಣೆಯ ವಿಧಾನವನ್ನಿಲ್ಲಿ ನೋಡಬಹುದಾಗಿದೆ.

ಪ್ರತಿ ಊರಿನಲ್ಲಿ ಕಾಮನ ಕಟ್ಟೆ ಇದ್ದೇ ಇರುತ್ತದೆ. ಕೊಪ್ಪಳ ಜಿಲ್ಲೆಯಲ್ಲಿ ಈಗಲೂ ಕಾಮನಕಟ್ಟೆ ಎಂಬ ಓಣಿ ಇದೆ. ಹಲವು ಹಳ್ಳಿಗಳಲ್ಲಿ ಕಾಮನಕಟ್ಟೆ ಹೆಸರಿನ ಓಣಿಗಳಿವೆ. ಕಾಮ ಸತ್ತುದು ಕಾಮನ ಹಬ್ಬದ ಆರಂಭ. ಶಿವರಾತ್ರಿ ಅಮವಾಸ್ಯೆಯ ತರುವಾಯ ಚಂದ್ರನನ್ನು ನೋಡಿದೊಡನೆಯೇ ಆರಂಭ. ಓಣಿ ಓಣಿಗೆ ಸಣ್ಣ ಸಣ್ಣ ತಗ್ಗುಗಳನ್ನು ತೋಡಿ ಕಾಮಣ್ಣನ ಕುಣಿ ನಿತ್ಯ ಸಂಜೆ ದೀಪ ಹಚ್ಚುತ್ತಾರೆ. ಅದಕ್ಕಾಗಿ ಓಣಿಯಲ್ಲಿ ಪಟ್ಟಿ ಹಣ ಕೂಡಿಸುವ ಅಭ್ಯಾಸ ಈಗ ಆರಂಭವಾಗಿದೆ. ಅನಂತರ ದೈವದ ಕಾಮನನ್ನು ಕೂಡಿಸಲು ಆರಂಭಿಸಿದರು. ಆ ಮೇಲೆ ಓಣಿಯ ಕಾಮ ಈಗ ಓಣಿಗೆ ಕಾಮಣ್ಣಗಳು ಆಗಿ ಪ್ರತಿ ಹಳ್ಳಿಗಳಲ್ಲಿ ಹಲಗೆ ಮಾಡುವವರಿಗೆ, ಮಾರುವವರಿಗೆ ಸುಗ್ಗಿ. ಅಂಗೈ ಅಗಲದಿಂದ ಮೊಳ ಉದ್ದಗಲದ ಹಲಗೆಗಳನ್ನು ಮಾಡುತ್ತಿದ್ದರು. ಮನೆಮನೆಗೆ ಒಂದೆರಡು ಹಲಗೆಗಳನ್ನಾದರೂ ಕೊಳ್ಳುತ್ತಿದ್ದರು. ಚಿಟ್ಟಲ್ಹಗೆಯಿಂದ ಕಣಿ ಹಲಗೆಯವರೆಗಿನ ಹಲಗೆಗಳ ಸಪ್ಪಳ ಎಂಟತ್ತು ದಿನ ಊರ ತುಂಬ ಕೀಸರ ಬಾಸರ ಅವರು ಬಾರಿಸಿದ್ದೇ ಗತ್ತು. ಅದು ನುಡಿದದ್ದೇ ನಾದ. ಹಲಗೆ ಬಾರಿಸಲು ಒಂದೇ ಗುಣಿ ಸಾಕು. ಹಲಗೆ ಬಾರಿಸುವುದು. ಮೇಲೆ ಬಾಯಿ ಬಾರಿಸುವುದು, ಹೊಯ್ಕಾಳ್ಳುವುದು. ಅಂದರೆ ಕಾಮನ ಪೂಜಾ ಮಂತ್ರವಿದ್ದಂತೆ ಜಾತಿ ಬೇಧವಿಲ್ಲದೆ ಎಲ್ಲರೂ ಒಂದೇ ಎಂಬ ಭಾವನೆಯಿಂದ ಕೂಡಿರುತ್ತಾರೆ.

ಹುಣ್ಣಿಮೆ ದಿನ ಆಳೆತ್ತರದ ಕಾಮಣ್ಣನ ಸುಂದರ ಮೂರ್ತಿಯನ್ನು ಕೂಡಿಸಿ ಚೆನ್ನಾಗಿ ಸಿಂಗರಿಸುತ್ತಿದ್ದರು. ಕೆಲವು ಕಡೆ ರತಿಯನ್ನು ಜೊತೆಗೆ ಕೂಡಿಸುವ ರೂಢಿಯೂ ಇತ್ತು. ಕಾಮನ ಕೈಗೆ ಖಡ್ಗ, ಢಾಲು ಕೊಡುತ್ತಿದ್ದರು. ಕಾಮ ಪ್ರಚೋದನೆಯ ಉಳ್ಳಾಗಡ್ಡಿಯ ಹೂವಿನ ಗಣಿಯನ್ನು ತಪ್ಪದೇ ಕೈಯಲ್ಲಿ ಕೊಡುತ್ತಿದ್ದರು. ಕೆಲವು ಕಡೆ ಬೇವಿನ ಹೂವನ್ನು ಕೊಡುತ್ತಾರಂತೆ. ಮಧ್ಯಾಹ್ನ ಪೂಜೆ ನೈವೇದ್ಯಗಳನ್ನು ಸಲ್ಲಿಸುತ್ತಿದ್ದರು.

> ಸಂಜೆ ಹಿಂಡುಗಟ್ಟಿಕೊಂಡು ಹಲಗೆ ಹೊಡೆಯುತ
> ಕಾಮ ಸತ್ತಾನಂತ ಭೀಮ ಬೋರ್ಯಾಡತಾನ
> ಮನಿಗೈದು ಕುಳ್ಳ ಕೂಡಿರೆವ್ವ ಕಾಮಣ್ಣನ
> ಚೆಂದಾಗಿ ಕಿಚ್ಚು ಕೊಡಬೇಕ್

ಎಂದು ಹಾಡುತ್ತಾ ಮನೆಮನೆಗೆ ಹೋಗಿ ಕುಳ್ಳು, ಕಟ್ಟಿಗೆ ಬೇಡುತ್ತಿದ್ದರು. ಅಂದು ಕಾಮನನ್ನು ಸುಡುವವರಿಂದ ದೊಡ್ಡ ಪ್ರಮಾಣದಲ್ಲಿ ಕುಳ್ಳು, ಕಟ್ಟಿಗೆಯ ಕಳ್ಳತನ ನಡೆಯುತ್ತಿತ್ತು.

## ೪.೨. ಹಂತಿ ಹಾಡುಗಳು

ಜನಪದ ಸಾಹಿತ್ಯ ಸೃಷ್ಟಿಯಾದದ್ದು ವಿಶೇಷವಾಗಿ ಹಳ್ಳಿಯ ಜನರಿಂದ. ಅದರಲ್ಲೂ ಒಕ್ಕಲು ಮಕ್ಕಳಿಂದ. ಭಾರತ ದೇಶವು ನೂರಕ್ಕೆ ತೊಂಬತ್ತರಷ್ಟು ಹಳ್ಳಿಗಳಿಂದ ಕೂಡಿದ ದೇಶವಾಗಿದೆ.

ಅಲ್ಲಿಯ ಪ್ರಮುಖ ಉದ್ಯೋಗ ಒಕ್ಕಲುತನ. ಕಲ್ಲು, ಮಣ್ಣು ಮತ್ತು ಚಳಿ, ಮಳೆ, ಬಿಸಿಲು, ಗಾಳಿಯೆನ್ನದೆ ಹಗಲಿರುಳು ದುಡಿದು ಬೆವರು ಸುರಿಸುವ ಈ ನೇಗಿಲಯೋಗಿ ನಿಜಕ್ಕೂ ಕರ್ಮಯೋಗಿ. ಆತನಿಗೂ ಧರ್ಮವಿದೆ, ನೀತಿ ಇದೆ, ತನ್ನದೇ ಆದ ವಿದ್ಯೆ ಇದೆ, ಶಾಸ್ತ್ರವಿದೆ. ಹೊಲ ಹಸನು ಮಾಡುವ ಉತ್ತಿಬಿತ್ತುವ, ಬಿತ್ತಿ ಕಳೆ ತೆಗೆದು ಬೆಳೆ ಬೆಳೆವ, ಬೆಳೆ ಕೊಯ್ದು ರಾಶಿ ಮಾಡುವ, ರಾಶಿ ಮಾಡಿ ಫಲ ಭೋಗಿಸುವ ಒಕ್ಕಲಿಗರ ದುಡಿತದ ಸಂತೋಷಕ್ಕೆ ಸೀಮೆಯಿಲ್ಲ. ಈ ದುಡಿತದ ಪ್ರತಿಯೊಂದು ಸಂದರ್ಭದಲ್ಲೂ ಒಕ್ಕಲಿಗರು ಹಾಡುವುದುಂಟು.

ಒಕ್ಕಲಿಗರು ದುಡಿಮೆಯಲ್ಲೂ, ದೇವರನ್ನು ಪ್ರಾರ್ಥಿಸುತ್ತಾರೆ. ಪೂಜೆ, ಪುನಸ್ಕಾರ ಮಾಡಿ ಕಷ್ಟ ಪರಿಹಾರಕ್ಕಾಗಿ ದೇವರ ಮೊರೆಹೋಗುತ್ತಾರೆ. ಒಕ್ಕಲುತನಕ್ಕೆ ಬೇಕಾದ ಸಾಧನ, ಉಪಕರಣಗಳು; ದೈವ-ದೇವತೆಗಳು ಅವುಗಳನ್ನು ಪೂಜಿಸುತ್ತಾರೆ. ಅಪ್ಪಿತಪ್ಪಿ ಅವಕ್ಕೆ ಕಾಲು ತಾಗಿದರೆ ಮುಟ್ಟಿ ನಮಸ್ಕರಿಸುತ್ತಾರೆ. ಅವರ ತಾಯಿ ಭೂದೇವಿ. ತಂದೆ ಮಳೆರಾಜ. ಎದ್ದುಬಿದ್ದರೂ ಅವರದೇ ನಾಮಸ್ಮರಣೆ. ಅವರ ಸಂಪತ್ತೆಂದರೆ ಎರಡೆತ್ತುಗಳು. ಎತ್ತು ಮೂರಿದ್ದವರ ಒಕ್ಕಲುತನ ಎಂದೂ ಮುರಿಯುವುದಿಲ್ಲ ಎನ್ನುವ ಅನುಭವ ಮಾತು ಬಳಕೆಯಲ್ಲಿದೆ. ಎತ್ತು ಇಲ್ಲದವನದು ಒಕ್ಕಲುತನವೇ ಅಲ್ಲವಂತೆ. ಒಕ್ಕಲಿಗರಿಗೆ ಸಕಾಲಕ್ಕೆ ಸರಿಯಾದ ಮಳೆಯೂ ಬೇಕು. ಅದಕ್ಕಾಗಿ ಯಾವಾಗಲೂ ಮಳೆರಾಜನನ್ನು ಪ್ರಾರ್ಥಿಸುತ್ತಾರೆ. ಈ ರೀತಿಯಲ್ಲಿ ತಮ್ಮ ಜೀವನ ಯಾತ್ರೆಯಲ್ಲಿ ಒಕ್ಕಲಿಗರು ಒಂದಿಲ್ಲ ಒಂದು ಪದ ಕಟ್ಟಿ ಹಾಡು ಹೇಳುತ್ತಾರೆ. ದೇವರಲ್ಲಿ ಭಯ-ಭಕ್ತಿ ಇದ್ದುದರಿಂದಲೂ ಶಿವನನ್ನು, ಶಿವನ ಭಕ್ತರನ್ನು ಕುರಿತು ಹಾಡುತ್ತಾರೆ. ಐತಿಹಾಸಿಕ, ಪೌರಾಣಿಕ, ಮಹಾಪುರುಷರ ಚರಿತ್ರೆಗಳನ್ನು, ಲೀಲೆಗಳನ್ನೂ ಹಾಡಿ ತೋರಿಸುತ್ತಾರೆ. ಶೂರ, ಧೀರರ ಸಾಹಸಗಳನ್ನು ಕೊಂಡಾಡುತ್ತಾರೆ. ದೇವ-ದೇವತೆಗಳ ಮಹಿಮೆಗಳನ್ನು ಕಟ್ಟಿ ಹಾಡುತ್ತಾರೆ. ತಮ್ಮ ಸುತ್ತಮುತ್ತಲಿನ ದಿನನಿತ್ಯದ ನೂರಾರು ಘಟನೆಗಳನ್ನು ಕುರಿತು ಹಾಡು ಹೇಳುತ್ತಾರೆ.[೧೦]

**ಹಂತಿ ಪದನಿಷ್ಪತ್ತಿ**

ಹಂತಿ>ಪಂತಿ>ಪಂಜ್ತು>ಪಂಕ್ತಿ ಎಂದಾಗಿರಬೇಕು. ಇದು 'ಸಾಲು' ಎನ್ನುವ ಅರ್ಥದಲ್ಲಿ ಬಳಕೆ ಯಾಗುತ್ತದೆ. ಪಂಕ್ತಿಯೆ-ಪಂತಿ-ಹಸ್ತಿಯಂತಾಗಿರುತ್ತದೆ. ಹಂತಿ ಅಥವಾ ಹಸ್ತಿಗೆ ಸಾಲು, ದಾರಿ a, line, arow ಎನ್ನುವ ಅರ್ಥ ಕಿಟೆಲ್ ಕೋಶದಲ್ಲಿದೆ. ಎತ್ತುಗಳನ್ನು ಕಣದ ಮೇಲೆಯ ಸುತ್ತಲೂ ಸಾಲಾಗಿ ನಿಲ್ಲಿಸಿ ಕಣದ ಕೇಂದ್ರವಾದ ಮೇಟಿಗೆ ಹಗ್ಗ ಅಥವಾ ಮಿಣಿಯಿಂದ ಎತ್ತುಗಳ ಕೊರಳಿಗೆ ಥಳುಕು ಹಾಕಿ ಕಟ್ಟಿದರೆ ಹಂತಿ ಪಂಕ್ತಿ ಸಿದ್ಧವಾಗುತ್ತದೆ. ಮೇಟಿಯ ಸುತ್ತ ಸಾಲಾಗಿ ಕಟ್ಟಿದ ಎತ್ತುಗಳನ್ನು ತಿರುಗಿಸಿದಾಗ ಎತ್ತುಗಳ ಕಾಲಿಗೆ ಸಿಕ್ಕ ತೆನೆ, ಹುಲ್ಲು ಯಾವುದಾದರೂ ಸರಿಕಾಳು ಬಿಚ್ಚುತ್ತದೆ. ಹೀಗೆ ನುರಿತ ತೆನೆಯನ್ನು ಕಾಲಾಡಿಸುತ್ತ ಎತ್ತುಗಳ ಸಾಲಿನ ಹಿಂದೆ ತಿರುಗುವವನೇ ಹಂತಿ ಹೊಡೆಯುವವ. ಆಗ ಅವನು ಹಾಡುವ ಹಾಡೇ ಹಂತಿ ಹಾಡು ಎನಿಸಿಕೊಳ್ಳುತ್ತದೆ. ಸೋಮಶೇಖರ ಇಮ್ರಾಪೂರ ಅವರು ಅಭಿಪ್ರಾಯಪಡುವಂತೆ ಹಂತಿ ಸಂಪ್ರದಾಯದ ಹಾಡುಗಳೆಂದರೆ ನಿಜಕ್ಕೂ ಜನಪದ ಹಾಡುಗಾರಿಕೆಗೆ ರೈತನು ಕೊಟ್ಟ ಅಪೂರ್ವ ಕಾಣಿಕೆ. ಸುಗ್ಗಿಯ ಕಣದಲ್ಲಿ ರೈತನು ಹಂತಿ ಕಟ್ಟಿದಾಗ ಹೇಳುವ ಹಾಡುಗಳೇ ಹಂತಿ ಹಾಡುಗಳು.

ಹಂತಿ ಕಟ್ಟುವುದು ಇಳಿಹೊತ್ತಿನಲ್ಲಿ; ಮುಳುಗಿಸುವುದು ಬೆಳಗ್ಗೆ. ಸುಗ್ಗಿಯ ಕಾಲದಲ್ಲಿ ತಿಂಗಳುಗಟ್ಟಲೆ ಈ ಕಾರ್ಯ ನಡೆಯುತ್ತದೆ. ಎತ್ತುಗಳಿಗಾಗಲಿ, ಹಂತಿ ಹೊಡೆಯುವವನಿಗಾಗಲಿ, ಕಂಕಿ ತೆಗೆಯುವವನಿಗಾಗಲಿ, ನಿದ್ದೆ ಬಾರದಂತೆ ಹಂತಿ ಪದಗಳು ಸಹಾಯಕವಾಗುತ್ತವೆ. ಅವು ಶ್ರಮ ಪರಿಹಾರದ ಸೂಚನೆಗಳೂ ಆಗಿವೆ. ತಂಪು ರಾತ್ರಿಯಲ್ಲಿ ಇಂಪಾಗಿ ಹೊಡೆಯುವಾಗ ಹತ್ತು ಹಲವು ವಿಷಯಗಳನ್ನು ಕುರಿತು ಹಾಡುತ್ತಾರೆ. ಒಳ್ಳೆಯ ಫಸಲು ಬರಲೆಂದು, ಉತ್ತಮವಾದ ಗಾಳಿ ಬೀಸಲೆಂದು, ಚೆನ್ನಾಗಿ ಮಳೆ ಬೀಳಲೆಂದು ದೇವರಲ್ಲಿ ಪ್ರಾರ್ಥಿಸುತ್ತಾರೆ. ಹರಕೆ ಹೊರುತ್ತಾರೆ. ಹಂತಿ ಹಾಡುಗಾರರು ನಿರಕ್ಷರಿಗಳು; ಕೇಳಿ ತಿಳಿದ ಕಂಡುಂಡ ಅನುಭವದ ಮೇಲೆಯೇ ಬದುಕಿನ ಸಾರ್ವಕಾಲಿಕ ಸತ್ಯವನ್ನು ನಿಷ್ಕರ್ಷಿಸಬಲ್ಲರು. ಹಲವು ದೇವರ ಸ್ತುತಿ, ಪಾಂಡವರ–ಕೌರವರ ಕಥೆ, ಎತ್ತುಗಳನ್ನು ಕುರಿತು ಪ್ರಶಂಸಾತ್ಮಕ ಸಾಹಸ ಕಥೆಗಳು, ಐತಿಹಾಸಿಕ ಜನರ ಸಾಹಸ ಚರಿತ್ರೆಗಳು, ಕೃಷಿ ಉಪಕರಣಗಳು ಇವು ಹಂತಿ ಹಾಡುಗಳು ಸರ್ವಸಾಮಾನ್ಯವಾದ ವಸ್ತುಗಳಾಗಿವೆ. ಹಂತಿ ಪದಗಳು ರೈತರ ಜೀವನಾನುಭವದ ಆತ್ಮಚರಿತ್ರೆಯ ಗೀತೆಗಳಾದಂತೆ ಗ್ರಾಮೀಣ ಜನತೆಯ ಬದುಕಿನ ಸಮಸ್ತ ಆಶೋತ್ತರಗಳನ್ನು ಸವಿವರವಾಗಿ ತಿಳಿಸುತ್ತವೆ.[೧೧]

ತಮ್ಮ ಜೀವನದ ಅವಿಭಾಜ್ಯ ಅಂಗವಾಗಿ ಕಾಯಕದ ಬದುಕಿಗೆ ಬೆನ್ನೆಲುಬಾಗಿರುವ ಬಸವಣ್ಣನನ್ನು ಮರೆಯದೆ ನೆನೆಯುತ್ತಾರೆ. ಉದಾಹರಣೆ–

ಹಂತಿ ಹೊಡೆವಾಗ ಯಾರನ್ನು ನೆನೆಯಲೊ
ಬಾಯಿಲ್ಲದ ಬಸವಣ್ಣನ । ನೆನಿದರ
ಬಾರದ ಪದವೂ ಬಂದಾವೊ ॥[೧೨]

ಬೆಳವಲ ನಾಡಿನ ಕೊಪ್ಪಳ ಪ್ರದೇಶದ ಕಡೆಗೆ ರೈತರು ತಮ್ಮ ಬದುಕಿನ ಮೇಲೆ ಪ್ರಭಾವ ಬೀರಿದ ಈಶ್ವರನ ಹೃದಯ ತುಂಬಿ ಸ್ಮರಿಸಿ, ಹಂತಿ ಹೊಡೆಯುತ್ತಾರೆ. ಉದಾಹರಣೆ–

ಈಗ ಹಂತಿಯ ಹೂಡಿ ಈಶ್ವರನ ನೆನೆಯಲ್ಲೋ
ನನ್ನೂರ ಬಂಟ ಕರಿ ಹನುಮನೋ । ನೆನೆಯುತ
ಬೆಳತನ ಹಂತಿ ಹೊಡೆದೇವೊ ॥

(ದಾವನಸಾಬ ಆತ್ತಾರ, ಆಬಲಕಟ್ಟಿ)

ಹಂತಿ ಹೊಡೆಯುವ ಸಂದರ್ಭದಲ್ಲಿ ರೈತರು ಶಿವಧ್ಯಾನ ಮಾಡುತ್ತ ಶಿವನನ್ನು ನೆನಪಿಸುತ್ತ ಹಾಗೂ ಶಿವ–ಪಾರ್ವತಿಯ ಪಾದವನ್ನು ನೆನೆಯುತ್ತಾರೆ. ಉದಾಹರಣೆ–

ಶಿವಶಿವಯೆನಬೇಕೋ ಶಿವಧ್ಯಾನ ಮಾಡಬೇಕೋ
ಶಿವನಿಗೆ ಮೊದಲ ನೆನಬೇಕೊ । ಹಂತಿಕಟ್ಟಿ
ಪಾರ್ವತಿ ಪಾದ ಹಿಡಿಯಬೇಕೊ ॥[೧೩]

ಜನಪದ ಸಾಹಿತ್ಯದಲ್ಲಿ ಕಂಡುಬರುವ ಹಂತಿ ಹಾಡುಗಳು ರೈತರ ಭಾವನೆಗಳನ್ನು ಅರ್ಥಪೂರ್ಣವಾಗಿ ಸೆರೆಹಿಡಿಯುವ ಹಾಡುಗಳಾಗಿವೆ. ನೇಗಿಲಯೋಗಿ, ಕರ್ಮಯೋಗಿ ಸದಾ ಪರೋಪಕಾರಿಯಂತೆ ಕೆಲಸ ಮಾಡುತ್ತಾನಲ್ಲದೆ ತನ್ನ ಜೊತೆ ಕೆಲಸ ಮಾಡುವ ಎತ್ತುಗಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಾನೆ.

ಉತ್ತುವಾಗ, ಬಿತ್ತುವಾಗ ಹಂತಿ ಕಟ್ಟುವಾಗ ಅವನ ಜೊತೆ ನಿಂತು ಕೆಲಸ ಮಾಡುವ ಎತ್ತುಗಳು ಬರೀ ಎತ್ತುಗಳಾಗಿರದೆ ಆತನ ಜೀವನಾಡಿಗಳಾಗಿವೆ. ಉದಾಹರಣೆ–

ಸತ್ತರು ದುಡದಲ್ಲೊ ಇದ್ದರು ದುಡದಲ್ಲೊ
ಡೋರರ ಡೋನಿಯ್ಯಾಗ ನೆನಿದೆಲ್ಲೆ! ಬಸವಣ್ಣ
ನೇಗಿಲ ಮಿಣಿಯಾಗಿ ನಡೆದೆಲ್ಲೊ ॥

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಎಂದು ತನ್ನ ಸಂಗಾತಿ ಮೂಲಕ ಪ್ರಾಣಿ ಎತ್ತುಗಳನ್ನು ಬಸವಣ್ಣನೆಂದು, ದೇವರೆಂದು ಭಾವನಾತ್ಮಕವಾಗಿ ವ್ಯವಹರಿಸುವ ರೈತರು ಎತ್ತುಗಳಿಂದ ಸರ್ವಕಾಲಕ್ಕೂ ಉಪಯೋಗವಿದೆ ಎಂಬುದನ್ನು ಇಂಥ ಹಾಡುಗಳಿಂದ ವ್ಯಕ್ತಪಡಿಸಿದ್ದಾರೆ. ಹಳ್ಳಿಯ ರೈತರಿಗೆ ಹಂತಿ ಕಟ್ಟುವ, ರಾಶಿ ಮಾಡುವ ಸಂದರ್ಭಗಳೇ ಆಗಿವೆ. ಉದಾಹರಣೆ–

ಹಂತಿಯ ಬಸವಣ್ಣ ಹಂತೇಕ ಇರಬೇಕ
ಸಂತೋಷ ಇರಬೇಕು ಮನದಾಗ ಒಕ್ಕಲಿಗ
ಸಂತೋಷಿ ಹಂತ್ಯ ಹೊಡಿಬೇಕ[೧೪]

ಹಂತಿ ಹೊಡೆಯುವ ಮೊದಲ ರೈತರು ಶಿವಶಿವ ಎಂದು ಶಿವಧ್ಯಾನ ಮಾಡುತ್ತ ಮತ್ತು ಹಣೆಯಲ್ಲಿ ವಿಭೂತಿಯನ್ನಿಟ್ಟು ಶಿವನನ್ನು ನೆನೆಯುತ್ತಾರೆ. ಉದಾಹರಣೆ–

ಶಿವಶಿವ ಅನಬೇಕು, ಶಿವಧ್ಯಾನ ಮಾಡಬೇಕು
ಶಿವದಾರ ನನ್ನ ಕೊರಳಾಗ । ಇದ್ದರೆ
ಇಬತ್ತಿನಾಮ ಹಣಿಮ್ಯಾಗೊ ॥

(ದಾವನಸಾಬ ಆತ್ತಾರ, ಆಬಲಕಟ್ಟಿ)

ಬಾಳೀಯ ಕಾರ್ಯಂಗ ಬಾಗ್ಯವೊ ನಿನಕೋಡು, ಬಂಗಾರ ದಿಣೆಯ ಬಸವಣ್ಣ ಇಂತಹ ಉಪಮೇಯಗಳು ರೈತನಿಗೆ ಎತ್ತುಗಳು ಸತ್ತರೂ ಅವುಗಳ ಚರ್ಮದಿಂದಾಗುವ ಉಪಯೋಗದ ಬಗ್ಗೆ ಆತನಿಗೆ ಗೌರವವಿದೆ. ಉದಾಹರಣೆ–

ಸತ್ತ್ಯುಳ್ಳ ಬಸವಗ ಸತ್ತವೆನ್ನಲಿ ಬ್ಯಾಡ
ಸತ್ತಿಲ್ಲ ಮಾದಿಗನ ಮನಿಯಾಗ/ನಂಬಸವ
ಜತ್ತಿಗಿ ಮಿಣಿಯಾಗಿ ಬಂದಾನ ॥[೧೫]

ಹಂತಿ ಪದಗಳ ಸ್ವರೂಪವನ್ನು ಕುರಿತು ಆಲೋಚಿಸುವುದು ತುಂಬ ಅವಶ್ಯಕವಾಗಿದೆ. ಎಂ.ಎಂ. ಕಲಬುರ್ಗಿಯವರು ಜನಪದ ಪದ್ಯ ಸಾಹಿತ್ಯವನ್ನು 'ಗಂಡಸರ ಹಾಡು, ಹೆಂಗಸರ ಹಾಡು ಮತ್ತು ಮಕ್ಕಳ ಹಾಡುಗಳೆಂದು ವಿಭಾಗಿಸಿದ್ದಾರೆ. ಸ್ತ್ರೀ, ಪುರುಷರ ಹಾಡು ಹಾಡುವಿಕೆಯ ಉದ್ದೇಶದ ಹಿನ್ನೆಲೆಯಲ್ಲಿ ಉಪ ಜೀವನದ ಹಾಡು, ಉತ್ಸವದ ಹಾಡು ಮತ್ತು ಉತ್ಸಾಹದ ಹಾಡುಗಳೆಂದು ವಿಭಾಗಿಸಿದ್ದಾರೆ. ಹಂತಿ ಹಾಡುಗಳನ್ನು ಗಂಡಸರ ಉತ್ಸಾಹದ ಹಾಡುಗಳಲ್ಲಿ ಸೇರಿಸಿರುವುದು ಸೂಕ್ತವಾಗಿದೆ. ಉತ್ಸಾಹಭರಿತವಾದ ಈ ಹಾಡುಗಳಲ್ಲಿ ಸಾಹಿತ್ಯ, ಸಂಪತ್ತು ಭರಿತ

ಹಂತಿ ಪದಗಳನ್ನು ಕೇವಲ ಹಂತಿ ಕಟ್ಟಿದಾಗ ಮಾತ್ರ ಹಾಡುವುದಿಲ್ಲ. ಸುಗ್ಗಿಯ ಸಮಯದ ಪ್ರಮುಖ ಕ್ರಿಯೆಗಳಾದ ಬೆಳೆ ಕೊಯ್ಯುವುದು, ಗೂಡು ಕಟ್ಟುವುದು, ಕಣ ಮಾಡುವುದು, ತೆನೆ ಮುರಿಯುವುದು, ಹಂತಿ ಕಟ್ಟಿದ ನಂತರ ರಾಶಿ ತೂರುವುದು ಈ ಎಲ್ಲ ಸಾಂಸ್ಕೃತಿಕ ಸಂದರ್ಭ ಗಳಲ್ಲಿಯೂ ಹಂತಿ ಪದಗಳನ್ನು ಹಾಡುವರು. ಹಂತಿ ಹೊಡೆಯುವಾಗ ಮೊದಲು ಸಕಲ ಕಾರ್ಯಗಳನ್ನು ನಿರ್ವಿಘ್ನವಾಗಿ ನಡೆಸಿ ಕೊಡುವಂತೆ ಗಣಪತಿಯನ್ನು ಪ್ರಾರ್ಥಿಸುತ್ತಾರೆ. ಹಂತಿ ಪ್ರಾರಂಭವಾಗುವುದೇ ಗಣಪತಿ ಸ್ತುತಿಯಿಂದ. ಉದಾಹರಣೆ–

> ಹಾಡಿಗೆ ಮೊದಲ ಯಾರನ್ನ ನೆನಿಯಲೊ
> ಮಾಡದಾಗಿರುವ ಗರುಡನ್ನ । ಗಣಪತಿರಾಯ
> ಹಾಡಿಗೆ ಮೊದಲ ನೆನಿದೇನೊ ॥

(ಎಸ್.ಎಸ್. ಅಂಗಡಿ, ಜನಪದ ಸಾಹಿತ್ಯ ಭಾಷೆ, ೨೦೦೮:೨೨೬)

ನಂತರ ಆಯಾ ಊರಿನ ಗ್ರಾಮದೇವತೆಗಳನ್ನು, ಪ್ರಕೃತಿ ಶಕ್ತಿಗಳನ್ನು ಭೂತಾಯಿಯನ್ನು, ಅನುಭಾವಿ ಗಳನ್ನು, ಸಾಧು ಸತ್ಪುರುಷರನ್ನು ಸ್ಮರಿಸಿ ತಮ್ಮ ರಾಶಿಗೆ ಹುಲಿಸು ಕೊಡಬೇಕೆಂದು ಪ್ರಾರ್ಥಿಸುತ್ತಾರೆ. ತಮ್ಮ ವೃತ್ತಿಗೆ ನೆರವಾದ ಕೃಷಿ ಉಪಕರಣಗಳಾದ ಕೂರಿಗೆ, ಕುಂಟೆ, ಬಂಡಿ ಮೊದಲಾದವುಗಳ ಮೇಲೆ ಹಾಗೂ ಅವುಗಳನ್ನು ಸಿದ್ಧಪಡಿಸಿದ ಆಯಗಾರರ ಮೇಲೆ ಪದಕಟ್ಟಿ ಹಾಡುತ್ತಾರೆ. ಹಂತಿ ಪದಗಳನ್ನು ಹಾಡುವಾಗ 'ಹುಲ್ಲುಲಿಗೋ', 'ಹೋಲಿಗ್ಯ', ಹೋಲ್ ಹೋಲಿಗ್ಯೆ ಹರಗೋಲಿಗೋ', ಹುಲುಸಿಗೋ 'ಓಲಿಗ್ಯೋ', 'ಹುಲಿಗ್ಯೋ', ಹೂಲಿ ಹೂಲಿ, ಹಲಂಡಹಲ್ಲೊ ಹುಲ್ ಹುಲಿಗ್ಲೇ ಮುಂತಾದ ವೈವಿಧ್ಯಮಯವಾದ ಪದ ಪ್ರಯೋಗಗಳು ಸಿಗುತ್ತವೆ. ಈ ಘೋಷಣೆಯ ವಿವಿಧ ರೂಪಗಳು ವೈವಿಧ್ಯಮಯವಾದ ಪ್ರಯೋಗಗಳು ಸಿಗುತ್ತವೆ. ಈ ಘೋಷಣೆಯ ವಿವಿಧ ರೂಪಗಳು ಫಲೋತ್ಪತ್ತಿ ಹೆಚ್ಚಳದ ಮಂತ್ರಶಬ್ದಗಳೂ, ಶುಭ ಸೂಚಕಗಳೂ ಆಗಿವೆ. ಈ ಘೋಷಣೆ ಕಣಕ್ಕೆ ಮಾತ್ರ ಸೀಮಿತವಾಗಿಲ್ಲ ಎಂಬುದನ್ನು ನಾವು ಗಮನಿಸಬೇಕು. ಧವಸ–ಧಾನ್ಯಗಳನ್ನು ಅಳೆಯುವಾಗಲೂ, ಬೆಳೆಗಳಿಗೆ 'ಚೆರಗ' ಚೆಲ್ಲುವಾಗಲೂ ಬಳಕೆಯಾಗುತ್ತವೆ. 'ಹುಲಿಗ' ಫಲೋತ್ಪತ್ತಿ ಸಮೃದ್ಧಿಸೂಚಕ ಪದವಾಗಿರಬಹುದು. 'ಹುಲಿಗ' ಎಂದರೆ ಸಸ್ಯದೇವತೆ(God of fertility) ಎಂಬುದನ್ನು ಗಮನಿಸಬೇಕು. ಬೆಳಗು ಮುಂಜಾನೆ ಹೊತ್ತಿಗೆ ಹಂತಿ ಮುಗಿಯುತ್ತದೆ. ಎತ್ತಿನ ಸೆಗಣಿಯಿಂದ 'ಬೂದನ' ಪೂಜೆ ನೆರವೇರುತ್ತದೆ. ಕಂಕಿ ಸುಟ್ಟು ಅದರ ಬೂದಿಯಿಂದ 'ಕರಿಬಂಟ'ನ್ನು ಮಾಡಿ ರಾಶಿಯ ಕಾವಲಿಗೆ ಇರಿಸುತ್ತಾರೆ.

ಹಂತಿ ಮುಖ್ಯವಾಗಿ ಒಂದು ಕೃಷಿ ಕೆಲಸದ ಪ್ರಕ್ರಿಯೆ. ಈ ಕೆಲಸದ ಪ್ರಕ್ರಿಯೆಯನ್ನು ಹಂತಿ ಪದಗಳು ದಾಖಲಿಸಿವೆ. ಹಂತಿ ಕ್ರಿಯೆಯಲ್ಲಿ ಒಂದು ದೈವೀ ಭಾವನೆಯ ಸಾಂಪ್ರದಾಯಿಕ ಆಚರಣೆಯ ಎಳೆ ಕಾಣಿಸಿಕೊಳ್ಳುತ್ತದೆ. ಈ ಎರಡು ಸಂಗತಿಗಳು(ಕ್ರಿಯೆ ಮತ್ತು ಸಂಪ್ರದಾಯ) ನಿರಂತರವಾಗಿ ಹಂತಿ ಪದಗಳಲ್ಲಿ ದಾಖಲಾಗಿರುವುದನ್ನು ನಾವು ಕಾಣುತ್ತೇವೆ. ಹಂತಿಯ ಕ್ರಿಯೆಗಳಲ್ಲಿ ಒಕ್ಕಲಿಗರು ಕೆಲವು ನಿಯಮಗಳನ್ನು ಪಾಲಿಸುತ್ತಾರೆ. ಶುಭ ಸಮಯ ನೋಡುವುದು, ಹರಕೆ ಹೊರುವುದು ಇತ್ಯಾದಿ. ಇವೆಲ್ಲವುಗಳನ್ನು ಗಮನಿಸಿದಾಗ ದಂಡೆಯವರು ಹೇಳಿರುವಂತೆ 'ಹಂತಿ ಕೇವಲ ಸುಗ್ಗಿಯಾಗಿ ಮಾತ್ರ ಅಲ್ಲ ಅದೊಂದು ಸಾಂಪ್ರದಾಯಿಕ ದೈವೀ ಭಾವನೆಯನ್ನು ಹೊತ್ತ

ಪ್ರಕ್ರಿಯೆ ಎಂಬಂತೆ ತೋರುತ್ತದೆ. ಹಂತಿ ಒಂದು ಕೆಲಸವೂ ಹೌದು ಸಾಂಪ್ರದಾಯಿಕ ಸಂದರ್ಭವೂ ಹೌದು. ಹಂತಿಯು ಕ್ರಿಯೆ ಮತ್ತು ಸಂಪ್ರದಾಯ ಎರಡೂ ಆಗಿದೆ.[೧೬]

ಹಂತಿ ಪದಗಳಲ್ಲಿರುವ ಸಾಹಿತ್ಯ ಸಂಪತ್ತು ವೈವಿಧ್ಯಪೂರ್ಣವಾಗಿದೆ. ಅವುಗಳ ನಿರೂಪಣೆಯ ವಿಧಾನ ಧೋರಣೆ, ಕಾವ್ಯಶೈಲಿ, ಭಾಷೆ ಮತ್ತು ಛಂದಸ್ಸು, ವರ್ಣನೆ ಇವೆಲ್ಲವೂ ಮೇಲ್ಮಟ್ಟದವು. ತನ್ನ ಪ್ರಾಣಕ್ಕಿಂತಲೂ ಹೆಚ್ಚೆಂದು ಪ್ರೀತಿಸುವ ಎತ್ತುಗಳ ಸಿಂಗಾರವೇ ತನ್ನ ಪರಮಾನಂದವೆಂದು ರೈತ ಭಾವಿಸಿರುತ್ತಾನೆ. ಅವುಗಳನ್ನು ಕುರಿತು ಎಷ್ಟು ವರ್ಣಿಸಿದರೂ ಆತನಿಗೆ ತೃಪ್ತಿಯಿಲ್ಲ. ಉದಾಹರಣೆ–

ಬೆಳನ್ನ ಬಿಳಿಯೆತ್ತು ಬೆಳ್ಳಿಯ ಬಾರಕೋಲ
ಬಂಗಾರದ ಶೆಡ್ಡಿ ಬಲಗೈಗೆ । ಹಿಡಕೊಂಡು
ಹೊನ್ನ ಬಿತ್ತಾನೊ ಹೊಳಿಸಾಲೊ ॥[೧೭]

ಈ ಹಿನ್ನೆಲೆಯ ಹಂತಿ ಹಾಡುಗಳನ್ನು ರೈತರು ಹಾಡುತ್ತಾರೆ. ಇವರು ವೃತ್ತಿನಿರತ ಗಾಯಕರಲ್ಲ. ಸುಗ್ಗಿಯ ಸಂದರ್ಭದಲ್ಲಿ ಕಣದಲ್ಲಿ ಹಂತಿ ಹೊಡೆಯುವಾಗ ಮಾತ್ರ ಹಾಡಬಲ್ಲವರು. ಆದ್ದರಿಂದ ಇವರು ಈ ಸಂದರ್ಭದಲ್ಲಿ ಹಾಡುವ ಹಾಡುಗಳನ್ನು ಮಾತ್ರ ಹಂತಿ ಹಾಡುಗಳು ಎಂದು ಕರೆಯಲಾಗುತ್ತದೆ.

ಹಂತಿ ಎಂದರೆ ಸಾಲು, ಪಂಕ್ತಿ, ಸರತಿ ಎಂದು ಸೋದರ ಅರ್ಥಗಳಿವೆ. ಒಟ್ಟಾರೆ, ಪೈರು, ಕಾಳುಭರಿತ ಕಡ್ಡಿಗಳನ್ನು ಕಣಕ್ಕೆ ಚೆಲ್ಲಿ ಅವುಗಳ ಮೇಲೆ ಆಕಳು ಮತ್ತು ಎತ್ತುಗಳು ಸಾಲನ್ನು ಹೂಡುತ್ತವೆ. ಇಂತಹ ಆಕಳು, ಎತ್ತುಗಳ ಸಂಖ್ಯೆಯು ಫಸಲಿನ ಬೃಹತ್ತನ್ನು ಅವಲಂಬಿಸಿರುತ್ತದೆ. ಈ ಫಸಲಿನ ಬೃಹತ್ ಸಹ ದೊಡ್ಡ ರೈತ ಮತ್ತು ಚಿಕ್ಕ ರೈತ ಎಂಬ ವರ್ಗೀಕರಣವನ್ನು ಆಧರಿಸಿರುತ್ತದೆ. ಒಟ್ಟಾರೆ ಆಕಳು ಅಥವಾ ಎತ್ತುಗಳ ಸಾಲನ್ನು ನೊಗಕ್ಕೆ ಕಟ್ಟಿ, ಅವುಗಳಿಂದ ಪೈರು ಕಡ್ಡಿಗಳಿಂದ ಧಾನ್ಯವನ್ನು ಹಸನು ಮಾಡುವ ಕ್ರಿಯೆಯನ್ನು ಹಂತಿ ಕಾರ್ಯವು ಸೂಚಿಸುತ್ತದೆ. ಈ ಕ್ರಿಯೆಯಲ್ಲಿ ಪುರುಷ ರೈತನೇ ಪ್ರಧಾನ ಎಂಬುದು ಮುಖ್ಯ ಸಂಗತಿ. ಅಂತೆಯೇ ಕಾಲಗಳಲ್ಲಿ ಸುಗ್ಗಿಯ ಕಾಲ, ಪ್ರಾಣಿಗಳಲ್ಲಿ ಆಕಳು ಮತ್ತು ಎತ್ತುಗಳು ಮಾತ್ರ ಇಲ್ಲಿ ಪ್ರಸ್ತುತ. ಈ ಕಾರ್ಯದಲ್ಲಿ ಹೋರಿ ಮತ್ತು ಕೋಣಗಳನ್ನು ಕೆಲವೊಮ್ಮೆ ಬಳಸಿದರೂ ಅವುಗಳನ್ನು ಯಾವುದೇ ಹಾಡಿನಲ್ಲಿ ನೆನೆಯಲಾಗುವುದಿಲ್ಲ. ಬಹುಶಃ ಇವುಗಳ ಅಪವಿತ್ರ ಎಂಬ ಜನಪದರ ನಂಬಿಕೆ ಹಾಡುಗಳಲ್ಲಿಯ ಇವುಗಳು ಗೈರುಹಾಜರಿಗೆ ಕಾರಣವಿರಬಹುದು. ಅಪವಾದವೆಂಬಂತೆ -

ಮೂಡಲಹೋರಿಗೆ ಮುರಗೀಯ ಕೋಡಣಸು
ಸಣ್ಣ ಗೆಜ್ಜೆ ಕೊರಳ ಸರವಣಿಯ । ಹಿಡಕೊಂಡು
ಸವನಾಗಿ ಹಂತಿ ತುಳಿದಾನೊ ॥

(ಸಿದ್ದಪ್ಪ, ಜಂಗಮರಕಲ್ಗುಡಿ, ಗಂಗಾವತಿ)

ಎಂಬ ಹೋರಿಯ ಪ್ರಸ್ತಾಪವಿರುವ ಕ್ವಚಿತ್ ಪದ್ಯಗಳನ್ನು ನೋಡಬಹುದು. ಹಂತಿಯ ಹಾಡುಗಳನ್ನು ಸಾಮಾನ್ಯವಾಗಿ ಪುರುಷರು ಮಾತ್ರ ಹಾಡುವುದರಿಂದ ಇವುಗಳನ್ನು ಗಂಡಸರ ಹಾಡಿನ ಸಂಪ್ರದಾಯಗಳಲ್ಲಿ ಒಂದೆಂದು ಗುರುತಿಸಲಾಗುತ್ತದೆ". ಅದರಲ್ಲೂ ರೈತನ ಹಾಡಿನ ಸಂಪ್ರದಾಯವಿದು.

ಇದರಲ್ಲಿ ರೈತ ತನ್ನ ಸಮುದಾಯದ ಸಮಸ್ತ ಬದುಕು ಮತ್ತು ಸಂವೇದನೆಗಳನ್ನು ಕಲಾತ್ಮಕವಾಗಿ ಹೊಮ್ಮಿಸುತ್ತಾನೆ. ಇದರ ಮೂಲಕ ಹಂತಿ ಹೊಡೆಯುವ ಶ್ರಮವನ್ನು ಆಪ್ಯಾಯಮಾನಗೊಳಿ ಕೊಳ್ಳುತ್ತಾನಲ್ಲದೇ ತನ್ನ ಬದುಕಿನ ದರ್ಶನವನ್ನು ಸಹ ಅಲ್ಲಿ ಪ್ರಕಟಿಸುತ್ತಾನೆ. ಇದರಲ್ಲಿ ಅವನ ಲೋಕದೃಷ್ಟಿಯ ಬಾಹುಳ್ಯವು ಕಾಣಿಸಿಕೊಂಡು ಸಮುದ್ರ ದೋಪಾದಿಯಾದ ವಸ್ತು ಪ್ರಪಂಚವು ಸುರುಳಿಯೋಪಾದಿಯಲ್ಲಿ ಬಿಚ್ಚಿಕೊಳ್ಳುತ್ತದೆ. ಇದನ್ನು ಅಧ್ಯಯನದ ಅನುಕೂಲಕ್ಕಾಗಿ ವಿಂಗಡಿಸಿಕೊಳ್ಳುವುದೇ ಮೊದಲಿನ ಸವಾಲಾಗುತ್ತದೆ. ಆದರೂ ಪ್ರಯತ್ನಿಸುವುದಾದರೆ ಧಾರ್ಮಿಕ, ಪೌರಾಣಿಕ, ಚಾರಿತ್ರಿಕ, ಸಾಮಾಜಿಕ ಎಂದು ಒಂದು ಬಗೆಯಲ್ಲಿ ವಿಂಗಡಿಸಿಕೊಳ್ಳಬಹುದು. ಇದು ವಸ್ತುವಿಗೆ ಸಂಬಂಧಿಸಿದ ಮಾತು. ಇನ್ನೂ ತಂತ್ರ, ಧೋರಣೆ, ಛಂದಸ್ಸು, ಅಲಂಕಾರ ಮುಂತಾದ ವರ್ಗೀಕೃತ ಅಧ್ಯಯನಗಳಿಗೂ ಇಲ್ಲಿ ಪ್ರತ್ಯೇಕವಾದ ಅವಕಾಶಗಳಿವೆ. ಒಟ್ಟಾರೆ ಜನಪ್ರಿಯವಾಗಿರುವ ಈ ಹಂತಿಯ ಕಾವ್ಯ ಸಂಪ್ರದಾಯವು ಆಕರ್ಷಕವೂ ಆಗಿ, ಅಧ್ಯಯನಕ್ಕೆ ತೊಡಗಿದಾಗ ಕಾಮಧೇನುವಾಗಿ, ನಮ್ಮಿಂದಲೂ ಹಂತಿ ಹೊಡೆಸುತ್ತದೆ. ಇಂತಹ ಶ್ರಮದಾಯಕ ಮತ್ತು ಇವುಗಳ ಅಧ್ಯಯನಾಸಕ್ತರಿಗೂ ಸಾಧ್ಯವಾಗುವುದು ಇವುಗಳೊಡನೆಯ ಸಮೀಪ ಸಂಬಂಧಿಗಳಿಗೆ ನಿಜವೆನಿಸಿದೆ.

ಈಗಾಗಲೇ ಪ್ರಾಸಂಗಿಕವಾಗಿ ಹೇಳಿರುವಂತೆ ಹಂತಿ ಸಂಪ್ರದಾಯದ ಹಾಡುಗಳು ವಸ್ತು ಪ್ರಪಂಚವು ರೈತನ ದೃಷ್ಟಿಯಷ್ಟೇ ದೊಡ್ಡದು. ಇಂತಹ ಅಗಾಧ ಪ್ರಪಂಚವನ್ನು ಸ್ಥೂಲ ವರ್ಗೀಕರಣಕ್ಕೊಳ ಪಡಿಸಿಕೊಂಡು ಅರಿಯುವುದು ಹಂತಿ ಹಾಡುಗಳ ಸಂದರ್ಭದಲ್ಲಿ ಕೃತಕವೆನಿಸುತ್ತದೆ. ಹಂತಿ ಕಟ್ಟಿದ ರೈತ ಅದನ್ನು ಬಿಚ್ಚುವವರೆಗಿನ ಅವಧಿಯವರೆಗೂ ಲಹರಿಯಲ್ಲಿ ವಿಭಿನ್ನ ಮಟ್ಟುಗಳಲ್ಲಿ, ವಿಭಿನ್ನ ವಸ್ತುಗಳನ್ನುಳ್ಳ ಹಾಡುಗಳನ್ನು ಹಾಡುತ್ತಿರುತ್ತಾರೆ. ಈ ಲಹರಿಯಲ್ಲಿ ಆರಂಭದ ಮತ್ತು ಅಂತ್ಯದ ಹಾಡುಗಳು ಮಾತ್ರ ಸಾಮಾನ್ಯವಾಗಿ ನಿರ್ದಿಷ್ಟ ಬಗೆಯ ವಸ್ತುವನ್ನು ಕೇಂದ್ರೀಕರಿಸಿರುತ್ತವೆ. ಅವುಗಳಲ್ಲಿ ಆರಂಭದ ಹಾಡುಗಳು ಭೂತಾಯಿ, ಬಸವಣ್ಣ, ಮಳೆ ಮುಂತಾದ ವಸ್ತುಗಳನ್ನು ಕುರಿತಿದ್ದರೆ, ಅಂತ್ಯದ ಹಾಡುಗಳು ಧಾನ್ಯದ ರಾಶಿ ಮೊಣಕಾಲು ಮಟ್ಟವನ್ನು ಮುಟ್ಟಿದ ಹಾಗೂ ದಣಿದ ಎತ್ತುಗಳನ್ನು ಕುರಿತಿರುತ್ತವೆ. ಇವುಗಳ ನಡುವೆ ಬರುವ ಅಸಂಖ್ಯ ಹಾಡುಗಳು ಅತ್ಯಂತ ವ್ಯಾಪಕವಾದ ವಸ್ತುವೈವಿಧ್ಯವನ್ನು ಪಡೆದ ಹಾಡುಗಳಾಗಿರುತ್ತವೆ. ಅವುಗಳಲ್ಲಿಯೂ ವಿವಿಧ ಪ್ರದೇಶಗಳ ಹಿನ್ನೆಲೆಯಲ್ಲಿ ವಸ್ತು ಸ್ಥೂಲವಾಗಿ ವಿಭಿನ್ನವಾಗುತ್ತವೆ.

ಉದಾಹರಣೆಗೆ: ಮುಂಡರಗಿ ತಾಲ್ಲೂಕಿನಲ್ಲಿ ಕಾಣುವ ಹಂತಿ ಪದಗಳಲ್ಲಿ ಗದಗ-ಮುಂಡರಗಿ ತಾಲ್ಲೂಕುಗಳಲ್ಲಿ ಹಬ್ಬಿರುವ ಕಪ್ಪತಗುಡ್ಡ ಎಂಬ ಗುಡ್ಡದ ಸಾಲು ಮತ್ತು ಅಲ್ಲಿ ನೆಲೆಸಿರುವ ಕಪ್ಪತ್ತ ಮಲ್ಲಯ್ಯ ಎಂಬ ಸ್ಥಳೀಯ ದೈವ ಮತ್ತೆ ಮತ್ತೆ ಪ್ರಸ್ತಾಪಗೊಳ್ಳುತ್ತದೆ. ಅಂತೆಯೇ ಕೊಪ್ಪಳ ಸುತ್ತಮುತ್ತಲಿನ ಈ ಪದಗಳಲ್ಲಿ ಹುಲಿಗೆಮ್ಮ ಪುನರಾವರ್ತನೆಗೆ ಒಳಗಾಗುತ್ತಿರುತ್ತಾಳೆ. ಈ ಪ್ರಾದೇಶಿಕ ಸಂಸ್ಕೃತಿಯ ವೈವಿಧ್ಯತೆಯೂ ಸೂಕ್ತವಾಗಿ ಹಂತಿ ಪದಗಳ ವಸ್ತು ವೈವಿಧ್ಯತೆಯನ್ನು ನಿರ್ಧರಿಸುತ್ತದೆ. ಉಳಿದಂತೆ ಇದರ ವಸ್ತು ಈಗಾಗಲೇ ಹೇಳಿರುವಂತೆ ಅರಣ್ಯದೋಪಾದಿಯದ್ದು. ಇದಕ್ಕೆ ನಿರ್ದಿಷ್ಟ ದಾರಿಗಳಿಲ್ಲದಿರುವುದರಿಂದ ಇದನ್ನು ಯಾವ ದಿಕ್ಕಿನಿಂದಲಾದರೂ ಪ್ರವೇಶಿಸಬಹುದು. ಈ ನೆಲೆಯಲ್ಲಿ ದೇವತಾ ಸ್ತುತಿಯೊಂದಿಗೆ ಬಸವಣ್ಣ, ಮಳೆರಾಯ, ಐತಿಹಾಸಿಕ ವ್ಯಕ್ತಿಗಳು, ಜನಪದ ದೈವಗಳು,

ಜೀವನದ ಮೌಲ್ಯಗಳು, ಹಾಸ್ಯ, ಶೃಂಗಾರ ಚಿತ್ರ, ಹೆಣ್ಣು ಗಂಡಿನ ಸ್ವಭಾವ ಮುಂತಾದ ಪರ್ವತಾರಮ್ಯ ಗಳನ್ನು ಅದರೊಳಗೆ ಗುರುತಿಸಬಹುದು.

ಕೃಷಿ ಸಂಸ್ಕೃತಿಯಲ್ಲಿ ವರ್ಷದ ಎಲ್ಲ ಕಾಲಗಳೂ ತಮ್ಮದೇ ಆದ ಮಹತ್ವವನ್ನು ಪಡೆದಿವೆ. ಆ ಹಿನ್ನೆಲೆಯಲ್ಲಿ ವಿಭಿನ್ನ ಸಾಹಿತ್ಯವೂ ವೈವಿಧ್ಯತೆಯ ನೆಲೆಯಲ್ಲಿ ಹುಟ್ಟನ್ನು ಪಡೆದಿದೆ. ಈ ಹಲವು ಕಾಲಗಳಲ್ಲಿ ಸುಗ್ಗಿಯ ಕಾಲವು ಒಂದು. ಮುಂಗಾರು ಮಳೆಯ ಕಾಲದಲ್ಲಿ ರೈತ ಬಿಡುವಿರದೆ ದಣಿಯುವಂತೆ ಸುಗ್ಗಿಯ ಕಾಲದಲ್ಲಿಯೂ ದಣಿಯುತ್ತಾನೆ. ಆದರೆ ಇಲ್ಲಿ ಹರ್ಷವಿರುತ್ತದೆ. ವರ್ಷಪೂರ್ತಿ ದುಡಿದ ಪ್ರತಿಫಲವು ಕಾಳು, ಕಡ್ಡಿಗಳಾಗಿ ಮನೆಯನ್ನು ತುಂಬುವ ಪರ್ವಕಾಲವಿದು. ಆಗಿನ ಕಣದಲ್ಲಿ ಮೇಟಿಗೆ ಹಂತಿ ಕಟ್ಟಿ, ಎತ್ತುಗಳ ಸಾಲನ್ನು ಹಗಲೂ ರಾತ್ರಿ ಹೊಡೆದರೂ ಒಳಗಿನ ಆಯಾಸ ಹೊರಗೆ ಕಾಣುವುದಿಲ್ಲ. ಅದರಲ್ಲೂ ಆಗ ತುಂಬು ಸಂತದಿಂದ ಗರಿಗೆದರಿ ಹೊರಬರುವ ಹಾಡುಗಳು ಜೀವನವನ್ನು ಉಲ್ಲಾಸಗೊಳಿಸುತ್ತವೆ.

ಆ ಹಾಡುಗಳನ್ನು ಕಣದ ಬದಿಯಲ್ಲಿ ಕುಳಿತು ಕೇಳುವ ಸಹೃದಯರಿಗೂ ಕಾವ್ಯದ ರಸಪಾಕ ವಾಗುತ್ತದೆ. ನಿರಂತರವಾದ ಹಲವು ಗಂಟೆಗಳಲ್ಲಿ ಪಾರಂಪರಿಕವಾಗಿ ಉಳಿದು ಬಂದ ಹಾಡುಗಳು ಸಮಯ ಸ್ಫೂರ್ತಿಯಿಂದ ಹೊಸ ಹಾಡುಗಳು ಸಹ ಅದೇ ಮಟ್ಟಿನಲ್ಲಿ ಕುಡಿಯೊಡೆದು ಬಿಡುತ್ತವೆ. ಅಂಥಲ್ಲಿ ಆ ರೈತ ಆಶುಕವಿಯೂ ಆಗಿ ಬಿಡುತ್ತಾನೆ. ಹೀಗೆ ಪಾರಂಪರಿಕ ಮತ್ತು ಸ್ವರಚಿತ ಪದಗಳಿಂದ ಹಂತಿಯ ಹಾಡುಗಳು ಹರಿಯುವ ನದಿಯಾಗಿ ವಿಸ್ತಾರವಾಗುತ್ತಾ ಹೋಗುತ್ತದೆ.

ಏಳುತಲೆ ಎದ್ದು ಯಾರ್‍ಯಾರ ನೆನೆಯಾಲಿ
ಎಳ್ಳು ಜೀರಿಗೆ ಬೆಳೆಯೋಳ । ಭೂ ತಾಯ
ಎದ್ದೊಂದು ಗಳಿಗೆ ನೆನೆದೇನ ॥೧೮

ಇದು ಎಲ್ಲ ಗರತಿಯರೂ ಬೆಳಗಾನೆ ಎದ್ದು ಅಂಗಳಕ್ಕೆ ರಂಗೋಲಿ ಹಾಡುವ ಪೂರ್ವದಲ್ಲಿ ಹಾಡುವ ಅಥವಾ ಗುನುಗುವ ಹಾಡು. ಇದೇ ಹಾಡನ್ನು ರೈತ ಸಹ ಹಂತಿ ಕಟ್ಟಿದ ಆರಂಭದಲ್ಲಿಯೇ ಸಾಮಾನ್ಯವಾಗಿ ಹಾಡುತ್ತಾನೆ.

ಹಂತಿ ಕಟ್ಟಿದ ಅನಂತರದಲ್ಲಿ ಹಂತಿ ಮತ್ತು ಅದರಲ್ಲಿಯೂ ವಿಶೇಷವಾಗಿ ಬಸವನನ್ನು ನೆನೆಯುತ್ತಾನೆ.

ಮೊದಲು ಹಂತಿಗೆ ಶರಣು ಶಂಕರ ಗಂಡಗೆ ಶರಣು
ಭೂಮಿ ತಾಯಿಗೆ ನಮ ಶರಣು । ನಮ ಬಸವನ
ನಾಕು ಪದಕ್ಕೆ ಶಿವಶರಣು ॥

(ದಾವನಸಾಬ ಅತ್ತಾರ್, ಆಬಲಕಟ್ಟಿ)

ಕೊಪ್ಪಳ ಜಿಲ್ಲೆಯ ಯಾವುದೇ ಭಾಗದ ಹಂತಿ ಹಾಡುಗಳಲ್ಲಿ ಬಸವನನ್ನು ಕುರಿತ ವಸ್ತುವಿಗೆ ಮಹತ್ವದ ಸ್ಥಾನವಿದೆ. ಇದಕ್ಕೆ ಕಾರಣ, ರೈತನ ಹೆಚ್ಚು ಕಾಲದ ಸಂಗಾತಿ ಬಸವನೇ ಆಗಿರುವುದು.

ಹೊಲವನ್ನು ಉಳುಮೆ ಮಾಡುವುದರಿಂದ ಕಣ ಮಾಡುವವರೆಗೂ ಹೀಗೆ ಕೃಷಿಯ ವೈವಿಧ್ಯಮಯವಾದ ಎಲ್ಲ ಕೆಲಸಗಳಲ್ಲಿಯೂ ಅದೇ ತನ್ನ ಜೀವ ಸಂಗಾತಿ. ಆದ್ದರಿಂದ ಅದರ ಬಗೆಗೆ ಎಲ್ಲಿಲ್ಲದ ಮಮಕಾರ ಮತ್ತು ಪವಿತ್ರ ಭಾವ.

ಹಾಡಿಗೆ ಮೊದಲು ಯಾರನ್ನ ನೆನೆಯಲೊ
ಬಾಯಿಲ್ಲದವನ ಬಸವಣ್ಣೊ । ನೆನೆದರ
ಬಾರದ ಪದವು ಬಂದಾವೋ ॥
ಎತ್ತು ಎಂದೆನಬೇಡ ಎಡ ಜೋರಿ ಬಸವಾನ
ಹತ್ತು ದಿಕ್ಕೀಗೆ ಸಲವೋನ । ನಮ್ಮ ಬಸವ
ಹೆಜ್ಜೆಗೆ ಹುರಿಗೆಜ್ಜಿ ಬಿಗಿಸೆನೊ ॥

(ದಾವನಸಾಬ ಅತ್ತಾರ್, ಆಬಲಕಟ್ಟಿ)

ನುರಿತ ರೈತ ಉಳುಮೆಯ ಸಾಲು ವಕ್ರವಾಗದಂತೆ ನೋಡಿಕೊಳ್ಳುತ್ತಾನೆ. ಅಂತಹ ಆದರ್ಶವನ್ನು ಕಾಪಾಡಿಕೊಳ್ಳುವುದು ಬಸವ ಮತ್ತು ರೈತನ ಸವಾಲು ಹೌದು. ಇಲ್ಲವಾದಲ್ಲಿ ದಾರಿಹೋಕರ ಅಥವಾ ವಾರಿಗೆಯವರ ಅಣುಕುನೋಟಕ್ಕೆ ತುತ್ತಾಗುವುದು ಖಂಡಿತ. ಇಂತಹ ಕ್ರಮವರಿತ ಬಸವ ಮತ್ತು ರೈತನ ಸಂಬಂಧವು ಆತ್ಮೀಯವಾದುದು ಹೌದು. ಅದು ತಂದೆ ಮಗನನ್ನು ಕಾಣುವ ಬಗೆಯದ್ದೂ ಹೌದು.

ಎಂಟೆತ್ತು ಕಟಿಗೊಂಡು ಕೆಂಟ್ಯಾಗ ಬರುವಾಗ
ಗಂಟಬಿದ್ದಾನೆ ಇದಿಮಾಯೇ । ಹೊಟ್ಟೇಲೆ
ಬಂಟ ಹುಟ್ಯಾನೊ ಬಸವಣ್ಣ ॥



(ದಾವನಸಾಬ ಅತ್ತಾರ್, ಆಬಲಕಟ್ಟಿ)

ಆದ್ದರಿಂದಲೇ ಪುತ್ರ ಸಮಾನವಾದ ಬಸವನನ್ನು ಕುರಿತು ಯಾರಾದರೂ ಕುಂಟೆತ್ತು ಎಂದು ಸಂಬೋಧಿಸಿದರೆ ರೈತನಿಗೆ ಎಲ್ಲಿಲ್ಲದ ಕೋಪ. ಅದು ಅವನಿಗೆ ಕುಂಟೆತ್ತು ಅಲ್ಲ ಕುಂಟೋಜಿರಾವ್.

ಕುಂಟೋಜಿ ಬಸವಗೆ ಕುಂಟನೆನಲಿಬ್ಯಾಡ
ಕಾದಾಡಿ ಕಾಲ ಮುರಕೊಂಡ । ನಮ್ಮ ಬಸವ
ಮಂಟಪದಾಗ ಮಲಿಗ್ಯಾನ ॥

(ದಾವನಸಾಬ ಅತ್ತಾರ್, ಆಬಲಕಟ್ಟಿ)

ಇಂತಹ ಬಸವನ ಮಹತ್ವ ಎಷ್ಟೆಂದರೆ ಆನೆಯ ಸಾಲು ತಿಂಗಳುಗಟ್ಟಲೆ ತುಳಿದರೂ ನುರಿಯದ ಕಾಳುಕಡ್ಡಿ ಬಸವ ತುಳಿದರೆ ಅಲ್ಪಕಾಲದಲ್ಲಿಯೇ ನುರಿಯುತ್ತದೆ ಎಂಬ ಉಪಮೆ ತುಂಬ ಸೊಗಸಾಗಿದೆ.

ಜೋಳದಣತಿ ಕಟ್ಟಿ ನಾಳಿಗೆ ತಿಂಗಳಾತು
ಆನಿ ತುಳಿದರ ಸವದಿಲ್ಲ । ಬಸವಣ್ಣ
ಪಾದ ಇಟ್ಟಲ್ಲಿ ನುಗ್ಗೆದ್ದೊ ॥೧೯

ಹೀಗೆ ಹಂತಿ ಹೊಡೆಯುವ ರೈತ ತನ್ನ ಕಾಯಕ ಸಂಗಾತಿಯಾದ ಬಸವನನ್ನು ಕುರಿತು ಎಷ್ಟು ಹಾಡಿದರೂ ದಣಿಯುವುದಿಲ್ಲ.

ಕೃಷಿನಿರತ ರೈತ ಮಳೆಯನ್ನು ಕಾಣದೇ ಹೋದರೆ ನಿಂತ ನೆಲವೇ ಕುಸಿದಂತಾಗುತ್ತದೆ. ಆದ್ದರಿಂದಲೇ ಮಳೆರಾಯನನ್ನು ಕುರಿತ ಧಾನ್ಯ ಮತ್ತು ನೋಟ ಯಾವಾಗಲೂ ಒಂದೇ ಆಗಿರುತ್ತವೆ.

ಗುಡುಗುಡೂ ಮಲ್ಲಯ್ಯ ತಡಯಾಕ ಮಾಡೀದಿ
ಅಡಬಡಿಸಿ ಹುಗ್ಗೀ ಮಾಡೇನಿ ಮಳಿರಾಜ
ಎತ್ತಿ ಹಿಡಿದ ನಿಮಗೆ ಬೇಡೇನಿ
ಮಳಿಯಣ್ಣ ಮಳಿರಾಜ ಗಿಡ ಬಳ್ಳಿ ಕೂಗ್ಯಾವೊ
ಗಿಳಿಬಾಯಿ ಬಿಟ್ಟಾವು ಬೀಸ್ಯಾವೊ ಉರಿಗಾಳಿ
ಗುಡಗುಡಿಸೊ ನಮ್ಮ ಸೀಮಿಗಿ

(ಶರಣಪ್ಪ ಚಳಮರದ, ಕುಕನೂರು)

ಹಾಗೊಮ್ಮೆ ಮಳೆ ಕೈಕೊಟ್ಟರೆ ಕ್ಷಾಮ ಸನ್ನಿಹಿತ. ಆಗ ಹುಟ್ಟುವ ಹಾಡುಗಳು ಕರುಣಾಕ್ರಂದನ ಮತ್ತು ರೋದನಮಯ. ಅಂತಹದ್ದು ಮರಳಿ ಬಾರದಿರಲೆಂಬ ಧ್ವನಿಯೂ ಅನೇಕ ಹಾಡುಗಳಲ್ಲಿದೆ.

ಬಣ್ಣದ ಗುಬ್ಯಾರು ಮಳಿರಾಜಾ ಅವರು
ಮಣ್ಣಾಗಿ ಹೋದರು ಮಳಿರಾಜ
ಒಕ್ಕಲಗೇರ್ಯಾಗ ಮಳಿರಾಜಾ ಅವರು
ಮಕ್ಕಳ ಮಾರ್‍ಯಾರ ಮಳಿರಾಜಾ
ಮಕ್ಕಳ ಮಾರಿರೊಕ್ಕ ತಕ್ಕೊಂಡು
ಭತ್ತಂತ ತಿರುಗ್ಯಾರ ಮಳಿರಾಜ
ಗಂಡುಳ್ಳ ಬಾಲ್ಯಾರು ಮಳಿರಾಜಾ ಅವರು
ಬಿಕ್ಷುಕ ಹೊರಟಾರ ಮಳಿರಾಜಾ
ಗಂಡುಳ್ಳ ಬಾಲ್ಯಾರು ಬಿಕ್ಷುಕಹೋದರು
ಅನ್ನದ ದಿನ ಬಂದು ಮಳಿರಾಜಾ

(ದಾವನಸಾಬ ಅತ್ತಾರ್, ಆಬಲಕಟ್ಟಿ)

ಹೀಗೆ ಮಳೆಯು ರೈತನ ಜೀವನಾಡಿಯಾಗಿ ಅವನಿಂದ ಅನೇಕ ಹಾಡುಗಳನ್ನು ಹಂತಿ ಹೊಡೆಯುವ ಸಮಯದಲ್ಲಿ ಹೊರಡಿಸುತ್ತದೆ. ಜೋಳ, ನವಣೆ, ಭತ್ತ ಇವೇ ಮುಖ್ಯವಾದ ದವಸವನ್ನು ಪಡೆಯುವ ಕಣದಲ್ಲಿ ಕಾರ್ಯನಿರತವಾದ ರೈತ ತನ್ನ ಪ್ರಾದೇಶಿಕ ಸಂದರ್ಭದ ಸ್ಥಳೀಯ ದೈವಗಳನ್ನು ಬಿಡದೆ ನೆನೆಯುತ್ತಾನೆ. ಎಲ್ಲಮ್ಮ, ಹುಲಿಗೆಮ್ಮ, ಈರಣ್ಣ, ಮೈಲಾರಲಿಂಗ, ದ್ಯಾವಮ್ಮ, ಹಂಪಿ ವಿರೂಪಾಕ್ಷ, ದುರುಗಮ್ಮ ಮುಂತಾದ ಅನೇಕ ದೈವಗಳ ಜೊತೆಗೆ ಬಹುತೇಕ, ಎಲ್ಲ ಹಳ್ಳಿಗಳಲ್ಲಿಯೂ ನಮ್ಮ ಪೂರ್ವಿಕ ಹನುಮಂತನ ಗುಣಗಾನ ಎಲ್ಲ ಪ್ರದೇಶದ ಹಾಡುಗಳಲ್ಲಿಯೂ

ಕಂಡುಬರುತ್ತದೆ. ಅಷ್ಟೇ ಅಲ್ಲದೇ, ಈ ಒಂದೊಂದು ದೇವತೆಯ ಬಗೆಗಿನ ಪುರಾಣಗಳ ತುಣುಕುಗಳನ್ನು ಸಹ ಇಲ್ಲಿ ಹಾಡಲಾಗುತ್ತದೆ. ಈ ಮೂಲಕ ಸ್ಥಳ ಪುರಾಣ ಮತ್ತು ಐತಿಹ್ಯಗಳು ಜನಪ್ರಚಾರಗೊಳ್ಳುತ್ತವೆ.

ಏಳೇಳು ಹುಲಿಗೆಮ್ಮ ಎಷ್ಟೊತ್ತು ಮಲಗೀದಿ
ಬಾಳಿದಿಂಡಿಗ್ಗೆ ಬಿಸಿಲಾಗಿ । ಗುಡಿಮುಂದ
ಸಾಲು ಜೋಗ್ಯರು ಹಸಿದಾರೊ
ಬೆಳದಿಂಗಳ ಬೆಳಕೀತಿ ಹೊಳಿಯ ದಾಟುವನ್ಯಾರೊ
ಬಿಳಿಯಂಗಿ ಬೆಳ್ಳೀ ಉಡದಾರ । ಮೈಲಾರಲಿಂಗ
ಮರ್ತ್ಯಕ್ಕೆಮಬ್ಬುಗವುದಾನ ॥

(ಶರಣಪ್ಪ ಚಳಮರದ, ಕುಕನೂರು)

ಪುರಾಣ ಕೇಂದ್ರಿತ ನೆಲೆಯಲ್ಲದೆ ಇತಿಹಾಸ ಕೇಂದ್ರಿತ ನೆಲೆಯಲ್ಲಿಯೂ ಹಂತಿ ಪದಗಳ ಹರಹು ಇರುವುದು ರೈತನ ಸಾಂಸ್ಕೃತಿಕ ಪ್ರಜ್ಞೆಯನ್ನು ಸೂಚಿಸುತ್ತದೆ. ಕಲ್ಯಾಣದ ಬಸವಣ್ಣ, ಮಾದಾರ ಚೆನ್ನಯ್ಯ, ರಣ ಹರಳಯ್ಯ ಮುಂತಾದವರ ಬಗೆಗಿನ ತತ್ವ ಕೇಂದ್ರಿತ ಮುಕ್ತಕಗಳೇ ಅಲ್ಲದೆ ಕಥನ ಗೀತೆಗಳೂ ಸಿಗುತ್ತವೆ. ಇವು ತ್ರಿಪದಿಯಲ್ಲಿ ಬೆಳೆಯುತ್ತವೆ. ಶರಣರ ಆಂದೋಲದ ಪ್ರಭಾವ ಈ ಭಾಗದಲ್ಲಿ ಎಷ್ಟಿದೆ ಎಂಬುದನ್ನು ಇದು ಪರೋಕ್ಷವಾಗಿ ಸೂಚಿಸುತ್ತದೆ. ಇಂತಹ ಜನಪದ ರಚನೆಗಳು ದಕ್ಷಿಣ ಕರ್ನಾಟಕದಲ್ಲಿ ಕಡಿಮೆ ಎಂಬುದನ್ನು ತೌಲನಿಕವಾಗಿ ನೋಡಬಹುದು.

ಕಿರಿಕುಲದ ಹರಳಯ್ಯವರಶರಣ ತಾನಾದ
ಪರಮತದ ಜಯಿಸಿ ಹರಿಸಿದನು । ಹರಳಿನಿಗೆ
ಹರಮೆಚ್ಚಿ ಮೆರಿಸಿ ಕರೆದೊಯ್ದ ॥
ಶರಣು ಶರಣೆಂಬುವೆವು ಹರಣಹಾರುವ ತನಕ
ಕರುಣಿಸಿರಿ ಶರಣ ಚೆನ್ನಯ್ಯ । ನಮಗಿನ್ನು
ಹರಸಿರಿ ಹುಲುಸು ಹುಲ್ಲುಲ್ಲಿಗೂ ॥

(ದಾವನಸಾಬ ಅತ್ತಾರ್, ಆಬಲಕಟ್ಟಿ)

ರೈತ ಜಾತ್ಯತೀತ ಕಾಯಕದವನು. ಇಲ್ಲಿ ವಿವಿಧ ಜಾತಿ ಮತ್ತು ಧರ್ಮಗಳ ಜನ ಕಾಣುತ್ತಾರೆ. ಅಂತಹ ರೈತ ತಾನು ಲೌಕಿಕವಾಗಿ ಅನುಕಂಪಕ್ಕರ್ಹವಾಗಿ ಯಾವುದಾದರೂ ಒಂದು ಜಾತಿಗೆ ಅನಿವಾರ್ಯವಾಗಿ ಸೇರಬೇಕಾಗುತ್ತದೆ. ಆದರೆ ತಾನು ಮಾನಸಿಕವಾಗಿ ಅದರಾಚೆಗೆ ಬೆಳೆದು ನಿಂತಿರುತ್ತಾನೆ ಎಂಬುದಕ್ಕೆ ಈ ಮೇಲ್ಕಂಡ ಮುಕ್ತಕಗಳೇ ಸಾಕ್ಷಿ ಧರ್ಮ, ದೇವಾಲಯ ಮುಂತಾದ ತಮ್ಮ ಸಂದರ್ಭದ ಸಾಂಸ್ಥಿಕ ಧರ್ಮಗಳ ಅನೇಕ ವಿವರಗಳೂ ಇಂತಹ ರಚನೆಗಳಲ್ಲಿ ಕಾಣುತ್ತವೆ. ಅಲ್ಲದೇ ಎಲ್ಲ ಜಾತಿಗಳ ಕಾಯಕ ಸಂಬಂಧಿ ಮಹತ್ವವನ್ನು ಸಾರುವ ರಚನೆಗಳೂ ಇಲ್ಲಿವೆ. ಇಂತಹ ವಿವಿಧ ಜಾತಿಗಳ ಜನರೊಂದಿಗೆ ತನಗಿರುವ ಆತ್ಮೀಯ ಒಡಂಬಡಿಕೆಯು ಪರಸ್ಪರ ವಿಡಂಬನೆಯ, ಹಾಸ್ಯದ ರಚನೆಗಳನ್ನು ಮೂಡಿಸಿದೆ. ಇಲ್ಲಿ ವಾಲೀಕಾರ, ಕುರುಬ, ಒಡ್ಡ, ಅಕ್ಕಸಾಲಿಗ, ಕಮ್ಮಾರ ಮುಂತಾದ ಎಲ್ಲ ಜಾತಿಗಳ ಬಗೆಗಿನ ಸಲುಗೆ ಕಾಣುತ್ತದೆ.

ವಾಲೀಕಾರ ನಿನಗೆ ಒಳ್ಳೆಯ ಹೆಂಡತಿಯಾಕೊ
ನೀ ಹೋದಿ ರಾಜ್ಯ ತಿರುಗೂತ । ಆ ಬಾಲಿ
ಬಾಡ್ಯಾಳ ಬಾಳಿ ಸುಳಿಯಾಗಿ ॥
ವಡ್ಡರ ಮನಿ ಮುಂದ ವಟವಟಗಿಡಹುಟ್ಟಿ
ವಡ್ಡರ ಪೋರಿ ಗೆಳತನ । ಮಾಡಿದರ
ಗೊಡ್ಡೆಮ್ಮೆ ಹಾಲ ಉಣಿಸ್ಯಾಳೊ ॥

(ಭೀಮಪ್ಪ ಶೆಟ್ಟೆಪ್ಪ, ಕುಕನೂರು)

ಹೀಗೆ ಸಾಮಾಜಿಕ ವಸ್ತು ವಿಸ್ತಾರದ ಭಾಗವಾಗಿ ಜಾತಿ ಸಂವೇದಿತ ರಚನೆಗಳೂ ವೈವಿಧ್ಯಮಯವಾಗಿ ಇಲ್ಲಿ ಮೂಡುತ್ತದೆ. ಇದೇ ನಿಟ್ಟಿನಲ್ಲಿ ಗಂಡ ಹೆಂಡತಿಯರ ಶೃಂಗಾರ ಚಿತ್ರಗಳು, ಗಂಡನಿದ್ದೂ ಮಿಂಡನೊಂದಿಗಿನ ಗೆಳೆತನ, ಚೆಲುವೆಯ ಬಣ್ಣನೆ, ನೀತಿ, ಹಾಸ್ಯ ಮುಂತಾದ ವಸ್ತು ಸಂಬಂಧಿ ರಚನೆಗಳು ಇಲ್ಲಿ ರಸ ಘಟ್ಟಿಗಳಾಗಿ ಹೊಮ್ಮುತ್ತವೆ. ಇವುಗಳ ಮೋಹಕ ಬಲೆಯಲ್ಲಿ ಸಿಲುಕುವ ರೈತನಿಗೆ ಹಂತಿಯ ದಣಿವು ಕಾಣದಿರುವುದು ಅವನ ರಸಿಕತೆಗೆ ಒಡ್ಡಿದ ಕನ್ನಡಿ ಎನ್ನಿಸುತ್ತದೆ.

ಅಂತೆಯೇ ಅವುಗಳನ್ನು ಕೇಳುತ್ತಾ ಶ್ರಮಿಸುವ ರೈತ ಸಂಗಾತಿಗಳು ಮತ್ತು ಕಣದಂಚಿನ ವೀಕ್ಷಕ ಸಹೃದಯಿಗಳು ಕಾಲದ ಪರಿವೆಯನ್ನು ಕಳೆದುಕೊಂಡರೆ ಅದು ಹಂತಿಯ ಹಾಡುಗಳ ರಸೋಜ್ವಲ ಗುಣದ ಮಾಂತ್ರಿಕ ಶಕ್ತಿಯೇ ಹೊರತು ಬೇರಲ್ಲ.

ಊರ ಮುಂದಲ ಹೊಲನೀ ಮಾಡೊ
ನಿನ್ನ ನೋಡಿ ನೀರಾ ತರತೀನಿ । ನನ್ನ ಗೆಣೆಯಾ
ನೀ ಬಾ ಅಂದಾಗ ನಾ ಬರತೇನಿ ॥
ಹಂಚಿ ಬಟ್ಟೆನ ಕೈಯ ಒತ್ತೊತ್ತಿ ಹಿಡಿಬ್ಯಾಡೊ
ನೆತ್ತರು ಇಳಿದಾವೊ ಬೆರಳೀಗೆ । ನನ್ನ ಗೆಣೆಯ
ಅತ್ತೆವ್ವ ಬಯ್ದಾಳು ಕೈ ಬಿಡೊ ॥
ಗಂಡ ಹೆಂಡರು ಕೂಡಿ ಗುಂಡದ ನೀರಿಗೆ ಹೋಗಿ
ಗುದ್ಯಾಡಿ ನೀರು ಕಲಕ್ಯಾವ । ಬೇಗೀನ
ತಂಗಾಳ್ಗೆ ನೀರು ತಿಳಿದಾವ ॥[೨೦]

ಹೀಗೆ ರೈತನ ರಸಿಕ ಜೀವನ ದೃಷ್ಟಿ ಎಲ್ಲವೂ ಇಲ್ಲಿ ದರ್ಶನಗೊಳ್ಳುತ್ತದೆ. ಇಂತಹ ವಿಸ್ತೃತ ಮತ್ತು ವೈವಿಧ್ಯಮಯ ವಸ್ತು ಹಂತಿಯ ಪದಗಳಲ್ಲಿ ವ್ಯಕ್ತಗೊಳ್ಳುವ ರೈತನ ಜೀವನ ದೃಷ್ಟಿ ಮತ್ತು ಅದರ ಸ್ವರೂಪದ ಜಾತಕವನ್ನು ಬಿಡಿಸುವ ಬಗೆಯೇ ಆಗಿರುತ್ತದೆ. ಇಂತಹ ಅಭಿವ್ಯಕ್ತಿ ಮುಖ್ಯವಾಗಿ ತ್ರಿಪದಿಗಳ ರೂಪದಲ್ಲಿದ್ದರೂ ದ್ವಿಪದಿ ಮತ್ತು ಚೌಪದಿಗಳೂ ಇಲ್ಲವೆಂದಲ್ಲ. ಅಲ್ಲದೇ ತಂತ್ರದ ದೃಷ್ಟಿಯಿಂದಲೂ ಮುಖ್ಯವಾಗುವ ಗಾದೆ ಮತ್ತು ಒಗಟು ಸ್ತರದ ಪದಗಳೂ ಇಲ್ಲಿರುವುದು ಅವರ ಕಾವ್ಯ ಸಂವೇದನಾ ಶಕ್ತಿಯವನ್ನು ಪ್ರಕಟಿಸುತ್ತದೆ.

ಒಬ್ಬ: ಆಚೆ ಹೊಲ್ದನ್ನ ಲಕ್ಷ್ಮಿ ಈ ಚ್ಯಾಕ ಯಾಕ ಬಂದಾಳ
ಇನ್ನೊಬ್ಬ: ರಾಶಿ ಬುತ್ತಿ ಕಿಚಡೀಗಿ ಆಶೆ ಮಾಡಿ ಬಂದಾಳೊ

(ಶರಣಪ್ಪ ಚಳಮರದ, ಕುಕನೂರು)

ಹೀಗೆ, ಸುಗ್ಗಿಯ ಸಮಯದಲ್ಲಿ ರೈತ ಹಂತಿಯನ್ನು ಕಟ್ಟಿಕೊಂಡು ಹಗಲು ರಾತ್ರಿಯೆನ್ನದೇ ಹತ್ತಾರು ಗಂಟೆಗಳ ಕಾಲ ನಿರಂತರವಾಗಿ ಕಣದಲ್ಲಿ ದುಡಿಯುತ್ತಾನೆ. ಉಲ್ಲಾಸಭರಿತ ಈ ಶ್ರಮದಲ್ಲಿ ಬಸವನ ದಣಿವನ್ನು ಮರೆಯುವುದಕ್ಕೆ ಈ ಅವಧಿಯಲ್ಲಿ ಕೋಗಿಲೆ ತಳಿರನ್ನು ಮೆದ್ದು ಹಾಡುವಂತೆ ರೈತ ಪೈರಿಂದ ಕಾಳನ್ನು ಕಾಣುತ್ತಾ ಹೋಗುತ್ತಾನೆ. ಗಿಡಕ್ಕೆ ಎಲೆ, ಚಿಗುರು, ಹೂ ಮೂಡುವ ಹಾಗೆ ತಾನು ಜನಪದ ಕಾವ್ಯ ಗಂಗೆಯ ಅನಾಯಾಸ ಕವಿಯೂ ಆಗುತ್ತಾನೆ.

ಇಂತಹ ಎಲ್ಲ ಹಾಡುಗಳಲ್ಲಿ ಧಾನ್ಯದ ರಾಶಿ ಇಮ್ಮಡಿಯಾಗಲಿ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾನೆ. ಈ ನೆಲೆಯಲ್ಲಿ ತಾನು ಭೂಮಿ, ಬಸವ, ಗಣಪ, ಮಳೆರಾಯ ಮುಂತಾದ ಎಲ್ಲ ನೈಸರ್ಗಿಕ ಮತ್ತು ಸಾಂಸ್ಥಿಕ ದೈವಗಳ ಬಗೆಗೆ ತೋರುವ ಭಕ್ತಿಯು ತೋರುಂಬ ಲಾಭವೇ ಆಗುತ್ತದೆ. ಇದು ಹಂತಿಯ ಹಾಡುಗಳ ಸ್ವರೂಪ ಮತ್ತು ಅವುಗಳ ಮೂಲದ ಬಗೆಗಿನ ಸಂಕುಚಿತ ಮಾತು ಅಲ್ಲ ಎಂಬುದು ಮುಖ್ಯ ಸಂಗತಿ ಎನ್ನಿಸುತ್ತದೆ.

ಕೃಷಿ ಕ್ಷೇತ್ರದಲ್ಲಿಯೂ ಕೈಗಾರಿಕಾ ಕ್ರಾಂತಿಯ ಫಲಿತಗಳು ಕಾಣುತ್ತಿರುವುದರಿಂದ ನೇಗಿಲು, ನೊಗ, ಹಂತಿ, ಬಸವ ಮೊದಲಾದವುಗಳ ಜಾಗದಲ್ಲಿ ಯಂತ್ರ ಕಾಣಿಸಿಕೊಂಡು, ಅವುಗಳು ಹೊಮ್ಮಿಸುವ ಶಬ್ದದಲ್ಲಿ ಹಂತಿಯ ಹಾಡುಗಳು ಮರೆಯಾಗುತ್ತಿವೆ.

ಬಸವಣ್ಣ ಬರ್ವಾಗ ಅವರವ್ವ ಹೇಳ್ಯಾಳ ।
ಬಸವಾಗ ಹೂಡಿ ಹೊಡಿಬ್ಯಾಡೋ । ಸ್ವಾಮಾರ
ಹಸುಮಗ ಆಗಿ ತಿರಗಲೋ
ಚಿಂತಿ ಮಾಡಲಿಬ್ಯಾಡ ಹುಚ್ಚ ನನ್ನ ಬಸವಣ್ಣ
ಚಿಂತ ಆಗ ಕಾಯ ಇಳದಾದೊ । ಪಾಂಡೋರು
ಅಂತವರಿಗುಂಟೊ ವನವಾಸೊ ॥

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಬಸವಣ್ಣನ ಬದುಕಿನೊಂದಿಗೆ ರೈತನ ಬದುಕೂ ಇಲ್ಲಿ ಸಮರಸಗೊಂಡಿದೆ. ತಾವಿಬ್ಬರೂ ವನವಾಸದಿಂದ ಬದುಕುತ್ತಿದ್ದೇವೆಂದು ರೈತ ತನ್ನ ಮುದ್ದು ಬಸವನಿಗೆ ಹಿತನುಡಿಯನ್ನು ಹೇಳುತ್ತಾನೆ. ಜೊತೆಗೆ ಸೋಮವಾರ ಬಸವನಿಗೆ ವಿರಾಮ ನೀಡಲಾಗುತ್ತದೆ. ಚಿಂತಿಸದಿರಲು ಅಭಯಹಸ್ತ ನೀಡುತ್ತಾನೆ. ಅಂತೆಯೇ ಎತ್ತುಗಳು ರೈತನ ಬೆನ್ನೆಲುಬಾಗಿ ನಿಂತು ಅವನ ಬದುಕನ್ನು ನಡೆಸುತ್ತಿವೆ. ಬಸವ ಅವನಿಗಾಗಿ ರೈತ ಮಾಡಿದ ಸೇವೆಯಾದರೂ ಅಪಾರವಾದದ್ದು.

ಜೋಳದ ಹಂತೀ ಕಟ್ಟಿ ನಾಳಿಗಿ ತಿಂಗಳಾತೊ ।
ಆನಿ ತುಳಿದರ ಸಂವದಿಲ್ಲೊ । ನಮ್ಮ ಬಸವ
ಪಾದ ಇಟ್ಟದಕ ನುರುತಾವೋ ॥

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಎನ್ನುವಲ್ಲಿ ರೈತನ ಅಭಿಮಾನ ಇನ್ನೂ ಸೂರೆಗೊಂಡಿದೆ. ಆನೆಗಿಂತಲೂ ತನ್ನ ಎತ್ತು ಬಲಶಾಲಿ ಎಂದುಕೊಂಡಿದ್ದಾನೆ. ಒಕ್ಕಲಿಗನ ಜೀವನದಲ್ಲಿ ಕಣ ಕಡಿದು ರಾಶಿ ಮಾಡುವ ಸಂಭ್ರಮದಲ್ಲಿ ಹಂತಿ ಹಾಡುಗಳನ್ನು ಹೇಳುವ ಪ್ರಮುಖ ಪ್ರಕಾರ ಇದಾಗಿದೆ. ಜನಪದ ಹಾಡುಗಳು ಎಲ್ಲರ

ಮನವನ್ನು ಆಕರ್ಷಿಸುವವು. ನಮ್ಮ ಗಡಿನಾಡಿನ ಹಂತಿಗಳೆಂದರೆ ನೂರಾರು ಚೀಲಗಳ ರಾಶಿ ನೋಡಿದರೆ ಸುಗ್ಗಿಯ ಸೊಬಗನ್ನು ಕಾಣಬೇಕು. ನೂರು ಎತ್ತುಗಳ ಮೋಡಿಯ ಕಣವನ್ನು ನೋಡಿದರೆ, ರಾತ್ರಿ ಹಂತಿ ಮಾಡಿದ ರೈತರ ದಣಿವನ್ನು ಇಂಗಿಸಲು ಹಲಗೆ, ವಾದ್ಯಗಳೊಂದಿಗೆ ಕುಣಿದಾಡಿ ಹಾಡುವ ನೋಟ ರಮ್ಯವಾದದ್ದು. ರೈತರು ಹಂತಿಯ ಹಾಡುಗಳನ್ನು ಬೆಳಗು ಹರಿಯುವವರೆಗೂ ಹಾಡುವರು.

ಬಿತ್ತಿದ ಹೊಲದಾಗ ಒತ್ತಿಹಾಯಕಿ ಯಾರು
ಮುತ್ತಿನ ಉಡಿಯಕ್ಕಿ ಬನದಮ್ಮ । ಹಾಯ್ದರ ।
ಬಿಚ್ಚಿಬಿದ್ದಾವ ಬಿಳಿಜ್ವಾಳ ॥

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಹೀಗೆ, ಹಂತಿ ಪದಗಳು ಕೃಷಿ ಸಂಸ್ಕೃತಿಯನ್ನು, ಕೃಷಿ ಕ್ರಿಯೆಯನ್ನು ಸಮರ್ಥವಾಗಿ ಪ್ರತಿನಿಧಿಸುತ್ತವೆ.

### ೪.೩. ಡೊಳ್ಳಿನ ಹಾಡುಗಳು

ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಪ್ರಕಾರಗಳಲ್ಲಿ ಡೊಳ್ಳಿನ ಹಾಡುಗಳಿಗೆ ವಿಶಿಷ್ಟ ಸ್ಥಾನವಿದೆ. ಈ ಹಾಡುಗಳು ವಿಶೇಷವಾಗಿ ಕುರುಬರಿಗೆ ಮಾತ್ರ ಸೀಮಿತವಾಗಿವೆ. ಶೈವ ಪಂಥದೊಂದಿಗೆ ಗುರುತಿಸಿಕೊಂಡಿರುವುದು ಕುರುಬರು ಶಿವ ಸಂಪ್ರದಾಯದವರು. ಇವರ ಆರಾಧ್ಯ ದೈವ ರೇವಣಸಿದ್ಧ, ಈತ ಹನ್ನೆರಡನೇ ಶತಮಾನದ ಶರಣ ಚಳುವಳಿಯ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತಾನೆ. ಬೀರೇಶ್ವರ, ಬ್ರಹ್ಮದೇವ, ಮೈಲಾರಲಿಂಗ, ಇಟ್ಟಪ್ಪ, ಚಿಕ್ಕಪ್ಪಕಲ್ಲು ಕಂಬದಪ್ಪ ಬೂದಲಪ್ಪ, ಶಕ್ತಿ ಪಲ್ಲಪ್ಪ ಹಾಗೂ ಸ್ತ್ರೀದೇವತೆಗಳಾದ ಎಲ್ಲಮ್ಮ, ಮಾಯಮ್ಮ, ಲಕ್ಷ್ಮಿದೇವಿ, ದುರ್ಗಮ್ಮ ಮುಂತಾದ ಗ್ರಾಮೀಣ ದೇವತೆಗಳ ಜೊತೆಗೆ ವೀರಶೈವ ಚಳುವಳಿಯಲ್ಲಿ ಆಗಿ ಹೋದ ಶರಣ ಶಿವಭಕ್ತರನ್ನು ಕುರಿತು ಡೊಳ್ಳಿನ ಹಾಡುಗಳ ಮೂಲಕ ಅವರ ಚರಿತ್ರೆಯನ್ನು ಪ್ರಕಟಿಸುತ್ತಾರೆ.

### ಡೊಳ್ಳಿನ ಹಿನ್ನೆಲೆ

ಭಾರತೀಯ ಜನಾಂಗ ಹಾಗೂ ಜನಪದ ವಾದ್ಯಗಳ ಉಗಮಕ್ಕೆ ಸಂಬಂಧಿಸಿದಂತೆ ಒಂದೊಂದು ದಂತಕಥೆಗಳು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಡೊಳ್ಳುವಾದ್ಯ ಹೇಗೆ ಹುಟ್ಟಿ ಬಂದಿತೆಂಬುದರ ಬಗೆಗಿನ ಒಂದು ದಂತಕಥೆ ಹೀಗಿದೆ: ಶಿವನು ಸಿದ್ಧಗಿರಿಯಲ್ಲಿ ಜಪ ಮಾಡಲು ಕುಳಿತಾಗ ಚಾರವಾದಕನೆಂಬುವವನು ಕಾವಲು ಗಾರನಾಗಿದ್ದನು. ಶಿವನ ದರ್ಶನಕ್ಕಾಗಿ ಬಂದ ಪಾರ್ವತಿ ಮತ್ತು ನಂದಿಯನ್ನು ಸೇವಕ ಚಾರವಾದಕ ತಡೆದನು ಆಗ ನಂದಿಗೂ ಮತ್ತು ಚಾರವಾದಕರಿಗೂ ಘೋರ ಯುದ್ಧ ನಡೆದು, ಆ ಯುದ್ಧದಲ್ಲಿ ಚಾರವಾದಕ ಹತನಾಗುತ್ತಾನೆ. ಈ ಸುದ್ದಿ ಶಿವನಿಗೆ ತಿಳಿಯಲು ಅವನ ಪ್ರಾಮಾಣಿಕತೆ, ಶ್ರದ್ಧೆ ಭಕ್ತಿಗೆ ಮೆಚ್ಚಿದ ಶಿವನು ಅವನ ದೇಹದ ಅಸ್ತಿಪಂಜರ ಚರ್ಮ ನರಗಳಿಂದ ಡೊಳ್ಳು ತಯಾರಿಸಿ ಕುರುಬರಿಗೆ ಕೊಟ್ಟನೆಂದು ಹೇಳುತ್ತಾರೆ.

ಇನ್ನೊಂದು ಕತೆಯ ಪ್ರಕಾರ ಜೊಳ್ಳಾಸುರ ಎಂಬುವವನು ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡನು. ಶಿವನು ಏನುಬೇಕೆಂದು ಕೇಳಲು ಜೊಳ್ಳಾಸುರನು ನಿನ್ನನ್ನೇ ನುಂಗುವೆನೆಂದನು. ಸರಿ ಹಾಗಾದರೆ ನುಂಗಿದ ತರುವಾಯ ಯಾವಾಗ ಹೊರಹಾಕುವೆ ಎಂದು ಶಿವ ಕೇಳಲು

ಪಂಚರಾತ್ರಿ ಕೂಡಿದಾಗ ಎಂದನು. ಒಪ್ಪಂದದ ಪ್ರಕಾರ ಪಂಚರಾತ್ರಿಗಳು ಕೂಡಿದಾಗ ಆ ದೈತ್ಯ ಶಿವನನ್ನು ಹೊರಗೆ ಬಿಡಲಿಲ್ಲ. ಹರಿಯು ಬಂದು ಹರನನ್ನು ಧ್ಯಾನ ಮಾಡಿ ಹುಡುಕಾಡಿದನು. ಹರ ಮಾತ್ರ ಜೊಳ್ಳಾಸುರನ ಎಲುಬು ಚರ್ಮದಿಂದ ಡೊಳ್ಳೊಂದನ್ನು ತಯಾರಿಸಿ, ಕೋರೆ ಹಲ್ಲುಗಳನ್ನು ಗುಣಿ ಮಾಡಿ ಬಾರಿಸಿದನು. ಆಗ ಹರನು ಎಚ್ಚೆತ್ತನು. ಆಗ ಭೂಲೋಕದಲ್ಲಿ ಕುರಿಕಾಯುತ್ತಿದ್ದ ನಮಗೆ ಈ ವಾದ್ಯ ಕೊಟ್ಟು ಹರಿಹರನು ಕೈಲಾಸಕ್ಕೆ ತೆರಳಿದನು. ಆವಾಗಿನಿಂದಲೇ ಡೊಳ್ಳುವಾದ್ಯ ಮತ್ತು ಡೊಳ್ಳಿನ ಹಾಡುಗಳು ಹುಟ್ಟಿಕೊಂಡಿವೆ ಎನ್ನುತ್ತಾರೆ. ಡೊಳ್ಳು ತುಂಬ ಪ್ರಾಚೀನ ತಾಮ್ರವಾದ್ಯ ಎಂಬುದಕ್ಕೆ ರಾಘವಾಂಕ, ಸಿದ್ಧನಂಜೇಶ ನಂಜುಂಡಕವಿಗಳೆಲ್ಲ ತಮ್ಮ ಕಾವ್ಯಗಳಲ್ಲಿ ಈ ವಾದ್ಯದ ಬಗೆಗೆ ಉಲ್ಲೇಖ ಮಾಡಿರುವುದನ್ನು ಗಮನಿಸಬಹುದಾಗಿದೆ. ಈ ಮೇಲಿನ ಮಾತುಗಳೆಲ್ಲ ಡೊಳ್ಳುವಾದ ಹಾಗೂ ಡೊಳ್ಳಿನ ಹಾಡುಗಳು ಹಿನ್ನೆಲೆಯನ್ನು ತಿಳಿಸುತ್ತವೆ.

**ಡೊಳ್ಳಿನ ಸಾಂಸ್ಕೃತಿಕ ಹಿನ್ನೆಲೆ**

ಒಂದಾನೊಂದು ದಿನ ಪಾರ್ವತಿ ಮತ್ತು ಪರಶಿವರು ಜೂಜಾಡುತ್ತಿದ್ದರು. ಸೋತವರು ತಮ್ಮ ಸರ್ವಸ್ವವನ್ನೂ ಬಿಟ್ಟು ಕೈಲಾಸ ತೊರೆದು ಯಾರಿಗೂ ಕಾಣದಂತೆ ಜೀವಿಸಬೇಕೆಂದು ಪಟ್ಟಕಟ್ಟಿಕೊಂಡರು. ಅದರಂತೆ ಶಿವ ಸೋತ; ಪಣದಂತೆ ಭೂಲೋಕಕ್ಕೆ ಶಿವ ಬಂದು ಕಲ್ಲು ಗವಿಯಲ್ಲಿ ಕಲ್ಲಾಗಿ ಬಿದ್ದಿದ್ದ. ಶಿವನು ಕಲ್ಲಾಗಿ ಬಿದ್ದ ಜಾಗದಲ್ಲಿ ಮಾಯಾ ಮೂರ್ತಿಯು ಮಾಯಾರೂಪದಿಂದ ಕಾಯುತ್ತಿತ್ತು. ಹೀಗೆ ಬಹಳ ಸಮಯ ಕಳೆದವು. ಶಿವನಿಲ್ಲದೆ ಜಗತ್ತಿಗೆ ಜಗತ್ತೇ ಗೋಳಾಡಿತು. ಪಾರ್ವತಿಗೆ ಲೋಕಪಾಲನೆಯನ್ನು ಮಾಡುವುದು ಸಾಕಾಗಿ ಹೋಯಿತು. ಅನಂತರ ನಾರದನು ಶಿವನನ್ನು ಪತ್ತೆ ಮಾಡಿ ಮಾಯಾಮೂರ್ತಿಯನ್ನು ಕೊಂದನು. ಆಗ ತನಗೆ ಕಾವಲಿದ್ದ ಮಾಯಾಮೂರ್ತಿಯನ್ನು ಬಿಟ್ಟು ಬರಲಾರದ ಶಿವನು ಅವನ ಕಳೇಬರದಿಂದ ಡೊಳ್ಳನ್ನು ಮಾಡಿದ. ನಾರದ ಈ ಡೊಳ್ಳನ್ನು ಬಾರಿಸುತ್ತ ದೇವಿಯೇ ನಿಮ್ಮಯ ದೇವರು ಬಂದಾನ ಬನ್ನಿರೆ ಎಂದು ಪಾರ್ವತಿಯನ್ನು ಕರೆದನು. ಆಗ ಪಾರ್ವತಿಯು ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೆ ಎಂದು ಸಖಿಯರೊಂದಿಗೆ ಸಂಭ್ರಮದಿಂದ ಗಂಡನನ್ನು ಸ್ವಾಗತಿಸಿದಳು. ಹೀಗೆ ಡೊಳ್ಳಿನ ಪದಗಳು ಈಗಲೂ

ದೇವಿ ನಿಮ್ಮಯ ದೇವರು ಬಂದಾನ ಬನ್ನಿರೆ
ಸ್ವಾಮಿಯ ನಮ್ಮಯ ದೇವರು ಬಂದಾನ ಬನ್ನಿರೆ[೨೧]

ಎಂದು ಆರಂಭವಾಗುತ್ತದೆ. ಈ ಹಾಡಿನ ಮುಖಾಂತರ ಹಾಡುವರು.

**ಡೊಳ್ಳಿನ ಹಾಡುಗಳ ಹಾಡುಗಾರಿಕೆ ಸಂದರ್ಭ**

ಡೊಳ್ಳಿನ ಹಾಡುಗಳನ್ನು ಕುರುಬರಷ್ಟೇ ಹಾಡುವುದೊಂದು ವಿಶೇಷ. ಆದರೆ ಇವರು ವೃತ್ತಿಗಾಯಕರಲ್ಲ. ಮನಸ್ಸಿಗೆ ಖುಷಿಯಾದಾಗ ಹಾಗೂ ಹಾಡು ಹೇಳಲು ಆಮಂತ್ರಿಸಿದಾಗ ಹಾಡುತ್ತಾರೆ. ಕಲಾ ಪ್ರದರ್ಶನಕ್ಕೆ ಕೆಲವು ದಿನ ಮೊದಲು ಮೇಳದ ಮುಖಂಡನಿಗೆ ಭಂಡಾರ ಹಚ್ಚಿ ವೀಳ್ಯ ಕಾಯಿ ಕೊಟ್ಟು ಸಂಕೇತವಾಗಿ ಮೇಳದ ಮುಖಂಡ ಭಂಡಾರ ಹಿಡಿಯುತ್ತಾರೆ. ಸಾಮಾನ್ಯವಾಗಿ

ಕೊಪ್ಪಳ ಜಿಲ್ಲೆಯಲ್ಲಿ ಜಾತ್ರೆ, ಉತ್ಸವ, ಸಂಭ್ರಮ, ಶ್ರಾವಣ ಸೋಮವಾರ, ಅಮೋಘಸಿದ್ಧ, ಮರಡಿಸಿದ್ಧ, ಬಿಳಿಯಸಿದ್ಧ ಮುಂತಾದ ದೇವರುಗಳು ಹಾಡುಗಾರಿಕೆಯನ್ನು ಹೇಳುತ್ತಾರೆ.

**ಕುರುಬರ ಸಾಂಸ್ಕೃತಿಕ ಹಿನ್ನೆಲೆ**

ಕುರುಬರ ಮೂಲದ ಬಗ್ಗೆ ಇದುವರೆಗೆ ಹಲವಾರು ಚರ್ಚೆಗಳು ನಡೆದಿವೆ. ವ್ಹಿ.ಆರ್. ಹನುಮಂತಯ್ಯ ೧೯೫೮, ಶಿವಾನಂದ ಗುಬ್ಬಣ್ಣನವರ ೧೯೯೩, ಬಸವರಾಜ ಎಸ್. ೧೯೭೮ ಹೀಗೆ ಇನ್ನಿತರರು ಚರ್ಚಿಸಿದ್ದಾರೆ. ಕುರುಬರು ಪಶುಪಾಲಕರೇ? ಕೃಷಿಕರೇ? ಋಗ್ವೇದ ಧರ್ಮಿಗಳೇ? ಎನ್ನುವ ಹತ್ತು ಹಲವಾರು ಆಯಾಮಗಳು ಈ ಚರ್ಚೆಯ ವಸ್ತು ಆಗಿದೆ. ಆದರೆ ಪ್ರಸ್ತುತ ಅಧ್ಯಯನದ ಮುಖ್ಯ ಗಮನವಿರುವುದು ಮೇಳಗಳ ಸಾಂಸ್ಕೃತಿಕ ಅಧ್ಯಯನದ ಕಡೆಗೆ. ಹೀಗಾಗಿ ಮೂಲದ ಬಗೆಗಿನ ಚರ್ಚೆ ಇಲ್ಲಿ ಅಪ್ರಸ್ತುತ. ಅಧ್ಯಯನಕ್ಕೆ ಪೂರಕವಾಗಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಕೆಲವು ಮೌಖಿಕ ಮಾಹಿತಿಗಳಿಂದ ಕುರುಬರ ಹಿನ್ನೆಲೆಯನ್ನು ಸ್ಥೂಲವಾಗಿ ನೋಡಲು ಪ್ರಯತ್ನಿಸಲಾಗಿದೆ. ಕುರುಬರ ಮೂಲದ ಬಗ್ಗೆ ಹಲವಾರು ರೀತಿಯ ಕಥೆ, ಹಾಡುಗಳು ಚಾಲ್ತಿಯಲ್ಲಿವೆ. ಅವುಗಳಲ್ಲಿ ಸ್ವಲ್ಪಮಟ್ಟಿನ ಭಿನ್ನತೆಯಿಂದ ಕೂಡಿದ ಕಥೆ ಮತ್ತು ಹಾಡುಗಳನ್ನು ಕೆಳಗಿನಂತೆ ನೋಡಬಹುದು.[೨೨]

**ಡೊಳ್ಳಿನ ಹಾಡುಗಳ ಲಕ್ಷಣಗಳು**

ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುವ ಡೊಳ್ಳಿನ ಹಾಡುಗಳ ಸಾಮಾನ್ಯ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಡೊಳ್ಳಿನ ಹಾಡುಗಳು ಕುರುಬರಿಂದಲೇ ಹೆಚ್ಚಾಗಿ ರಚಿತಗೊಂಡು ಅವರಿಂದಲೇ ವಿಶೇಷ ಸಂದರ್ಭಗಳಲ್ಲಿ ವಿಶೇಷ ಆಮಂತ್ರಣದ ಮೇರೆಗೆ ಹಾಡಲ್ಪಡುತ್ತವೆ.

೨. ಡೊಳ್ಳಿನ ಹಾಡುಗಳು ಸಾಮಾನ್ಯವಾಗಿ ಗುರು, ಹರ ಹಾಗೂ ಇತರೆ ದೇವತೆಗಳ ಸ್ತುತಿಯೊಂದಿಗೆ ಪ್ರಾರಂಭಗೊಂಡು ಅನಂತರ ದೀರ್ಘ ಕಥಾ ನಿರೂಪಣೆಯನ್ನೊಳಗೊಂಡಿವೆ. ಹಾಡಿನ ಮಧ್ಯ ವಚನಗಳು, ಅಂತ್ಯದಲ್ಲಿ ಆರಾಧ್ಯ ದೈವದ ಹೆಸರಿನ ಮುದ್ರಿಕೆ ಕಾವ್ಯನಾಮ ಇರುವುದು ಸಾಮಾನ್ಯ ಲಕ್ಷಣವಾಗಿದೆ.

೩. ಡೊಳ್ಳಿನ ಹಾಡುಗಳು ವಸ್ತುವಿನ ದೃಷ್ಟಿಯಿಂದ ಕಥನ ರೂಪದತ್ತ ಹೆಚ್ಚಾದ ಒಲವು ಕಾಣುತ್ತದೆ. ಮೂಲದಲ್ಲಿ ಹಾಲುಮತ ಸಂಪ್ರದಾಯವನ್ನು ಮಾತ್ರ ನಿರೂಪಿಸುತ್ತಿದ್ದ ಈ ಹಾಡುಗಳು ಬರಬರುತ್ತ ಅಲ್ಪಸ್ವಲ್ಪವಾಗಿಯಾದರೂ ನಾಗರಿಕತೆ ಹಾಗೂ ನೆರೆಯ ಧರ್ಮ, ಸಮಾಜಗಳ ಪ್ರಭಾವದಿಂದ ಇತರೆ ವಸ್ತುವಿಷಯಗಳನ್ನು ಆಧರಿಸಿದಂತಹವೂ ಸೇರಿಕೊಂಡಿವೆ. ಇತ್ತೀಚೆಗೆ ಹರದೇಶಿ ನಾಗೇಶಿ ಮಾದರಿಯ ಸವಾಲು-ಜವಾಬು ಬಳಸಿ ಹಾಡುವ ಪ್ರಯತ್ನ ಕಂಡುಬರುತ್ತಿದೆ.

೪. ಡೊಳ್ಳಿನ ಹಾಡುಗಳಲ್ಲಿ ಕಥೆಗಳು ವಿಳಂಬವಾಗಿ ಹಾಗೂ ಸುತ್ತು ಬಳಸಿ ಪ್ರಾರಂಭಗೊಂಡರೂ ಅವಸರದಲ್ಲಿ ಮುಕ್ತಾಯಗೊಳ್ಳುವುದಿಲ್ಲ. ಆರಂಭದಲ್ಲಿ ನಿಧಾನವಾದ ಪ್ರವೇಶ, ಕಥೆ ಕೇಂದ್ರಬಿಂದು ವನ್ನು ದಾಟಿದರೂ ಮುಗಿಯದೇ ಇರಬಹುದು. ಪುನರಾವೃತ್ತಿ ಸರ್ವೇಸಾಮಾನ್ಯ. ಪಾತ್ರಗಳ

ವಿವರಣೆ ನೇರ, ಸರಳ, ಕಥನ ಗತಿಯಲ್ಲಿ ಅವುಗಳಿಗೆ ಕಥೆಗಳಲ್ಲಿ ಉಪಕತೆಗಳಿಲ್ಲ ಸರಳತೆ ಸುಲಭೀಕರಣಗಳು ಈ ಕಥೆಗಳ ಪ್ರಧಾನ ಲಕ್ಷಣ. ಎಲ್ಲ ಧರ್ಮ ದೃಷ್ಟಾರರ ಚರಿತ್ರೆಗಳು ಹಾಡಿಗೆ ವಸ್ತುವಾಗುವುದರಿಂದ ಡೊಳ್ಳಿನ ಹಾಡುಗಳ ಸರ್ವಮತ ತತ್ವಗಳ ಸಮನ್ವಯದ ಕುರುಹಾಗಿ ಸರ್ವರ ಆದರಾಭಿಮಾನಗಳಿಗೆ ಪಾತ್ರವಾಗಿದೆ.

೫. ಡೊಳ್ಳಿನ ಹಾಡುಗಳು ಸಾಮಾನ್ಯ ಕಥನ ಗೀತೆಗಳಾಗಿರುವುದರಿಂದ ಅವು ದೀರ್ಘವಾಗಿರುತ್ತವೆ. ಹಾಗೆಯೇ ಅವು ಹೋರಾಟ ಸೋಬಾನ ಪದಗಳಂತೆ ಕ್ಷೀಣಿಸುವ ಬದಲು ವೃದ್ಧಿಗೊಳ್ಳುತ್ತಲೇ ನಡೆಯುತ್ತಿವೆ. ಹಿಂದಿನ ಹಾಡುಗಳ ಜೊತೆಗೆ ಪ್ರಸ್ತುತ ದರ್ಜೆಗಳು ಡೊಳ್ಳಿನ ಹಾಡಿನ ಸಾಹಿತ್ಯಕ್ಕೆ ಸೇರುತ್ತಲೇ ಇವೆ. ಆದರೆ ಲಾವಣಿ ಪದಗಳಷ್ಟು ಡೊಳ್ಳಿನ ಹಾಡುಗಳಲ್ಲಿ ಕಂಡು ಬರುವುದಿಲ್ಲ.

೬. ಡೊಳ್ಳಿನ ಹಾಡುಗಳ ಸಾಮಾನ್ಯ ಲಕ್ಷಣವೆಂದರೆ ಅವುಗಳ ಸರಳ ರಚನೆ ಮತ್ತು ಪ್ರಾಸಾನುಪಾಸತೆ. ಆದಿ ಇಲ್ಲವೆ ಅಂತ್ಯ ಪ್ರಾಸವನ್ನೋ ಇಲ್ಲವೆ ಅವೆರಡರ ಸಮನ್ವಯವಾಗಿರುವುದನ್ನೋ ಕಾಣಬಹುದು.

೭. ಛಂದಸ್ಸಿನ ದೃಷ್ಟಿಯಿಂದ ನೋಡಿದರೆ ಡೊಳ್ಳಿನ ಹಾಡುಗಳ ಏಕಪದಿಯಿಂದ ಹಿಡಿದು ದ್ವಿಪದಿ, ತ್ರಿಪದಿ, ಚೌಪದಿಗಳಲ್ಲಿ ರಚಿತಗೊಂಡಿವೆ.

ಒಟ್ಟಿನಲ್ಲಿ ಕೊಪ್ಪಳ ಜಿಲ್ಲೆಯ ಡೊಳ್ಳಿನ ಹಾಡುಗಳು ಧರ್ಮ, ಕಲೆ ಸಾಹಿತ್ಯದ ಮೇಲಿನ ಮಮತೆಯಿಂದಾಗಿ ಪರಿಣತರ ಮಾರ್ಗದರ್ಶನದಲ್ಲಿ ಡೊಳ್ಳಿನ ಪೆಟ್ಟು ಹಾಡುಗಾರಿಕೆಯನ್ನು ಕಲಿತುಕೊಂಡು ಕಲಾ ಪ್ರದರ್ಶನಕ್ಕೆ ಅಣಿಗೊಳ್ಳುವ ಇವರನ್ನು ಹವ್ಯಾಸಿ ಹಾಡುಗಾರರೆಂದು ಗುರುತಿಸ ಲಾಗಿದೆ. ಹಿನ್ನೆಲೆ, ವಾದ್ಯ ಡೊಳ್ಳಿನೊಂದಿಗೆ ಹಾಡುವುದರಿಂದ ಇವುಗಳನ್ನು ಡೊಳ್ಳಿನ ಹಾಡುಗಳೆಂದು ಕರೆದಿರುವುದು ಉಚಿತವಾದರೂ ದೀರ್ಘಾವದಿ ಏಕತಾನತೆಯ ಹಾಡುಗಾರಿಕೆಯ ಶ್ರೋತೃಗಳ ಸಹನೆಗೆ ಸವಾಲಾಗಿ ನಿಂತಿರುವುದಂತೂ ಸತ್ಯ. ಹೀಗೆ ಪ್ರಸ್ತುತವಾಗಿ ಡೊಳ್ಳು ಕಲೆಗೆ ಕುಲವಿಲ್ಲ. ಅಂದರೆ ಈ ಕಲೆಯು ಈಗಾಗಲೇ ಸಾರ್ವತ್ರಿತವಾಗಿದೆ. ಕಲೆಯ ರೂಪಾಂತರವೂ ಆಗಿದೆ. ಬೇಕಾದವರು ಈ ಕಲೆಯನ್ನು ಸಾಗಿಸಿಕೊಂಡು ಬರುವುದು ಪ್ರಸ್ತುತ ಸಂದರ್ಭದಲ್ಲಿ ಕಂಡುಬರುತ್ತವೆ.[೨]

## ಕುರುಬರ ಆರಾಧ್ಯ ದೈವಗಳು

ಬೀರಪ್ಪ ಕುರುಬರ ಲೌಕಿಕ ದೇವರು. ತಮ್ಮ ಕುಂದುಕೊರತೆ ಹರಕೆಗಳನ್ನು ತುಂಬಾ ಸಲಗೆಯಿಂದ ಈ ದೇವರೊಂದಿಗೆ ಇವರು ಹಂಚಿಕೊಳ್ಳುತ್ತಾರೆ. ಪ್ರತಿಯೊಂದು ದೇವರಿಗೂ ಒಂದು ಚರಿತ್ರೆ ಇರುವಂತೆ ಬೀರದೇವರಿಗೂ ಒಂದು ಚರಿತ್ರೆ ಇದೆ. ಡೊಳ್ಳು ಹಾಡುಗಳಲ್ಲಿ ಪರಮೇಶ್ವರದ ಬೆವರಿನಲ್ಲಿ ಹುಟ್ಟಿದ ಬ್ರಹ್ಮಪುತ್ರನೇ ಬೀರಪ್ಪ ಸೂರಾವತಿ ಕುಮಾರನೇ ವಿಷ್ಣು ದೇವರಳಿಯನೆ ಸುವರ್ಣ ಜಡೆ ಹೊನ್ನ ಹೊಕ್ಕಳ ನಿನಗಪ್ಪ ಎಂಬಿತ್ಯಾದಿ ಅಂಶಗಳು ಸಿಗುತ್ತವೆ. ತೀರ ಹತ್ತಿರದ ಸಂಬಂಧಗಳು ಕಂಡುಬರುತ್ತದೆ. ಕೃಷ್ಣ ಹುಟ್ಟುತ್ತಲೇ ಯಾವ ಕಂಸನ ಕಪಟತನಕ್ಕೆ ಗುರಿಯಾಗಿ ಅಲ್ಲಿಂದ ಪಾರಾಗಿ ಮಹಾನ್ ವ್ಯಕ್ತಿಯಾದಂತೆ ಬೀರಪ್ಪನೂ ಸಹ ಹುಟ್ಟುತ್ತಲೇ ಮಾವ

ನಾರಾಯಣನ ವೈರಿಯಾಗಿ ಹುಟ್ಟುತ್ತಾನೆ. ನಾರಾಯಣ ಬೀರಪ್ಪನನ್ನು ಏಳು ದಿನಗಳ ಕೂಸು ಇರುವಾಗಲೇ ಕಾಡುಪಾಲು ಮಾಡುತ್ತಾನೆ. ಕಾಡಲ್ಲಿ ಕುರಿ ಕಾಯುತ್ತಿದ್ದ ಚಾಮರಾಜನ ಮಕ್ಕಳಾದ ಅಕ್ಕಮ್ಮ, ಮಾಯವ್ವ, ಮಂಕಪ್ಪ ಕಾಳವ್ವ, ಲಕ್ಷ್ಮವ್ವರ ಸಾಕುಮಗನಾಗಿ ಬೆಳೆಯುತ್ತಾನೆ. ಬೀರಪ್ಪನ ಬೆಳವಣಿಗೆ ಸಹಜತೆಗೆ ವಿರುದ್ಧವಾಗಿ ಆಗುತ್ತದೆ. ನಿರುಪಯುಕ್ತ ಎನಿಸುವ ಆ ದಿನ ಕೊರಳ ಮಲಿಕುಡಿದು ಕಾರಣಿಕನಾಗಿ ಬೆಳೆಯುತ್ತಾನೆ.

ಇನ್ನೊಂದು ಮಾಹಿತಿ ಪ್ರಕಾರ ಶಿವಪಾರ್ವತಿಯರು ಲೋಕಸಂಚಾರ ಮಾಡುತ್ತಿದ್ದಾಗ ಕಾಡಿನಲ್ಲಿ ತೊಟ್ಟಿಲಲ್ಲಿದ್ದ ಈ ಕೂಸು ಕಣ್ಣಿಗೆ ಬೀಳುತ್ತದೆ. ಆಗ ಪಾರ್ವತಿ ಒಂದು ಗಿಡದಲ್ಲಿ ಬೀರಪ್ಪನ ರಕ್ಷಣೆಗೆ ವ್ಯವಸ್ಥೆ ಮಾಡುತ್ತಾಳೆ. ಹಬ್ಬ ಜೇನು ಹುಳುವಿನಿಂದ ಜೇನು ಕಟ್ಟಿಸುತ್ತಾಳೆ. ಆಗ ಶಿವ ಕಾಳಿಂಗ ಸರ್ಪವನ್ನು ಕರೆದು ಈ ಕೂಸು ಜೋಪಾನ ಮಾಡು, ಅದು ಅತ್ತಾಗೆಲ್ಲ ನಿನ್ನ ಬಾಲದಿಂದ ಜೇನು ಹುಟ್ಟು ತೂತು ಮಾಡಿ ಜೇನುಕುಡಿಸು ಅಂತ ಹೇಳಿ ಹೊರಡುತ್ತಾನೆ. ಬೀರಪ್ಪನ ಸಾಕುವಿಕೆಯಲ್ಲಿ ಪ್ರಕೃತಿಯೇ ಕೈ ಹಾಕುತ್ತದೆ. ಈ ಬಗ್ಗೆ ಡೊಳ್ಳಿನ ಹಾಡುಗಳಲ್ಲಿ ಸಾಕಷ್ಟು ವಿಷಯ ದೊರಕುತ್ತದೆ.[೨೪]

### ಮಾಳಿಂಗರಾಯ

ಮಾಳಿಂಗರಾಯ ಬೀರಪ್ಪನ ಪ್ರೀತಿಯ ಶಿಷ್ಯ. ತಂದೆ ಸೋಮರಾಯ, ತಾಯಿ ಕಾಶಿಬಾಯಿ, ಜುಂಜಪ್ಪ, ಮೈಲಾರ, ಮಾದೇಶ್ವರರಂತೆ ಈತನು ಕೂಡ ವೀರಯೋಧನಾಗಿದ್ದ. ಚಂದ್ರಸೇನ ಎಂಬುವನ ಆಸ್ಥಾನ ಜಟ್ಟಿ ವೀರಮಲ್ಲನನ್ನು ಸೋಲಿಸಿ ಚಂದ್ರಸೇನನ ಮಗಳನ್ನು ಮದುವೆಯಾಗುತ್ತಾನೆ. ಈ ವೀರನಿಗೆ ಇಬ್ಬರು ಹೆಂಡಿರು ಮೊದಲನೆಯವಳು ತನ್ನ ಸೋದರತ್ತೆ ಮಗಳು ಸೋಮಾದೇವಿ. ಇವಳ ಅನಿರೀಕ್ಷಿತ ಮರಣದ ನಂತರ ಚಂದ್ರಸೇನನ ಮಗಳನ್ನು ಮದುವೆಯಾಗುತ್ತಾನೆ. ಬೀರಪ್ಪ, ಮಾಳಿಂಗರಾಯನ ಶಿಷ್ಯನನ್ನು ತಪಸ್ಸು ಮಾಡಿ ಪಡೆದುಕೊಂಡವ ಬಾರಾ ವರ್ಷ ತಪಸ್ಸು ಮಾಡಿ ಆಗ ಮಾದೇವ ಬಂದಾನ ಓಡಿ ಏನ ಬೇಡ್ತೀ ಬೇಡ ಕೋಡಿ ಎಂದಾಗ ಬೀರಪ್ಪ ಸವಿಯಲಾರದ ಶಿಷ್ಯಮಗಳನ್ನು ಕೊಡು ಎಂದು ವರ ಕೇಳುತ್ತಾನೆ. ಆ ಪ್ರಕಾರ ಮಾಳಪ್ಪ, ಬೀರಪ್ಪನಿಗೆ ಶಿಷ್ಯನಾಗಿ ದೊರೆಯುತ್ತಾನೆ. ಇಬ್ಬರದು ಅನ್ಯೋನ್ಯ ಸಂಬಂಧ ಹೀಗಿರುವಾಗ ಒಂದು ದಿನ ಗುರು ಬೀರಪ್ಪ ಶಿಷ್ಯನ ಮನಸ್ಸು ನೋಡಲು ಕೆಲವೊಂದು ಪರೀಕ್ಷೆಗಳನ್ನು ಒಡ್ಡುತ್ತಾನೆ. ಹುಲಿಗಿಣ್ಣ ತರಲು ಕಳುಹಿಸುವುದು. ರೆಕ್ಕೆ ಚೋಳಾಗಿ ಕಾಡುವುದು ಇತ್ಯಾದಿ.[೨೫]

### ರೇವಣ್ಣಸಿದ್ಧ

ಡೊಳ್ಳಿನ ಹಾಡಿನ ಪ್ರಕಾರ ರೇವಣ್ಣಸಿದ್ದನು ಕೊಲ್ಲಿಪಾಕಿ ಎಂಬ ಪಟ್ಟಣದಲ್ಲಿ ಹುಟ್ಟಿದವ. ಕೊಲ್ಲಿ ಪಾಕಿ ಎಂಬ ಪಟ್ಟಣವೋಃ ಅಲ್ಲಿ ಹುಟ್ಯಾನ ಗುರು ರೇವಣಸಿದ್ದನೋ ಇನ್ನೊಂದು ಹಾಡಿನಲ್ಲಿ ಬ್ರಹ್ಮನ ಪಂಚಮುಖದಿಂದ ಪಂಚಾಚಾರ್ಯರು ಹುಟ್ಯಾರು ಕೇಳರಿ ಮುಂದಾ ಸದ್ಯೋಜಾತದಿಂದ ರೇಣುಕ ಹುಟ್ಯಾನ ಪಾಮದೇವರಿಂದ ದಾರುಕ ಹುಟ್ಯಾನ ಹೀಗೆ ಹುಟ್ಟಿದ ಮೇಲೆ ರೇಣುಕರ ಕರೆದು ಶಿವ ನೀನು ಮರ್ತ್ಯಕ ಹೋಗಿ ಭಕ್ತರ ಉದ್ಧಾರ ಮಾಡಿ ಬಾ ಎಂದು

ಹೇಳುತ್ತಾನೆ. ಕೊಲ್ಲಿ ಪಾಕಿಯ ಸೋಮನಾಥಲಿಂಗದಿಂದ ರೇವಣಸಿದ್ಧ ಮರ್ತ್ಯದಾಗ ಜನಿಸಿ ಬರುತ್ತಾನೆ. ಇನ್ನೊಂದು ಹಾಡು ಕೂಡ ರೇವಣ್ಣಸಿದ್ಧನ ಹುಟ್ಟುವಿಕೆ ಬಗ್ಗೆ ಮೇಲಿನ ಧಾಟಿಯನ್ನೇ ಹೇಳಿದರೂ ಇದಕ್ಕಿಂತ ಮುಂದುವರೆದು ರೇವಣಸಿದ್ದನನ್ನು ಮಹಾ ಪ್ರಕಾಂಡ ಪಂಡಿತನನ್ನಾಗಿ ಯೋಗಿಯನ್ನಾಗಿ, ದಾರ್ಶನಿಕನನ್ನಾಗಿ, ಪವಾಡ ಪುರುಷನನ್ನಾಗಿ ಚಿತ್ರಿಸುತ್ತದೆ. ಶೈವಾಗ ಮಗಳನ್ನೆಲ್ಲ ಅರಿತುಕೊಂಡ ಶಿವಯೋಗಿಯನ್ನಾಗಿ ಹಾಡು ಚಿತ್ರಿಸುತ್ತದೆ. ಮೇಲಿನ ಎಲ್ಲ ಉಲ್ಲೇಖಗಳನ್ನು ಪರಿಭಾವಿಸಿದಾಗ ರೇವಣ್ಣ ಸಿದ್ಧ ಒಬ್ಬನೇ ಅಲ್ಲ, ಅವರು ಬಹಳ ಜನ ಆಗಿ ಹೋಗಿರಬಹುದೇ ಎಂಬ ಪ್ರಶ್ನೆ ಹುಟ್ಟುತ್ತವೆ. ಅಥವಾ ಕಾಲಗತಿಸಿದಂತೆ ರೇವಣಸಿದ್ಧನ ಸುತ್ತ ಬೇರೆ ಬೇರೆ ರೀತಿಯ ಕಥಾವಳಿ ಹೆಣೆದುಕೊಂಡು ಬಂದಿರಬೇಕು.

ಕುರುಬರ ಮೂಲದ ಬಗ್ಗೆ ಹುಡುಕುವಾಗ ಪದ್ಮಣ್ಣನಿಗೆ ಪ್ರತ್ಯಕ್ಷವಾಗಿ ಮದುವೆ ಮಾಡಿದವ, ಬಾಲ ಬೀರಪ್ಪನಿಗೆ ಆಶ್ರಯ ನೀಡಿ ಆತನ ಬೆಳವಣಿಗೆಗೆ ಕಾರಣನಾದವ, ಗುರುದೀಕ್ಷೆ ಕೊಟ್ಟವ ರೇವಣಸಿದ್ಧನೇ ಎಂಬ ಮಾಹಿತಿ ದೊರೆಕುತ್ತದೆ. ಹೀಗೆ ನೋಡಿದಾಗ ಕುರುಬರ ಮೂಲ ಎಷ್ಟು ಪ್ರಾಚೀನವೋ ಸಿದ್ಧರು ಬಹಳ ಜನರು ಆಗಿ ಹೋಗಿರಬೇಕು. ಲಿಂಗಾಯತರಲ್ಲಿ ಒಬ್ಬ ರೇವಣಸಿದ್ಧನಿರಬೇಕು. ಲಿಂಗಮುಖದಿಂದ ಹುಟ್ಟಿದ್ದರಿಂದ ಶೈವರಿಗೂ ಕುರುಬರಿಗೂ ಪ್ರಿಯನಾಗಿ ಕಂಡಿರಬೇಕು. ಈತ ತನ್ನ ಪ್ರಭಾವಿ ವ್ಯಕ್ತಿತ್ವದಿಂದ ಜನಪ್ರಿಯನಾಗಿ ಉಳಿದಿರಬೇಕು.[೨]

ಪ್ರಾಚೀನ ಜನಾಂಗವೊಂದರ ಸಂಸ್ಕೃತಿಯ ಅಧ್ಯಯನ ಮಾಡುವಲ್ಲಿ ಡೊಳ್ಳಿನ ಹಾಡುಗಳು ಸಮರ್ಥ ಸಾಧನಗಳಾಗಿವೆ. ಹಾಲುಮತ ಸಾಹಿತ್ಯ ಮತ್ತು ಸಂಸ್ಕೃತಿಯ ಮೇಲೆ ಹೆಚ್ಚಿನ ಬೆಳಕು ಚೆಲ್ಲುತ್ತವೆ. ಕುರಿ ಸಾಕಣಿಕೆಗಾಗಿ ಗುಡ್ಡ ಬೆಟ್ಟಗಳನ್ನು ಸುತ್ತುತ್ತಾ ಇವರು ಕಾಡಿನಲ್ಲಿ ವಾಸಿಸುತ್ತಿದ್ದರು. ಮುಂದೆ ಊರ ಗ್ರಾಮಸ್ಥರ ಸಹಕಾರದಿಂದಾಗಿ ಒಳ್ಳೆಯ ನೆಲೆ ಸಿಕ್ಕು ಗ್ರಾಮವಾಸಿಗಳಾದವರು. ಕುರಿಗಳನ್ನು ಕಾಯುವವರಾದ್ದರಿಂದ ಇವರಿಗೆ ಕುರುಬರೆಂದೇ ಜನ ಈಗಲೂ ಕರೆಯುತ್ತಾರೆ. ಕುರಿ ಸಾಕಾಣಿಕೆಯ ವೃತ್ತಿಯ ಜೊತೆಗೆ ಒಕ್ಕಲುತನವನ್ನೂ ಮಾಡಿಕೊಂಡಿದ್ದಾರೆ.

ಇವರದು ಸರಳ ನಿಷ್ಕಲ್ಮಷ, ಪಾವಿತ್ರ ನಿಸ್ವಾರ್ಥ ಜೀವನ. ಅಂತೆಯೇ ಹಾಲುಮತದವರು ಎನ್ನುವ ಇನ್ನೊಂದು ಪರ್ಯಾಯ ಹೆಸರೂ ಇವರಿಗಿದೆ. ಹಾಲಿನಂತೆ ತಿಳಿ, ಶುದ್ಧ ಮನಸ್ಸು ಹೃದಯ ಎನ್ನುವುದರ ಜೊತೆಗೆ ಹೈನುಗಾರಿಕೆಯಲ್ಲೂ ಸಮೃದ್ಧಿ ಹೊಂದಿದವರು ಎನ್ನುವ ಅರ್ಥ ಈ ಹೆಸರಿನಲ್ಲಿರಬೇಕು.

ಹಾಲುಮತದವರೆಂದು ಕರೆಯಲಾಗುವ ಕುರುಬರು ಭಾರತದಲ್ಲಿ ನೆಲೆಸಿದ ಬಹುಪೂರ್ವ ಸಮುದಾಯಕ್ಕೆ ಸೇರಿದವರು. ಭಾರತದ ತುಂಬೆಲ್ಲಾ ವ್ಯಾಪಿಸಿರುವರು. ಕುರುಬರಿಲ್ಲದ ಹಳ್ಳಿಗಳಿಲ್ಲ ಎನ್ನುವಷ್ಟರಮಟ್ಟಿಗೆ ಇವರ ಸಂಖ್ಯೆ ಬೆಳೆದುನಿಂತಿದೆ. ಕೊಪ್ಪಳ ಜಿಲ್ಲೆಯಲ್ಲಿ ಬರುವ ಹಳ್ಳಿಗಳಲ್ಲೂ ಇವರು ವಾಸಿಸಿದ್ದು ಅನೇಕ ಗ್ರಾಮಗಳಲ್ಲಿ ಊರಿನ ಅಧಿಕಾರಿ ಆಗಿದ್ದಾರೆ.

ಹಗಲು ರಾತ್ರಿ ಕೂಡಿಯೇ ಡೊಳ್ಳಿನಹಾಡುಗಳನ್ನು ಹಾಡುವುದುಂಟು. ಹಾಡು ಕೇಳಿದ ಜನರಲ್ಲಿ ಕುತೂಹಲ ಕೆರಳಿದಂತೆ ಹಾಡುಗಾರನಿಗೆ ಇನ್ನೂ ಹಾಡಬೇಕೆನ್ನುವ ಹುರುಪು ಸಹಜವಾಗಿ ಮೂಡುವುದು.

ಹಾಡು ಕೇಳುವವ ತನ್ನ ಆನಂದ ಪ್ರಕಟಿಸುತ್ತ ಸಿಳ್ಳು ಹೊಡೆಯುವುದು, ಚಪ್ಪಾಳೆ ತಟ್ಟುವುದು, ಒನ್ಸ್ ಮೋರ್ ಎನ್ನುವುದರ ಜೊತೆಗೆ, ಭಕ್ಷೀಸ ಮಾಡುತ್ತ ಕಲಾಕಾರನ ಜೀವನೋಪಾಯದ ಜೊತೆಗೆ ಕಲೆಯನ್ನು ಪ್ರೋತ್ಸಾಹಿಸುವರು. ಪ್ರಾಚೀನ ಕಾಲದಲ್ಲಿ ಈ ಹಾಡುಗಳನ್ನು ರಣರಂಗದಲ್ಲಿ ಯೋಧರಿಗೆ ಹುರಿದುಂಬಿಸಲು, ದೇಶಾಭಿಮಾನ ಕುದುರಿಸಲು ಬಳಸುತ್ತಿದ್ದರಂತೆ. ವಿಜಯಾನಂದ ವಿವರ್ಧನಕ್ಕಾಗಿ ಕುಣಿಯುತ್ತ ಹಾಡುತ್ತಿದ್ದ ಲಯ ಪ್ರಧಾನವಾದ ರಣಗೀತೆಗಳು ಇವಾಗಿವೆ. ಇದರ ಮೇಲಿಂದ ಹಿಂದೆ ಇವುಗಳು ರಾಜ ಮರ್ಯಾದೆಯನ್ನೂ ಪಡೆದಿದ್ದವು ಎನ್ನುವುದಕ್ಕೆ ನಿದರ್ಶನವೆನಿಸುತ್ತದೆ. ಮೊದಲೊದಲು ರಣರಂಗಕ್ಕೆ ಮೀಸಲಾದ ಹಾಡುಗಳು ಬರಬರುತ್ತಾ ಸಮಾಜದ ವಿವಿಧ ರಂಗಗಳಲ್ಲೆಲ್ಲಾ ಕಾಣಿಸಿಕೊಂಡು ಸರ್ವವ್ಯಾಪ್ತಿಯಾದಂತಿದೆ. ವೀರರಸದ ಜೊತೆಗೆ ಶೃಂಗಾರ, ಹಾಸ್ಯ, ಕರುಣ ರಸಗಳೂ ಸೇರಿ ಲಾವಣಿ ಸಾಹಿತ್ಯ ಬಹುಮುಖವಾಗಿ ಬೆಳೆಯುವಂತಾಯಿತು.

ಅಲ್ಲದೆ, ಸಾಮಾಜಿಕ ಬದುಕಿನ ನಿತ್ಯ ವಸ್ತುಗಳೇ ಇಲ್ಲಿನ ಹಾಡುಗಳಿಗೆ ಮೂಲಭೂತವಾಗತೊಡಗಿ ಲಾವಣಿ ಹಾಡುಗಳು ಇನ್ನಷ್ಟು ಜನಪ್ರಿಯವಾಗುವಂತಾಯಿತು. ಕುರುಬರು ಭಕ್ತಿಗೆ ಹೆಸರಾದವರಾದ್ದರಿಂದ ಡೊಳ್ಳಿನ ಹಾಡುಗಳ ತುಂಬೆಲ್ಲ ಭಯ ಭಕ್ತಿ ದೇವರು ಧರ್ಮ ದೈವ ಮನೆ ಮಾಡಿಕೊಂಡಿದೆ. ಅವರ ಮುಗ್ಧ ಭಕ್ತಿಯ ದ್ಯೋತಕವೆಂಬಂತೆ ಹಾಡುಗಳ ರಚನೆಯಾಗಿವೆ.

ಸ್ವಾಮಿ ನಮ್ಮಯ ದೇವರು ಬಂದಾವ ಬನ್ನಿರೇ
ಗುರುವೇ ನಮ್ಮಯ ದೇವರು ಬಂದಾವ ಬನ್ನಿರೇ

(ಶಿವಪ್ಪ ಡೊಳ್ಳಿನ ಬೆಂಚಮಟ್ಟಿ, ಕುಷ್ಟಗಿ)

ಅನಂತರ ತಮ್ಮ ದೇವ ದೇವತೆಯ, ಗುರುವಿನ ನೀತಿಯ ಕುರಿತಾದ ಹಾಡುಗಳನ್ನು ಹೇಳುತ್ತಾರೆ. ಮೊದಲು ತನ್ನ ಗುರುವನ್ನು ಕುರಿತು,

ನಿನ್ನ ಕರಣೆ ಇದ್ದರೆ ಗುರುವೆ ವೈರಿಮ್ಯಾಲ ಹೊಡೆದಾಡೇನೊ
ಆಡ್ಯಾನಪಾ ನಿನ್ನಂಗಳದಾಗ ಹೋದೇನೂ ಚದುರಾಂಗಸಾಲ್ಯಾಗ
ಹಾಡ ಕಲಿಸವರುರೇಳಪ್ಪ ನಿನಗ ಓದ ಕಲಿಸವಾರ್ಯಾರೇಳೊ

(ಭೀಮಣ್ಣ, ನವಲಿ)

ಹಾಡ ಕಲಿಸಾಂವ ಮಕಸಿದ್ದ ಓದ ಕಲಿಸಾಂದ ಮಾಳಣ್ಣ ಎಡಕ ಯಾರಿಗಿ ಬೆಳಗ್ಯಾನ ಪೂಜಾರಿ ಬಲಕ ಯಾರಿಗಿ ಬೆಳಗ್ಯಾನೊ

ಎತ್ತಿ ಬರುವ ಚಂದ್ರಗ ಬೆಳಗ್ಯಾನ ಸುತ್ತಿ ಬರುವ ಸೂರ್ಯಗ ಬೆಳಗ್ಯಾನ
ಎಡಕ ಗೌರಿಗಿ ಬೆಳಗ್ಯಾನ ಪೂಜಾರಿ ಬಲಕ ಗಂಗೀಗಿ ಬೆಳಗ್ಯಾನ
ಆರುತಿ ಮ್ಯಾಲ ಮೂರಾವತಿ ಬಾನನ್ನ ನಾಗರೆಡ್ಡಿ ಪಂಚಾಯಿತಿ.

(ಧರ್ಮಣ್ಣ, ಹೊಸಳ್ಳಿ)

ಸೂರವ್ವನ ಮಗ ಬಾ ಬೀರಯ್ಯಲಿಂಗ ಸುಲಗಿಕೆಂಚಾಡಿದೇವರ ನಂತರ ದೇವರುಗಳ ಕುರಿತು ಸ್ತುತಿಗೈಯುತ್ತಾರೆ. ಬೀರನ ಅರಸಿ ಪಾರ್ವತಿಯು ವಿದ್ಯಾಧಿಪತಿ ಶಾರದೆಯ ವಿಘ್ನೇಶ್ವರ ಸಂಪತ್ತಿನ ಒಡತಿ ವರಲಕ್ಷ್ಮಿಯ ಬ್ರಹ್ಮದೇವನ ಹೀಗೆ ಹಲವು ದೇವತೆಗಳ ಮಹತ್ವವನ್ನು ಕುರಿತು

ಹೊಗಳಿ ಹಾಡು ಹೇಳುವರು. ಕುರುಬ ಜನಾಂಗದ ಮಹತ್ವ ಉಪಯೋಗವನ್ನರಿತ ಜನಪದರು ಅವರಿಗೆ ಸಮಾಜದಲ್ಲಿ ಹಿರಿಯ ಸ್ಥಾನವನ್ನು ನೀಡಿ ಗೌರವಿಸಿದ್ದಾರೆ. ಹೊಸ ವರುಷ ಯುಗಾದಿ ಪಾಡ್ಯದಂದು ಕುರುಬರ ಕುಂಟಿ ಮೊದಲು ರೈತರು ಪೂಜಿಸುವರು. ಅಂಗಡಿ ವ್ಯವಹಾರ ಮಾಡುವವರು ಮೊದಲು ಕುರುಬರ ಭೋಣಿಗೆ ವ್ಯಾಪಾರದಿಂದ ಪ್ರಾರಂಭಿಸುವರು.

ಕುರುಬರ ಗುರುತು ಕುರಿ ಇರುವುದು
ತಿಳಿದು ನೋಡಿರಿ ನಿಮ ಮನಕ
ಮೊದಲು ಕುರುಬರೆಂದು ಶೃತಿಯ ಸಾರುವುದು
ಓದಿ ನೋಡರಿ ನಿಮ್ಮ ಪುಸ್ತಕ
ಭವಿಷ್ಯ ಶಾಸ್ತ್ರದಲ್ಲಿ ಹನ್ನೆರಡು ರಾಶಿ
ಮೇಷ ಇರುವುದು ಮೊದಲಿಗೆ[೨೭]

ದೇಶದಲ್ಲಿ ಬರಗಾಲ ಬಿದ್ದಾಗ ಕುರುಬರಿಗೆ ಕೇಳಿಕೊಂಡರೆ ಕಂಬಳಿ ಬೀಸಿ ಮಳೆರಾಜನನ್ನು ಕರೆದರೆ ಹುಸಿ ಹೋಗದಲೇ ಬರ ಹಿಂಗಿಸುವನನ್ನುವುದು ಜನಪದರ ಗಾಢನಂಬಿಕೆ.

ಮುಗ್ಧ ಭಕ್ತಿಲಿಂದ ಕಂಬಳಿ ಬೀಸಿ
ಮಳೆರಾಜ ನೀನು ಬರಬೇಕೊ
ಮಾಡುಮುಗುಲ ಇಲ್ಲ ಗುಡಗ ಎಂದು ಇಲ್ಲ
ಎಲ್ಲ ಎದ್ದು ಬಂದಾದ್ರಿ ಮ್ಯಾಲಕ
ಜಡೆಮಳೆ ಸುರಿಯಿತು ಒಳ್ಳೆಕಡಕ
ಸತ್ಯವಂತ ಧರ್ಮ ಶೀಲವಂತ ಕುರುಬ
ಇರುವರು ರೇವಣ್ಣಸಿದ್ಧರ ಸೇವಕ
ಕುರುಬರು ಹಂತಿಕ ಧರ್ಮ ಇರುವುದೆಂದು
ಲೋಕ ಹೊಗಳುವುದು ಕೇಳಬೇಕರಿ[೨೮]

ಇಂಥ ಧರ್ಮವಂತರು, ನೀತಿವಂತರಾದ ಕುರುಬರನ್ನು ಜನಪದ ಸಮಾಜ ಪೂಜ್ಯ ದೃಷ್ಟಿಯಿಂದ ನೋಡಿದೆ. ಕುರುಬರು ನೀತಿವಂತರು ಎನ್ನುವುದಕ್ಕೆ ಸಾಂಕೇತಿಕವಾಗಿ ಡೊಳ್ಳಿನ ಹಾಡುಗಳಲ್ಲಿ ಅರ್ಥಗರ್ಭಿತವಾಗಿ ಹೇಳುತ್ತಾರೆ.

ಸಂಸಾರ ಎಂಬ ಸಾಗರದೊಳಗೆ
ಹಡಗ ದಾಟುದು ಭಾಳ ಜಡಾ
ದಾಟಿ ಹೋದ ಮೇಲೆ ಏಟೇಟುತ್ತಾಸ ಇಲ್ಲ
ಮುಂದೆ ಕಾಣುವದು ಮುಕ್ತಿಮಠ
ಅಳಿವದು ಕಾಯ ಉಳಿವದು ಕೀರ್ತಿ
ಅದೊಂದು ಬರುವುದು ನಿಮಗೂಡ
ಜೀವಾತ್ಮ ಇರುವಾಗ ದಾನ ಧರ್ಮಮಾಡಿ
ಪುಣ್ಯವುಗಳಿಸಿರಿ ನೀವುಗಡ
ಜೀವಾತ್ಮನ ಒಯ್ಯುವಾಗ ಜವಾನಬರುವಾಗ

ನೀನು ತಿಳಿದುಕೊಳ್ಳದ ಭಾಲ ಜಡ
ಪುಣ್ಯವೆಂಬುದು ಕಟ್ಟೆಟ್ಟ ಬುತ್ತಿ
ನಾಳೆ ಬರುವುದು ನಿಮಗುಡ
ಗಳಿಸಿಟ್ಟ ಹೊಲಮನಿ ಆಸ್ತಿಪಾಸ್ತಿಯೆಲ್ಲ
ಬಿಟ್ಟು ಹೋಗ್ತಿದಿ ತಿಳಿಮೂಢ

(ಭೀಮಪ್ಪ ಶೆಟ್ಟೆಪ್ಪ, ಕುಕುನೂರು)

ಕುರುಬ ಜನಾಂಗದ ಜೀವನ ಕಲೆಯ ಮರ್ಮ ಇಲ್ಲಿದೆ. ಇವರ ಧಾರ್ಮಿಕ ನೈತಿಕ ಕುರುಹುಗಳಾಗಿ ಈಗಲೂ ಅಲ್ಲಲ್ಲಿ ಕಾಣುವ ಪವಿತ್ರ ದೇವಾಲಯಗಳು ಜಾತ್ರೆಗಳು ಪುರಾಣಗಳು ಗದ್ದುಗೆಗಳು ಸಾಕ್ಷಿಯಾಗಿವೆ. ಬೀರದೇವರು ಹಾಲುಮತದ ಪ್ರಮುಖ ಆರಾಧ್ಯದೇವರು ಶಿವನಿಂದ ಜನಿಸಿದ ವೀರಭದ್ರನ ಅವತಾರವೇ ಬೀರಲಿಂಗ ಹಾಲುಮತದ ಉದ್ಧಾರಕ್ಕಾಗಿ ಭೂಲೋಕಕ್ಕೆ ಬಂದವನು. ಇವನು ಜನನ ಕಾರ್ಯ ಮುಂತಾದವುಗಳ ಕುರಿತು ಪುರಾಣ ಸೃಷ್ಟಿಯಾಗಿದೆ. ಪುರಾಣದ ಪ್ರಭಾವ ಕವಿಗಳ ಮೇಲಾಗಿ ಇದರ ಕುರಿತು ಹಾಡುಗಳನ್ನು ರಚಿಸಿದ್ದಾರೆ.

ಹತ್ತಿನೋಡಿ ಕಟ್ಟಾರು ಈ ಗುಡಿ
ಜಾಗ ನೋಡಿ ಕಟ್ಯಾರು ಈ ಗುಡಿ
ಪಾಯ ನೋಡಿ ತರ ಹಡ್ಡಿದಾರು
ಕಲ್ಯಾಳ ದೇವಿ ಕಲ್ಯಾಕ ವಜ್ರದುಂಡಿ ಎದ್ದೆಳ
ಕಾಜಿನ ಕರಿಕಂಭದ ಮ್ಯಾಲ ಗಡಿಗೆ ಬೋದಹೇರ‍್ಯಾನ
ಗಡಿಗೆ ಬೋದ್ಯಾನ ಮ್ಯಾಲೇಳಪ್ಪ
ಬಂಗಾರದ ತಲೆ ಹೇರ‍್ಯಾರಪ್ಪ
ಬಂಗಾರದ ತಲೆ ಬೋದಿನ ಮ್ಯಾಲೆ
ಬೆಳ್ಳಿ ಜಂತಿ ಬಿಗಿದಾರೋ
ಬೆಳ್ಳಿ ಜಂತಿ ಮ್ಯಾಲ ರಣದ ಕೊಂಬಿ ಎಳದಾದೊ
ಶಿಸ್ತ ನೋಡಿ ಕಟ್ಯಾರು ಈ ಗುಡಿ
ಶಿಂವ ಬಾರಂದ ಬರದಾರ ಈ ಗುಡಿ
ಬಾಗಿಲ ದಿಂಡಿಲಿ ಬಾಗಿಲ ಕಟ್ಯಾವು
ಗಿರಿಮಠದಲ್ಲಿ ಮುಗಿದಾವ
ನಿನ್ನ ಮ್ಯಾಲವದ ಹಾದೇನಪ್ಪ್

ಬೀರಪ್ಪನ ಮಹಿಮೆ ಕುರಿತು ನೂರಾರು ಹಾಡುಗಳು ದೊರೆಯುತ್ತವೆ. ಸೈದಾಪುರದ ಸಿದ್ದಪ್ಪ ಹಾಗೂ ಅವನ ಸಂಗಡಿಗರು ಹಾಡಿದ ಹಾಡನ್ನೇ ಪ್ರಕಟಪಡಿಸಿದರೆ ಡೊಳ್ಳಿನ ಕುರಿತು ಮಹಾಕಾವ್ಯವಾಗಿ ಹಾಲುಮತ ಕುರಿತು ಅಮೂಲ್ಯ ಗ್ರಂಥ ಬೆಳಕಿಗೆ ಬರುತ್ತವೆ.

ಜಗದಗುರು ಆದವನೀನೆ
ಜಗದ ಪಾಲನ ಮಾಡಿದವ ನೀನೆ
ಅಗಣಿತ ಮಹಿಮವ ತೋರಿದನೀನೆ
ಬಗೆ ಬಗೆ ರೂಪ ತೋರಿದಂತ ರೇವಣ್ಣಸಿದ್ಧನೀನೆ

ನೂರಾ ಒಂದು ಸಾಲ ಮೀರಿದವ ನೀನೆ
ನೂರಾ ಕೋಟಿ ಲಿಂಗದೊಳಗಿದ್ದವ ನೀನೆ
ನೂರಾ ಕೋಟಿ ಲಿಂಗದೊಳಗಿದ್ದವನೀನೆ
ತೋರಿ ಬಳಗೆ ಮೆರೆದ ಗುರುವು ನೀನೆ
ಮೂರು ಕೋಟಿ ಲಿಂಗದಾಗ ಮುಖ ತೋರಿನಿಂತ ಗುರು ನೀನೆ
ರ್‍ಯಾಂಕಾಳೆಂಬ ಕೆರಿ ಹರಿದಂವ ನೀನೆ
ಪಟ್ಟಣ ರಾಣಿ ಹೊಟ್ಟೆಹರಿದಂವ ನೀನೆ
ಹೊಟ್ಟೆ ಹರಿದು ಪಿಂಡಾಣ ತೆಗೆದಂವ ನೀನೆ
ಕೆರಿಯಾಳಗ ಹಗದಂಗ ರೇವಣಸಿದ್ಧ ನೀನೆ
ಬೀರ ದೇವರಿಗೆ ಲಿಂಗಕಟ್ಟಿದಂವ ನೀನೆ
ವೀರ ಹಾಲು ಮತಕ್ಕೆ ಗುರುವಾದಾದ ನೀನೆ
ವೀರತಪ್ಪ ದೈವ ತತ್ವಕನೀನೆ
ಹರ ಹರಿ ಮುಗಳಿಗೆ ಗುರುವಾದಾವ ರೇವಣ್ಣಸಿದ್ದಾ ನೀನೆ[೩೦]

ಆದಿಗುರು ಶ್ರೀ ರೇವಣಸಿದ್ದೇಶ್ವರ ಮಹತ್ವವನ್ನು ಹಾಡು ವರ್ಣಿಸುತ್ತದೆ. ಕುರುಬರು ತೀರ ಪ್ರಾಚೀನ ಜನ ಪಂಗಡದವನ್ನುವುದಕ್ಕೆ ರೇವಣಸಿದ್ದೇಶ್ವರನ್ನು ಆದ್ಯಗುರುಗಳನ್ನಾಗಿ ಮಾಡಿಕೊಂಡದ್ದು ಆಧಾರವೆನಿಸುತ್ತದೆ. ಹಿಂದೆ ಇವರನ್ನು ವೀರಶೈವ ಮತಕ್ಕೆ ಸೇರಿಸಿಕೊಳ್ಳದೆ ಕೀಳು ದೃಷ್ಟಿಯಿಂದ ನೋಡಿರಬಹುದು. ರೇವಣಸಿದ್ದೇಶ್ವರನು ಹಟದಿಂದ ತಪಸ್ಸನ್ನಾಚರಿಸಿ ಅವರನ್ನು ಲಿಂಗವಂತರ ಪಂಗಡದಲ್ಲಿ ಸೇರಿಸಿದನೆಂದು ಒಂದು ಅವತಾರದ ಕಥೆ ಹೇಳುತ್ತದೆ.

ಗುರುವೇ ನಮಃ ದೇವರ್ ಬಂದಾವ್ ಬನ್ನಿರೇ
ಶಿವನೇ ನಮಃ ದೇವರ್ ಬಂದಾವ್ ಬನ್ನಿರೇ

(ನಾಗಪ್ಪ, ಕುರಬರು, ಮಲ್ಲಾಪುರ)

ಎಂಬ ಪಲ್ಲವಿಯನ್ನು ಪುನರುಕ್ತಿಗೊಳಿಸುತ್ತಾರೆ. ಸಂಧಿಯ ಮುಕ್ತಾಯದಲ್ಲಿ ಸಾಲನ್ನು ಕಲಾವಿದರು ಮುಂದಿನ ಸಂಧಿಗೆ ಎತ್ತಿಕೊಂಡು ಹಾಡು ಮುಂದುವರಿಸುತ್ತಾರೆ. ಈ ಕ್ರಮ ಹಾಡಿನುದ್ದಕ್ಕೂ ಮುಂದುವರಿಯುವುದರಿಂದ ಡೊಳ್ಳಿನ ಹಾಡುಗಳು ದೀರ್ಘವಾಗಿದ್ದರೂ ಕಲಾವಿದರಿಗೆ ದಣಿವಾಗುವುದಿಲ್ಲ. ಪ್ರತಿಯೊಂದು ಹಾಡಿನ ಆರಂಭ ಸಂಧಿಯ ಅಂತ್ಯದಲ್ಲಿ ಕಲಾವಿದರು ಅವರು ಆರಂಭದ ಹಾದಿಯಲ್ಲಿ ಹಾಡುವಂಥ ಹಾಡು ಇದು ಆಗಿದೆ.

ಗುರುವೆ ನಿಮ್ಮ ಪತನ ಚರಣ
ಸರಸಿ ಜಾತಕೆರಗುವೆ ನಾನು
ಸರಸಿ ಜಾತಕೆರಗುವೆ ನಾನು
ದುರಿತವ ಪರಿಹರಿಸಯ್ಯ ನೀನು

(ಹನುಮಂತಪ್ಪ ಬಾರಿಕೇರಿ, ಮಲ್ಲಾಪುರ)

ಪ್ರತಿ ಸಂಧಿ ಆರಂಭದಲ್ಲಿ ವೈವಿಧ್ಯಕ್ಕಾಗಿ ನೀತಿಯ ಹಾಡನ್ನೋ ಇಷ್ಟದೇವತೆ ಗುರುವಿನ ಮಹಿಮೆಯನ್ನು ಹಾಡನ್ನೋ ಗಾಯಕರು ಹಾಡುವರು ಗುರು ಹರ ಹಾಗೂ ಇತರೇ ದೇವ

ದೇವತೆಗಳ ಸ್ತುತಿಯ ನಂತರ ಹಾಡಿನ ಮುಖ್ಯ ಭಾಗವಾದ ಕಥಾಸಾರದಲ್ಲಿ ಬರುವ ವೀರ, ಕರುಣ, ಹಾಸ್ಯ ಮುಂತಾದ ಸನ್ನಿವೇಶಗಳನ್ನು ಭಾವಕ್ಕೆ ತಕ್ಕಂತೆ ಹಾಡುವರು.

ಹಾಲಮತವು ಅರಿವು ಸಾಗರ
ಗಿರಿಯೊಂದೇ ಕೋಣನೂರ
ಗುರುವೇನಮ ದೇವರ್ ಬಂದಾವ್ ಬನ್ನೀರೆ

(ನಿಂಗಪ್ಪ ಕುರುಬರು, ಮಲ್ಲಾಪುರ)

ನುಡಿಯೊಂದಿಗೆ ಹಾಡಿಗೆ ಮುಕ್ತಾಯ ಮಾಡುತ್ತಿದ್ದಂತೆಯೇ ಕಂಡುಬರುವುದು.

**ಪೌರಾಣಿಕ ಹಾಗೂ ಚಾರಿತ್ರಿಕ ಹಾಡುಗಳು**

ಕರ್ನಾಟಕದ ಡೊಳ್ಳಿನ ಹಾಡುಗಳಲ್ಲಿ ಎರಡು ಧಾರೆಗಳಿವೆ. ಒಂದು ಮೌಖಿಕವಾಗಿ ಪರಂಪರೆಯಿಂದ ಬಂದಿರುವಂತಹವು. ಇನ್ನೊಂದು ರಚನೆಕಾರರಿಂದ ರಚಿಸಿ ಹಾಡಿರುವಂಥವು. ಇವೆರಡು ಧಾರೆಗಳು ಮೌಖಿಕ ನೆಲೆಯಲ್ಲಿ ಸಮಾನವಾಗಿ ಬೆಳೆದುಕೊಂಡು ಬರುತ್ತಿವೆ. ಈ ಹಾಡುಗಳಲ್ಲಿ ಪೌರಾಣಿಕ ಕಲ್ಪನೆ ಮೈಲುಗೈ ಪಡೆದಿದೆ. ಆರಂಭದಲ್ಲಿ ಡೊಳ್ಳಿನ ಹಾಡುಗಳೆಂದರೆ ಪೌರಾಣಿಕ ಹಾಡುಗಳೆಂದೇ ನಂಬಲಾಗಿತ್ತು. ಇಲ್ಲಿ ಶಿವಾನಂದ ಗುಬ್ಬಣ್ಣನವರ ಮಾತನ್ನು ನೆನಪಿಸಿಕೊಳ್ಳಬೇಕು. ಡೊಳ್ಳಿನ ಹಾಡುಗಳು ಸಾಮಾನ್ಯವಾಗಿ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ಇಲ್ಲವೇ ಘಟನಾತ್ಮಕ ರೂಪಗಳಲ್ಲಿ ರಚಿಸಲ್ಪಟ್ಟಿವೆ. ಆದರೆ ಪೌರಾಣಿಕ ರೂಪದ ಹಾಡುಗಳೇ ಹೆಚ್ಚು. ಪುರಾಣ ಕಥೆಗಳು ನೀತಿಯ ನುಡಿಗಳು, ಧಾರ್ಮಿಕ ಪುರುಷರ ಜೀವನ ಕುರುಬರಿಗೆ ಅಚ್ಚುಮೆಚ್ಚು. ಪುರಾಣ ಪುಣ್ಯಕಥೆಗಳನ್ನು ಹೇಳಿ ಸದಾಚಾರ ಸಂಪನ್ನರಾಗಿ ಬಾಳಬೇಕೆಂಬುದೇ ಅವರ ಉದ್ದೇಶ. ಅಂತೆಯೇ ಡೊಳ್ಳಿನ ಹಾಡುಗಳನ್ನು ಭಕ್ತಿಗೀತಗಳೆಂದು ಕರೆದರೂ ಕರೆಯಬಹುದಾಗಿದೆ. ಸಂಗ್ರಹಕಾರರು ಆರಂಭದಲ್ಲಿ ಪೌರಾಣಿಕ ಹಾಡುಗಳನ್ನು ಹೆಚ್ಚಾಗಿ ಹುಡುಕಿ ಸಂಗ್ರಹಿಸಿದರು. ಶಿವಾನಂದ ಗುಬ್ಬಣ್ಣವರ ದೇವರ್‌ಬಂದಾವ್ ಬನ್ನಿರೆ ಸಂ.೧ ಸಂಕಲನ ಸಂಪೂರ್ಣ ಪುರಾಣ ಕೇಂದ್ರಿತ ಹಾಡುಗಳಿಂದ ಕೂಡಿದೆ. ಪುರಾಣ ಕೇಂದ್ರಿತ ಹಾಡುಗಳನ್ನು ತರುವ ಉದ್ದೇಶದಿಂದಲೇ ಈ ಸಂಕಲನ ತಂದಿರುವುದಾಗಿ ಸಂಗ್ರಹಕಾರರು ಹೇಳುತ್ತಾರೆ. ಈ ಪರಿಕಲ್ಪನೆ ಹಲವು ಸಂಗ್ರಹಕಾರರಲ್ಲಿ ಕಾಣುತ್ತದೆ. ಹಾಗಾಗಿ ಈಗ ಸಂಗ್ರಹಿತ ಪಠ್ಯಗಳಲ್ಲಿ ಪೌರಾಣಿಕ ಹಾಡುಗಳು ಹೆಚ್ಚಾಗಿವೆ.

ಹಾಲುಮತದ ಸಾಂಸ್ಕೃತಿಕ ವೀರರಾದ ರೇವಣಸಿದ್ಧ, ಬೀರಪ್ಪ, ಮಾಲಿಂಗರಾಯ ಮುಂತಾದವರನ್ನು ಪೌರಾಣಿಕ ವ್ಯಕ್ತಿಗಳೆಂದು ಈ ಸಮುದಾಯ ಗ್ರಹಿಸಿದೆ. ಇವುಗಳಲ್ಲದೆ ನಂಬಿಯಕ್ಕನ ಚರಿತ್ರೆ, ಅರ್ಜುನನ ಚರಿತ್ರೆ, ಮಾರ್ಕಂಡೇಶ್ವರ ಚರಿತ್ರೆ, ಬೇಡರ ಕಣ್ಣಪ್ಪ, ತಿರುನೀಲಕಂಠ, ಗಿರಿಜಾ ಕಲ್ಯಾಣ, ಗಜಾಸುರ, ಭಂಗಿ, ಪತಿಭಕ್ತಿ ಅನಾಲದೇವಿ ಭೀಮಾರ್ಜುನ ಗರ್ವಭಂಗ, ಶಿವಶರಣೆ ನಿಂಬಕ್ಕ, ಜಕ್ಕವ್ವ, ಮಾಯವ್ವ, ಲಕ್ಕವ್ವ, ಎಲ್ಲವ್ವ, ಮುರುಳಸಿದ್ದೇಶ್ವರನ ಪದ ಮುಂತಾದ ಚರಿತ್ರೆ ಹಾಡುಗಳು ಕಾಣಬಹುದು.[೩೧] ಹಾಲುಮತ ಸಂಸ್ಕೃತಿಯ ಚಿಂತನೆಯ ನೆಲೆಗಳು ಡೊಳ್ಳು ಹಾಡುಗಳಲ್ಲಿ ಲಭಿಸುತ್ತವೆ.

## ೪.೪. ಕೋಲಾಟದ ಹಾಡುಗಳು

ಮಾನವನ ಬಾಳಭೂಮಿಯಲ್ಲಿ ಆನಂದದ ಹೂ ಅರಳುವುದಕ್ಕೆ ಕಲೆಯೂ ಒಂದು ಕಾರಣ. ಬಾಳಿನಲ್ಲಿ ಅಗಣಿತ ಕಲೆಗಳು ಹಾಸುಹೊಕ್ಕಾಗಿ ಸೇರಿಕೊಂಡಿರುತ್ತವೆ. ಆಂತರಿಕವಾಗಿ ಪ್ರತಿಯೊಬ್ಬ ಮಾನವನೂ ಕಲಾವಿದನೆ. ಆ ಕಲಾಶಕ್ತಿ ಕ್ರಿಯಾರೂಪದಲ್ಲಿ ಪ್ರಕಟವಾಗಿ ಸಾರ್ವತ್ರಿಕ ಮುದ್ರೆ ಬಿದ್ದಾಗ ಆ ಕಲೆಗೊಂದು ಬೆಲೆ ಸಿಗುತ್ತದೆ. ಹೆಸರು ಬರುತ್ತದೆ. ಹೀಗೆ ಕಲೆಗೂ, ಮಾನವನಿಗೂ ಇರುವ ಅವಿನಾಭಾವ ಸಂಬಂಧವನ್ನು ತಿಳಿಯಬಲ್ಲವರು ಜೀವನವೇ ಒಂದು ಕಲೆ ಎಂದು ಕರೆದುದರಲ್ಲಿ ಔಚಿತ್ಯವಿದೆ.

ಕಲೆಗಳಲ್ಲಿ ಕೆಲವು ಗ್ರಾಮ ಸಮಾಜ ಮತ್ತು ನಾಗರಿಕ ಸಮಾಜಗಳೆರಡರಿಂದಲೂ ಮನ್ನಣೆ ಪಡೆದಿವೆ. ಕೆಲವು ಎಷ್ಟೇ ಮೇಲ್ಮಟ್ಟದ ಕಲೆಗಳಾಗಿದ್ದರೂ ಸಹ ಸರಿಯಾದ ಪ್ರೋತ್ಸಾಹ, ಪೋಷಣೆಗಳಿಲ್ಲದೆ ಸಮಾಜದಲ್ಲಿ ಕಾಡುಮಲ್ಲಿಗೆಯ ಹೂಗಳಾಗಿಯೇ ಉಳಿದುಕೊಳ್ಳುತ್ತವೆ. ಇದಕ್ಕೆ ಅನೇಕ ಕಾರಣಗಳಿರುತ್ತವೆ. ಅವುಗಳಲ್ಲಿ ಅನ್ಯ ನಾಗರಿಕತೆಯ ಅಂಧಾನುಕರಣ ಬಹುಮುಖ್ಯ ಕಾರಣವಾಗುತ್ತದೆ. ಹೀಗೆ ಜನತೆಯ ಅನಾದರಣೆಗೆ ಗುರಿಯಾಗಿರುವ ಶ್ರೇಷ್ಠ ಜನಪದ ಕಲೆಗಳಲ್ಲಿ ಕೋಲಾಟವೂ ಒಂದು.[೨]

ಕರ್ನಾಟಕದಲ್ಲಿ ನಾನಾ ಕಡೆ ವಿವಿಧ ರೂಪದಲ್ಲಿ ಇದರ ಅಸ್ತಿತ್ವ ಕಂಡುಬರುತ್ತದೆ. ಇಲ್ಲಿ ಆದಿಯಿಂದಲೂ ಇದು ಒಳ್ಳೆಯ ಕಲೆಯಾಗಿ ಬೆಳೆದುಬಂದಿದೆ. ಕಾವ್ಯಗಳಲ್ಲಿ, ಶಿಲ್ಪಗಳಲ್ಲಿ, ಪಾಶ್ಚಿಮಾತ್ಯರ ಬರಹಗಳಲ್ಲಿ ಇದಕ್ಕೆ ಆಧಾರ ದೊರಕುತ್ತದೆ.

ಕೋಲಾಟ ಒಂದು ಮುಖ್ಯ ಜನಪದ ಕಲೆ, ಸಾಹಿತ್ಯ, ಸಂಗೀತಗಳನ್ನೊಳಗೊಂಡ ಇದು ಆಕರ್ಷಕ ನೃತ್ಯ ಕೂಡ. ಇದು ಹಳ್ಳಿಗರಿಗೆ ಸುಲಭ ಸಾಧ್ಯವೂ, ವೈವಿಧ್ಯಮಯವೂ ಆದ ಒಂದು ಪ್ರಮುಖ ಮನೋರಂಜನಾ ಕ್ರಿಯೆ. ಸಾಮಾನ್ಯವಾಗಿ ಪ್ರತಿ ಹಳ್ಳಿಗಳಲ್ಲೂ ಈ ಕೋಲಾಟ ಇದ್ದೇ ಇರುತ್ತದೆ. ಅವರಲ್ಲಿ ನೂರಕ್ಕೆ ಎಂಬತ್ತು ಮಂದಿಯಾದರೂ ಇದನ್ನು ಬಲ್ಲವರೇ ಆಗಿರುತ್ತಾರೆ. ಹಬ್ಬ-ಹರಿದಿನಗಳಲ್ಲಿ, ಮದುವೆ ಉತ್ಸವಗಳಲ್ಲಿ, ವಿಶೇಷ ಸಮಾರಂಭಗಳಲ್ಲಿ ಅವರು ತಪ್ಪದೇ ಕೋಲು ಹುಯ್ಯುವುದು ಅಭ್ಯಾಸವಾಗಿದೆ. ಕೋಲಾಟ ಇಲ್ಲದ ಯಾವ ವಿಶೇಷ ಕಾರ್ಯಕ್ರಮಗಳೂ ಅವರಿಗೆ ಕಳೆ ಕಟ್ಟುವುದಿಲ್ಲ. ಸುಗ್ಗಿಯ ಸಮಯಗಳಲ್ಲಿ ರೈತರಿಗೆ ಹೆಚ್ಚಾಗಿ ವಿರಾಮ ದೊರೆಯುವುದರಿಂದ ಅವರ ಹಿಗ್ಗಿಗೆ ಪಾರವಿಲ್ಲ. ಏಕೆಂದರೆ ಆ ಸಮಯಗಳಲ್ಲಿ ನಾಟಕ ಕಲಿಯುವುದು, ಕೋಲಾಟ ಆಡುವುದು, ರಾತ್ರಿಯ ವೇಳೆ ಕಣದಲ್ಲಿಡಲು ಒಕ್ಕುತ್ತ ಗಾಡಿ ಪದಗಳನ್ನು ಹಾಡುವುದು ಮುಂತಾದ ತಮಗಭಿರುಚಿಯುಳ್ಳ ಕಲೆಗಳಲ್ಲಿ ಮನಸಾಪೂರ್ತಿ ನೆರವು ಬೇಕಾಗಿರುವುದರಿಂದಲೂ, ಉಳಿದ ಕ್ರಿಯೆಗಳಲ್ಲಿ ಅಷ್ಟು ಕಲಾತ್ಮಕವಲ್ಲದುದರಿಂದಲೂ, ಜನರ ಮನೋರಂಜನೆಯ ಅಂಗವಾಗಿ ಹೆಚ್ಚು ಕಲಾಮಯವೂ ಸುಲಭ ಸಾಧ್ಯವೂ ಆದ ಈ ಕೋಲಾಟವನ್ನೇ ಬಹಳವಾಗಿ ಅವಲಂಬಿಸುತ್ತಾರೆ. ಸುಗ್ಗಿಯ ಸಮಯಗಳಲ್ಲಿ, ತಿಂಗಳು ಬೆಳಕಿನಲ್ಲಿ ಊರ ಬೀದಿಗಳಲ್ಲಿ ಊಟವಾದ ನಂತರ ಕೋಲಾಟವಾಡುವುದು ವಾಡಿಕೆ. ಅದನ್ನು ನೋಡಲು ದೊಡ್ಡವರು, ಹೆಂಗಸರು, ಮಕ್ಕಳಾದಿಯಾಗಿ ಬಂದು ಬೀದಿಯ ಅಕ್ಕಪಕ್ಕದ ಮನೆಗಳ ಜಗಲಿಗಳಲ್ಲಿ ಕುಳಿತುಕೊಳ್ಳುತ್ತಾರೆ. ಎಲೆ, ಅಡಿಕೆ ಜಗಿಯುತ್ತ ಕೋಲಾಟವನ್ನು ನೋಡುತ್ತ ಸುಮಾರು ಮಧ್ಯರಾತ್ರಿಯವರೆಗೆ ತಮ್ಮ ತಾಪತ್ರಗಳನ್ನೆಲ್ಲ ಮರೆತು ಸುಖವಾಗಿ ಕಾಲ ಕಳೆಯುತ್ತಾರೆ. ಮುಂಜಾನೆಯಿಂದ ಸಂಜೆಯಾದರೂ ಶ್ರಮವನ್ನು ಪರಿಹರಿಸಿ,

ಮನಸ್ಸಿಗೆ ಹಿತವನ್ನೂ, ನೆಮ್ಮದಿಯನ್ನೂ ತಂದುಕೊಡುವುದರಲ್ಲಿ ಸಂಶಯವಿಲ್ಲ. ಒಟ್ಟಿನಲ್ಲಿ ಇದು ವಿದ್ಯಾವಂತರ ಪಾಲಿಗೆ ಒಂದು ಕಲೆ ಆದರೆ ಗ್ರಾಮೀಣ ಜನರಿಗೆ ಬಿಡಲಾಗದ ಒಂದು ಅಭ್ಯಾಸವಾಗಿದೆ.

**ಸಾಧನಗಳು**

ಕೋಲಾಟವು ಪ್ರೇಕ್ಷಕರಿಗೆ ಹೆಚ್ಚು ಮನರಂಜಿಸಬೇಕಾದರೆ ಈ ಕೆಳಕಂಡ ಸಾಧನಗಳು ಅಗತ್ಯ. ಆಳುಗಳು, ಕೋಲಾಟಗೂಟ, ಗೆಜ್ಜೆ, ದಮ್ಮಡಿ, ತಾಳ, ಮರಗಾಲು ಮತ್ತು ಕೋಲಾಟ ಪದಗಳು.

**ಆಳುಗಳು**

ಕೋಲಾಟಕ್ಕೆ ಆಳುಗಳ ಸಂಖ್ಯೆ ನಿಗದಿಯಾಗಿರುತ್ತದೆ. ಕೋಲಾಟದಲ್ಲಿ ಭಾಗವಹಿಸುವವರನ್ನು ಆಳುಗಳು ಎಂಬುದಾಗಿಯೂ, 'ಕೋಲಾಟ' ಎಂಬುದನ್ನು 'ಕೋಲು ಹುಯ್ಯುವುದು' ಎಂಬುದಾಗಿಯೂ ಕರೆಯುವುದು ಹಳ್ಳಿಗಳಲ್ಲಿ ರೂಢಿಯಲ್ಲಿದೆ. ಕೋಲಾಟದಲ್ಲಿ ಅನೇಕ ವಿಧಗಳುಂಟು. ಅವುಗಳಲ್ಲಿ ಯಾವೊಂದು ಕೋಲು ಹುಯ್ಯಬೇಕಾದರೂ ಕೊನೆಪಕ್ಷ ಎಂಟು ಆಳುಗಳು ಬೇಕಾಗುತ್ತಾರೆ. ಅತಿ ಹೆಚ್ಚು ಎಂದರೆ ಇಪ್ಪತ್ತಾನ್ಲ್ಕು ಆಳುಗಳು ಭಾಗವಹಿಸಬಹುದು. ಇಂತಹ ಸಮಯದಲ್ಲಿ ಮೂರು ಜನರು ಮುಮ್ಮೇಳ ಹೇಳಬೇಕಾಗುತ್ತದೆ. ಇಷ್ಟುಮಂದಿ ಇರುವ ಕೋಲನ್ನು ಊರ ಬೀದಿಗಳಲ್ಲಿ ಹುಯ್ಯಲು ಕಷ್ಟವಾಗುತ್ತದೆ. ಏಕೆಂದರೆ ಇದಕ್ಕೆ ಸ್ಥಳ ವಿಶಾಲವಾಗಿಯೂ, ಮಟ್ಟವಾಗಿಯೂ ಇರಬೇಕಾಗುತ್ತದೆ. ಕೋಲಾಟ ನೋಡಲು ಲಕ್ಷಣವಾಗಿಯೂ, ಆಳುಗಳು ಕೋಲು ಕೊಡಲು ಮತ್ತು ಕುಣಿಯಲು ಅನುಕೂಲಕರವಾಗಿಯೂ ಇರಬೇಕಾದರೆ ಹತ್ತು ಜನರು ಮಾತ್ರ ಸಾಕಾಗುತ್ತದೆ. ಇದಕ್ಕಿಂತ ಹೆಚ್ಚಾದರಾಗಲಿ, ಕಡಿಮೆಯಾದರಾಗಲಿ ಕೋಲು, ಮೇಳವು ಅಷ್ಟು ಲಗತ್ತಾಗಿ ಕಾಣಿಸುವುದಿಲ್ಲ.

**ಕೋಲುಗೂಟಗಳು**

ಕೋಲಾಟದ ಆಧಾರ ಸ್ಥಂಭವೇ ಕೋಲುಗೂಟಗಳು. ಉಳಿದೆಲ್ಲ ಸಾಧನಗಳಿಗಿಂತ ಇವುಗಳ ಪಾತ್ರ ಪ್ರಧಾನವಾದುದು. ಇವುಗಳು ಎಷ್ಟೊಂದು ಮುಖ್ಯ ಎಂಬುದನ್ನು ಕೋಲಾಟ ಎಂಬ ಶಿರೋನಾಮೆ ಸಮರ್ಥಿಸುತ್ತದೆ. ಕೋಲಾಟಕ್ಕಾಗಿ ಬಳಸುವ ಸುಮಾರು ಮುಕ್ಕಾಲು ಅಡಿಯ ಕೋಲುಗಳನ್ನು 'ಕೋಲುಗೂಟ'ಗಳು ಎಂಬುದಾಗಿಯೇ ಕರೆಯುತ್ತಾರೆ. ಕೋಲುಗೂಟಗಳ ಸರಿಯಾದ ಉದ್ದ ಹತ್ತು ಇಂಚು ಮಾತ್ರ. ಗೇಣಿನ ಮೇಲೆ ೪ ಬೆಟ್ಟು ಕೋಲಿನ ಅಳತೆ ಇರಬೇಕು ಎನ್ನುತ್ತಾರೆ. ಅದು ೧೦ ಇಂಚು ಉದ್ದ ಇರುತ್ತದೆ. ಕೋಲುಗಳ ಉದ್ದ ಹತ್ತು ಅಂಗುಲಗಳಿಗಿಂತ ಹೆಚ್ಚು ಉದ್ದವಾಗಲಿ, ಗಿಡ್ಡವಾಗಲಿ ಆದರೆ ಅವುಗಳನ್ನು ಹಿಡಿದು ಹುಯ್ಯಲು ಕೂಟ ಸರಿ ಬರುವುದಿಲ್ಲ. ಎಲ್ಲ ಬಗೆಯ ಮರಗಳಿಂದ ಕೋಲುಗೂಟಗಳನ್ನು ತಯಾರಿಸಲು ಸಾಧ್ಯವಿಲ್ಲ. ಕೋಲುಗಳಿಂದ ಒಳ್ಳೆಯ ನಾದ ಹೊರಹೊಮ್ಮುತ್ತಿರಬೇಕು. ಕೋಲುಗಳು 'ಕಣಿ ಕಣಿ' ಎನ್ನುತ್ತಿರಬೇಕು. ಕೋಲುಗಳನ್ನು ಹುಯ್ಯುತ್ತಿರುವಾಗ ಅವು ಮಾತನಾಡಿದಂತಿರಬೇಕು ಎಂಬುದು ಅವರ ಹೇಳಿಕೆ ಕೋಲು ಮಾತಾಡುತಾವೆ ಎಂಬ ಗೀತೆಯನ್ನು ಈ ದೃಷ್ಟಿಯಿಂದಲೂ ಎಷ್ಟು ಮೆಚ್ಚಿದರೂ ಸಾಲದು. ಬೈನೆ, ಕಾರೆ ಮತ್ತು ಗಂಟೆಕಣಗಲು ಮರಗಳಿಂದ ತಯಾರಿಸಿದ ಕೋಲುಗಳು ಒಳ್ಳೆಯ ನಾದ ಕೊಡುತ್ತವೆ.[೩೩]

**ಗೆಜ್ಜೆ**

ಕೋಲಿಗೆ ತಕ್ಕಂತೆ ಕಾಲು ಹಾಕು, ಕಾಲಿಗೆ ತಕ್ಕಂತೆ ಗೆಜ್ಜೆ ಕಟ್ಟು ಎಂಬ ಗಾದೆ ಪ್ರಸಿದ್ಧವಾಗಿದೆ. ಈ ಗಾದೆಯಲ್ಲಿ ಎರಡನೆಯ ಭಾಗ ಬೇರೆ ಬೇರೆ ಅರ್ಥಗಳನ್ನು ಕೊಡಬಹುದಾದರೂ ಸಹ ಮೊದಲನೆಯದು ಕೋಲಾಟವನ್ನು ಕುರಿತದ್ದೇ ಆಗಿದೆ.

ಎಷ್ಟೇ ಚೆನ್ನಾಗಿ ಕುಣಿದರೂ ಸಹ ಕಾಲಿಗೆ ಗೆಜ್ಜೆ ಇಲ್ಲದಿದ್ದರೆ ಅದು ಅಷ್ಟಾಗಿ ಶೋಭಿಸುವುದಿಲ್ಲ. ಕುಣಿತಕ್ಕೆ ರೂಪು ಕೊಡುವುದೇ ಗೆಜ್ಜೆಯ ಝುಣ್ ಝುಣ್ ನಿನಾದ. ಗೆಜ್ಜೆ ಇಲ್ಲದೆ ಕುಣಿಯುವುದು, ಸದ್ದು ಬಾರದ ತಮಟೆಯನ್ನು ಬಡಿದಂತೆ. ಆದ್ದರಿಂದ ಕೋಲು ಹಿಡಿಯುವುದಕ್ಕೆ ಮುಂಚೆ ಆಟಗಾರರು ತಮ್ಮ ಎರಡು ಕಾಲುಗಳಿಗೂ, ಎರಡು ಗೆಜ್ಜೆ 'ರಗಳನ್ನು ಕಟ್ಟಿಕೊಳ್ಳುತ್ತಾರೆ. ಒಂದೊಂದು ಸರದಲ್ಲಿಯೂ ಸಾಮಾನ್ಯವಾಗಿ ಐವತ್ತು ಗೆಜ್ಜೆಗಳಿರುತ್ತವೆ. ಗೆಜ್ಜೆಗಳು ಸಾಧಾರಣವಾಗಿ ಒಂಟಿ ನೆಲಗಡಲೆಕಾಯಿ ಗಾತ್ರ ಅಥವಾ ದಪ್ಪ ಅವರೆಕಾಳು ಗಾತ್ರದಲ್ಲಿ ಇರುತ್ತವೆ.

**ದಮ್ಮಡಿ**

ಕೋಲು ಹುಯ್ಯುವಾಗ ಮಧ್ಯದಲ್ಲಿ ನಿಂತು ಯಾರಾದರೊಬ್ಬ ದಮ್ಮಡಿ ಬಾರಿಸುವುದು ಪದ್ಧತಿ. ದಮ್ಮಡಿಯನ್ನು ಕೋಲಾಟಗಾರರೆಲ್ಲರೂ ಬಾರಿಸಲು ಸಾಧ್ಯವಾದರೂ ಅಷ್ಟು ಕಲಾತ್ಮಕ ವಾಗಿರುವುದಿಲ್ಲ. ಕೋಲಾಟಗಾರರ ಒಂದು ಗುಂಪಿದ್ದರೆ ಆ ಗುಂಪಿನಲ್ಲಿ ಯಾರಾದರೊಬ್ಬ ದಮ್ಮಡಿ ಬಾರಿಸುವುದರಲ್ಲಿ ಹೆಚ್ಚು ಪರಿಣತಿಯನ್ನು ಪಡೆದುಕೊಂಡಿರುತ್ತಾರೆ. ಏಕೆಂದರೆ ತಾಳಕ್ಕೆ ತಕ್ಕಂತೆ ದಮ್ಮಡಿಯನ್ನು ಬಡಿಯುತ್ತ ತಲೆಯನ್ನು ಕೊಡವುತ್ತ ಕುಣಿಯುತ್ತಿರುತ್ತಾನೆ. ನಿಜಕ್ಕೂ ಹಾಗೆ ತಲೆಯನ್ನು ಕೊಡುವುದೇ ಒಂದು ಸೊಗಸು. ಅದೂ ಒಂದು ಕಲೆ.

ದಮ್ಮಡಿ ಬಡಿಯುವವನು ಉಳಿದ ಆಟಗಾರರಿಗಿಂತ ಹೆಚ್ಚು ಸ್ವತಂತ್ರ ತಾಳಕ್ಕೆ ತಕ್ಕಂತೆ ಬಡಿಯುವುದನ್ನು ಬಿಟ್ಟರೆ ಉಳಿದವರಂತೆ ಸಂಬಂಧಪಟ್ಟ ಆಳುಗಳಿಗೆ ಕೋಲು ಕೊಡುವುದಾಗಲಿ, ನಿಶ್ಚಿತವಾದ ಮನೆಗಳಿಗೆ ದಾಟುವುದಾಗಲಿ ಇರುವುದಿಲ್ಲ.

ಹತ್ತು ಅಂಗುಲಗಳ ಸುತ್ತಳತೆಯ ಮರದ ಸಾಧನವೊಂದಕ್ಕೆ ಉಡುವಿನ ಚರ್ಮವನ್ನು ಬಲವಾಗಿ ಬಿಗಿದು ಮಾಡಿದ ಒಂದು ಉಪಕರಣವೇ ದಮ್ಮಡಿ. ಉಡುವಿನ ಚರ್ಮದಿಂದ ಒಳ್ಳೆಯ ನಾದವು ಉಂಟಾಗುವುದರಿಂದ ದಮ್ಮಡಿಗೆ ಅದನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ. ದಮ್ಮಡಿಯ ಮರದ ಅಂಚಿನಲ್ಲಿ ಮೂರು ಕಡೆ ಗೆಜ್ಜೆಯ ನಾದ ಬರಲು ಅನುಕೂಲವಾಗುವಂತೆ ಎರಡೆರಡು ಲೋಹದ ಬಿಲ್ಲೆಗಳನ್ನು ತೂಗು ಹಾಕಿರುತ್ತಾರೆ. ದಮ್ಮಡಿಯನ್ನು ಹೆಗಲುಹೊತ್ತು ಬಡಿದಾಗ ಶಬ್ದ ಸ್ಪಷ್ಟವಾಗಿ ಕೇಳಿ ಬರುತ್ತದೆ. ಮಳೆಗಾಲದಲ್ಲಿ ಮತ್ತು ರಾತ್ರಿಯ ವೇಳೆಗಳಲ್ಲಿ ಶೀತದ ಕಾರಣದಿಂದಾಗಿ ಶಬ್ದವು ತನ್ನ ಮೂಲ ಶಕ್ತಿಗಿಂತ ಕಡಿಮೆಯಾಗುವುದುಂಟು. ಅಂತಹ ಸಮಯಗಳಲ್ಲಿ ಸ್ವಲ್ಪಮಟ್ಟಿಗೆ ಬೆಂಕಿಯಿಂದ ಕಾಯಿಸಿದರೆ ದಮ್ಮಡಿಯು ತನ್ನ ಮಾಮೂಲು ಸ್ಥಿತಿಯಲ್ಲಿ ಶಬ್ದವನ್ನುಂಟುಮಾಡುತ್ತದೆ.

**ತಾಳ**

ಕೋಲು ಹುಯ್ಯುವವರ ಮಧ್ಯೆ ಒಬ್ಬ ದಮ್ಮಡಿ ಬಾರಿಸುತ್ತಿದ್ದರೆ, ಮತ್ತೊಬ್ಬ ಎರಡು ಕೈಗಳಲ್ಲೂ ಎರಡು ತಾಳಗಳನ್ನು ಹಿಡಿದು 'ತಾಳ' ಹಾಕುತ್ತಿರುತ್ತಾನೆ. ಸ್ವಲ್ಪ ಹೆಚ್ಚು ಕಡಿಮೆ ದಮ್ಮಡಿ ಬಾರಿಸುವವನ ಕಾರ್ಯವೂ, ತಾಳ ಹಾಕುವವನು ಕುಣಿಯುವುದಿಲ್ಲ. ತಾಳಗಳು ಕಂಚುಲೋಹದಿಂದ ಮಾಡಿರುತ್ತವೆ.[೩೪]

ಕೋಲು ಪದಗಳಲ್ಲಿ ಛಂದೋ ವೈವಿಧ್ಯವಿರುವಂತೆ ವಿಷಯ ವೈವಿಧ್ಯವೂ ಇದ್ದು ಈ ಆಟ ಹಳ್ಳಿಯವರಿಗೆ ಮನರಂಜನೆ ಒದಗಿಸುವಂತೆಯೇ ಬೋಧಪ್ರದವೂ ಆಗುತ್ತದೆ. ಕೋಲಾಟದಲ್ಲಿ ಗೀತ ಸಾಹಿತ್ಯದ ಹಾಗೂ ಕುಣಿತದ ಸುಂದರ ಸಾಮರಸ್ಯವಿದ್ದು ಅದು ಜನಪ್ರಿಯವೆನಿಸಿದೆ.

ಕೋಲಾಟ ಆಡುವಾಗ ಕುಣಿಯುವ ಹಾಡು ಹೇಳಬೇಕಾಗಿದ್ದು ಹಾಡುಗಳು ದೀರ್ಘವಾಗಿರದೆ ಉತ್ತಮ. ಭಾವಗೀತೆಗಳ ರೂಪದಲ್ಲಿರುವ ಈ ಹಾಡುಗಳಲ್ಲಿ ಹಲವು ಬಗೆಯ ಛಂದಸ್ಸುಗಳು ಒಡಮೂಡಿವೆ. ಪ್ರತಿ ಹಾಡಿಗೂ ಅದರ ಗತಿಯನ್ನು ತಿಳಿಸುವ ಪಲ್ಲವಿಯಿರುತ್ತದೆ. ಅಂಶಗಣದ ಜನಪದ ಗೀತೆಗಳ ಹಿಗ್ಗು ಕುಗ್ಗುಗಳನ್ನು, ಕೋಲಾಟ ಹಾಡುಗಳಲ್ಲಿ ಕಾಣಬಹುದು. ಮೊದಲು ಕೋಲಾಟ ಹಾಡುಗಳನ್ನು ಪ್ರಾರ್ಥನೆಯೊಂದಿಗೆ ಪ್ರಾರಂಭಿಸುವ ಹಿಂದುಗಳ ಪರಂಪರೆಯಂತೆ ಕೋಲಾಟವನ್ನೂ ಬೆನವಣ್ಣನ ಅಥವಾ ಗಣನಾಯಕನ ಪ್ರಾರ್ಥನೆಯಿಂದಲೇ ಪ್ರಾರಂಭಿಸಲಾಗುತ್ತದೆ. ಸಾಮಾನ್ಯವಾಗಿ ಈ ಕಲೆಯು ಹಳ್ಳಿಯಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುತ್ತದೆ. ದಿನವಿಡೀ ಕೆಲಸ ಮಾಡಿ ಬಂದ ಯುವಕರು ರಾತ್ರಿಯಲ್ಲಿ ಊಟವಾದ ನಂತರ ಗುಡಿಯ ಮುಂದೆ ಅಥವಾ ಬೈಲು ಜಾಗದಲ್ಲಿ ಎಲ್ಲರೂ ಕೂಡಿ ಕೋಲಾಟ ಆಡುತ್ತಾರೆ. ಇದರಲ್ಲಿ ಉತ್ಸಾಹವಿರುವ ಮಧ್ಯಮ ವಯಸ್ಸಿನ ಯುವಕರು ಸೇರಿಕೊಂಡು ಹಾಡುತ್ತಾರೆ. ಹಳ್ಳಿಯಲ್ಲಿ ಇದೊಂದು ರಾತ್ರಿ ಮನರಂಜನೆ. ಹೆಣ್ಣುಮಕ್ಕಳು, ಸಣ್ಣಮಕ್ಕಳು, ಹಿರಿಯರು ಇದನ್ನು ನೋಡಿ ಆನಂದಿಸುತ್ತಾರೆ.

ಕೋಲಾಟದಲ್ಲಿ ಕನಿಷ್ಠ ಆರು ಜನರಿಂದ ಹಿಡಿದು ಹನ್ನೆರಡು ಜನರವರೆಗೆ ಆಟಗಾರರಿರುತ್ತಾರೆ. ಸಮ ಸಂಖ್ಯೆಯನ್ನೇ ಹೊಂದಿರುವರು. ಎಲ್ಲರೂ ಕೋಲನ್ನು ಹಿಡಿದುಕೊಂಡು ಹೆಜ್ಜೆ ಹಾಕುತ್ತಾರೆ. ಮೊದಲೊಬ್ಬ ಹಾಡನ್ನು ಕೇಳಿದರೆ ಹಿಂಬದಿಯಿಂದ ಉಳಿದವರು ಹಾಡುತ್ತಾರೆ. ಕೋಲಾಟದ ಆರು ಪದಗಳಲ್ಲಿ ಹಂಪಿ ಮತ್ತು ಆನೆಗೊಂದಿಯ ಉಲ್ಲೇಖಗಳಿವೆ.

### ಶರಣೆನ್ನಿರೋ

ಶರಣೆನ್ನಿರಣ್ಣಯ್ಯ ಶರಣೆನ್ನಿರೋ
ಹುಟ್ಟಿ ಬರುವ ಚಂದ್ರಾಗೆ ಶರಣೆನ್ನಿರೋ ಶರಣೆನ್ನಿ
ಹಂಪಿ ವಿರುಪಾಕ್ಷಗೆ ಶರಣೆನ್ನಿರೋ
ತಾಯಿ ದುರುಗಮ್ಮಗೆ ಶರಣೆನ್ನಿರೋ
ತಾಯಿ ಗಾಳಮ್ಮಗೆಶರಣೆನ್ನಿರೋ
ಕಲಿಸಿದ ಗುರುವಿಗೆ ಶರಣೆನ್ನಿರೋ
ಕೈಯೊಳಗಲ ಕಡ್ಡಿಗೆ ಶರಣೆನ್ನಿರೋ
ಕಾಲಗಳ ಗೆಜ್ಜೆಗೆ ಶರಣೆನ್ನಿರೋ
ತಂದೆ ತಾಯಿಗಳಿಗೆ ಶರಣೆನ್ನಿರೋ
ಸೋಮಾರ ಸ್ವಾಮಿಗೆ ಶರಣೆನ್ನಿರೋ
ವಿದ್ಯೆ ಸರಸ್ವತಿಗೆ ಶರಣೆನ್ನಿರೋ[೩೫]

ಹಾಡಿನಲ್ಲಿ ಹಂಪಿಯ ವಿರೂಪಾಕ್ಷನಿಗೆ ಶರಣು ಹೇಳುವ ವಿರೂಪಾಕ್ಷನೊಂದಿಗೆ ಜನರು ಗಾಳೆಮ್ಮ ಮತ್ತು ದುರುಗವ್ವ ಎಂಬರೆಡು ಗ್ರಾಮ ದೇವತೆಗಳನ್ನು ಸ್ಮರಿಸಿಕೊಂಡಿರುವುದು. ಈ ಹಾಡಿನಲ್ಲಿ ಕಂಡುಬರುತ್ತದೆ.

**ವಿರುಪಯ್ಯ ಲಿಂಗ**

ದಾಳಂಬರು ನೋಡಿ ನಗುತಿರುವ
ವಿರುಪಯ್ಯ ದಾಳಂಬರು
ಒಂದೇ ಕಂಬದಾಗ ಹದಿನಾರು ಕಂಬವು
ಕಂಬ ಕಂಬೆಲ್ಲ ಗೋಪುರವೋ ವಿರುಪಯ್ಯ ಲಿಂಗ
ಅಚ್ಚು ಕಟ್ಟಿದ ತೇರು
ನಿಚ್ಚಯ ಮಾಡಲಿಲ್ಲ
ಪಂಪಾವತಿ ಎಂಬ ಗೋಪುರವೋ ವಿರುಪಯ್ಯ ಲಿಂಗ
ಅಚ್ಚು ಅಚ್ಚು ಬೆಲ್ಲದಚ್ಚು
ಅಚ್ಚಿನ ಮ್ಯಾಲೊಂದು ಪಾರಿವಾಳ
ಮುಚ್ಚಿ ಮುಚ್ಚಿ ಕಣ್ಣ ತೆರವಾದೋ ವಿರುಪಯ್ಯ ಲಿಂಗ
ಆನೆಗೊಂದಿಯ ಮ್ಯಾಲೆ ಹಾಡ್ಯಾಳೆ ಡೊಂಬತಿ
ನೋಡ ಬಂದಣ್ಣ ಉಣವೋಳಕ್ಕಯ್ಯ
ವಿದ್ಯೆದಕ್ಕ ತದ್ದಿನಿತೊಂ

(ನಾರಾಯಣ ಗಿರಿಯಪ್ಪ, ೨೦೦೭:೩೩)

ಈ ಹಾಡಿನಲ್ಲಿ ವಿರೂಪಾಕ್ಷ ದೇವಸ್ಥಾನದ ವಾಸ್ತುವಿನ ವರ್ಣನೆಯಿದೆ. 'ಒಂದೇ ಕಂಬದಾಗ ಹದಿನಾರು ಕಂಬವು' 'ಕಂಬ ಕಂಬೆಲ್ಲ ಗೋಪುರ' ಎಂಬ ಮಾತುಗಳು ವಿಜಯನಗರ ವಾಸ್ತುವಿಗೆ ಜನರ ಪ್ರತಿಕ್ರಿಯೆಯಾಗಿದೆ. ಕಲ್ಲನ್ನು ಒಂದರ ಮೇಲೊಂದು ಸೇರಿಸಿಟ್ಟಿದ್ದನ್ನು 'ಬೆಲ್ಲದಚ್ಚು' ಎಂದು ಕರೆದ ಅವರು, ಗೋಪುರದೊಳಗೆ ವಾಸ ಮಾಡುವ ಪಾರಿವಾಳಗಳನ್ನು ಗಮನಿಸಿಕೊಂಡಿದ್ದಾರೆ.

ಈ ಹಾಡಿನ ಕೊನೆಯ ಮೂರು ಸಾಲುಗಳಲ್ಲಿ ಆನೆಗೊಂದಿಯಲ್ಲಿ ಹಾಡಿ ನರ್ತಿಸುವ ಡೊಂಬತಿಯರ ಬಗ್ಗೆ ವಿವರವಿದೆ. ವಿಜಯನಗರ ಸಂಸ್ಥಾನದಲ್ಲಿ ಹಾಡಿ ನರ್ತಿಸುತ್ತಿದ್ದ ಡೊಂಬತಿಯರ ಬಗೆಗೆ ಸೀವೆಲ್ ಕೂಡಾ ವಿವರ ನೀಡಿದ್ದಾರೆ. ಈ ಕೋಲಾಟ ಹಾಡು ವಿರುಪಯ್ಯ ಲಿಂಗದ ಕುರಿತು ತಿಳಿಸಿಕೊಡುತ್ತದೆ.

**ಕೋಲು ಕೋಲೆನ್ನ ಕೋಲೆ**

ರನ್ನದ ಕೋಲು ಕೋಲ
ಕೋಲು ಕೋಲೆನ್ನಿರೆ ಶಂಭು ಶಂಕರಗೆ
ಕೋಲು ಕೋಲೆನ್ನಿರೆ
ಕೋಲು ಕೋಲ ಶ್ರೀ ಮುದ್ದು ಕೋಲು ಕೋಲ
ಕೋಲು ಕೋಲಿನ ರನ್ನದ ಕೋಲು ಕೋಲಿನ
ಕೋಲವಾಡಿರಿ ಶಿವನ ಸ್ಮರಿಸಬನ್ನಿರಿ

ಕೋಲು ಎನ್ನ ಕೋಲು ಒಳ್ಳೆ ಕೋಲು ಎನ್ನ ಕೋಲು
ಕೋಲು ಕಲ್ಯಾಣದ ಬಸವನ । ಕೋಲು ಎನ್ನ ಕೋಲು
ಕೋಲು ಕೋಲೆನ್ನ ಕೋಲ । ಕೋಲು ಕೋಲೆನ್ನ ಕೋಲು
ಕೋಲು ಶರಣರ ಸೂಚನೆ ಕೋಲ
ರನ್ನದ ಕೋಲಾನೆ ಕೋಲೆನ್ನ ಕೋಲೆ
ಕೋಲು ಕೋಲೆನ್ನ ಹೂವಿನ ಕೋಲ ಕೋಲ
ಎನ್ನಸ್ವಾಮಿ ಪಾಲಿಸೋ ದಂಡನಾಯಕ ಬಸವನೆ
ಕೋಲು ಕೋಲೆನ್ನ ಕೋಲ । ಕೋಲು ಕೋಲೆನ್ನ ಕೋಲ
ಕೋಲು ಮುತ್ತಿನ ಸಿರಿರಂಗಿ ಕೋಲ
ಏ ಹೂವಿನ ಕೋಲ ಕೋಲ
ಕೋಲೆನ್ನ ಕೋಲ
ಕೋಲು ಕೋಲೆನ್ನ ಕೋಲ
ಕೋಲು ಮುತ್ತಿನ ಕೋಲ
ಕೋಲು ಕೋಲ ಹೂವಿನ ಕೋಲ
ಕೋಲು ಕೋಲ ಚಿನ್ನದ ಕೋಲ ಕೋಲ
ಕೋಲು ಕೋಲೆಂಬುದು ಕೋಲಿನ ಮ್ಯಾಲಿರುವ
ಕೂರಿಗಿ ಬಿತ್ತೊಂದು ಹರದಾರಿ । ಸುವ್ವಕ್ಕನಾರಿ
ಕೋಲು ಕೋಲೆನ್ನ ಮುತ್ತಿನ ಕೋಲುಕೋಲೆನ್ನ
ಕೋಲನಾಡಿರಿ ಚಂದ್ರಜಿನರ ಪಾಡಿರಿ.[೩೬]

ಈ ಹಾಡಿನಲ್ಲಿ ಹನುಮಂತನ ಸಾಹಸದ ಬಗ್ಗೆ ವರ್ಣನೆಯಿದೆ. ಹಾಡಿನಲ್ಲಿ ಬರುವ 'ಉದ್ದಾನೆ ಹನುಮಂತ'ನು ಎಲ್ಲಿದ್ದಾನೆ? ಅವನಿಗೆ ಗುಡಿ ಏನಾದರೂ ಇದೆಯೋ ಅಂತ ಕೇಳಿದರೆ ಜನಪದರು ಈಗಿನ ಉದ್ದಾನ ವೀರಭದ್ರನ ಗುಡಿಯನ್ನೇ 'ಉದ್ದಾನ ಹನುಮಂತನ ದೇವಸ್ಥಾನ' ಎಂದು ತೋರಿಸುತ್ತಾರೆ. ಜನರ ಪ್ರಕಾರ ಮೊದಲು ಅದು ಹನುಮಂತನ ಗುಡಿಯಂತೆ. ಅಲ್ಲಿದ್ದ ಹನುಮಂತ ದೇವರನ್ನು ಹೊರಗೆ ಹಾಕಿ ಅನಂತರ ವೀರಭದ್ರನನ್ನು ನಿಲ್ಲಿಸಿದ್ದಾರಂತೆ.

### ಕೋಲಾಟದ ಪದ ಅಂದಕ್ಕಾನೆಗೊಂದಿ

ಕೋಲೇ ಕೋಲೇ ಕೋಲು ಕೋಲಣ್ಣ ಕೋಲೆ
ಕೋಲೇ ಕೋಲೇ ಕೋಲಣ್ಣ ಕೋಲೆ
ಉದ್ದಾಗಿರಿಯ ಮೇಲೆ ಉದಾಯಾದ ಮರನುಟ್ಟಿ
ವಿಜಯನಗರಕ್ಕೆ ನೆರಳಾದೊ ಕೋಲೆ
ವಿಜಯನಗರಕ್ಕೆ ನೆರಳಾದ ಬಂಕಾಪುರ
ಗುಡಿಯಾ ಬಾಗಿಲಿಗೆ ಕದವಾದ ಕೋಲೆ
ಅಂದಕ್ಕಾನೆಗೊಂದಿ ಚಂದಕ್ಕೆ ವಿಜಯನಗರ
ಹೊಂದಿಸಿಕಟ್ಟಿಸಿದ ಹೊಸ ಪೇಟೆ ಊರಮುಂದೆ

ಅಂದುಳ್ಳ ಕೋಳ ಹೊಯ್ಯಸ್ಯಾರು ಕೋಲೆ
ಅಂದಕ್ಕಾನೆಗೊಂದಿ ಚಂದಕ್ಕೆ ವಿಜಯನಗರ
ಅಯ್ದಾಗಿ ಕಟ್ಟಿಸಿದ ಹೊಸ ಪೇಟೆ ಊರ್ಮುಂದೆ
ಬಾಯುಳ್ಳ ಕೋಲು ಹೊಯ್ಯುಸ್ಯಾರು ಕೋಲೆ
ಮಚ್ಚರಸಿ ಬಿರವೋ ಮಲವಾರು ಕೋಲೆ ಮರೆತು
ಕೂತ್ಯಾವಾಗ ನೆತ್ತಿಮ್ಯಾಗಳ ಗಜಸಿಂಹನ ಕೋಟೆ ವಿಶ್ಲೇಷಣೆ

(ನಾರಾಯಣ ಗಿರಿಯಪ್ಪ, ೨೦೦೭:೩೩)

ಈ ಹಾಡಿನಲ್ಲಿ ಅಂದಕ್ಕೆ 'ಆನೆಗೊಂದಿ ಚಂದಕ್ಕೆ ವಿಜಯನಗರ' ಎಂಬ ಗಾದೆಯಂಥ ಹೇಳಿಕೆಯಿದೆ. ಹೊಸಪೇಟೆ ಎಂಬ ನಗರವನ್ನು ಹೊಸದಾಗಿ ಕಟ್ಟಿಸಲಾಗಿದೆ ಎಂಬ ಧ್ವನಿಯೂ ಹಾಡಿನಲ್ಲಿದೆ. ಹೀಗೆ ಕೋಲಾಟದ ಹಾಡುಗಳಲ್ಲಿ ಹಂಪಿಯ ಕೆಲವು ಮುಖಗಳು ಅನಾವರಣ ಗೊಂಡಿರುವುದು ಜನಪದ ಹಾಡುಗಳಲ್ಲಿ ಕಂಡುಬರುತ್ತವೆ.

**ಬನ್ನಿ ಹಬ್ಬದಲ್ಲಿ ಹಾಡುವಂತಹ ಹಾಡು**

ಬನ್ನಿ ಮುಡಿಯೋಣು ಬಾರ ಕೋಲು ಕೋಲ
ಚಿನ್ನ ತರುವೋಣು ಬಾರ ಕೋಲು ಕೋಲ
ಊರ ಆಗಸಿಯ ದಾಟಿ ಮಲ್ಲ ಗುಡಿಯನು ಸೇರಿ
ಕಾಡ ಸಂಪತ್ತು ತರಬನ್ನಿ ಕೋಲು ಕೋಲ
ರಂಗನಾಥಗೆ ಬನ್ನಿ ದುರ್ಗಾ ಮಾತೆಗೆ ಬನ್ನಿ
ಗಂಗಾದೇವಿಗೆ ಸಿರಿಬನ್ನಿ ಕೋಲು ಕೋಲ
ಬೆಳೆದ ಬೆಳಸಿಗೆ ಬಾಳಿಗೆ ಬನ್ನಿ ಭೂಮಿತಾಯಿಗೆ ಬನ್ನಿ
ನಾಡ ಸಂಪತ್ತು ಕೋಲು ಕೋಲ
ಅರಸರ ಅಂಗಳಕ ಸರಸರಂಗ ಹೊಯ್ದು
ಹೊರಸಿ ತಂದಾರ ಸಿರಿಬನ್ನಿ ಕೋಲು ಕೋಲ
ದೇವ ದೇವರ ಬನ್ನಿ ದೈವ ದೈವದ ಬನ್ನಿ
ನಾವು ಮುಡಿವದು ನಮ ಬನ್ನಿ ಕೋಲು ಕೋಲ
ಚಿನ್ನದ ಕೈಕಡಗ ಚನ್ನೇರು ಇಟಗೊಂಡು
ಚಿನ್ನದಾಭರಣ ನಡಬಾಗಿ ಕೋಲು ಕೋಲ
ಗೆಜ್ಜೆ ಗೆಜ್ಜೆ ಹಾಕಿ ಗುಜ್ಜೇರು ನಾರೇರು ಕುಣಿದಾರ
ವಜ್ಜರ ವಡ್ಯಾಣ ಫಲ್ ಫಲ್ ಕೋಲು ಕೋಲ
ನಾವು ಕುಣಿಯಾಣ ಬನ್ನಿ ಹ್ಯಾಂವ ಮರಿಯಾಣ ಬನ್ನಿ
ಜೀವ ಒಂದಾಗಿ ಇರಬನ್ನಿ ಕೋಲು ಕೋಲ
ಇದು ಮುಡಿಯುವ ಬನ್ನಿ ಮುಂದೆ ಮಂಗ ಹೊನ್ನಾಗಿ
ಕುಂದಣದಾರೂತಿ ಬೆಳಗುದಕ ಕೋಲು ಕೋಲ[೩೭]

ಈ ಹಾಡಿನಲ್ಲಿ ಊರ ಅಗಸಿ ದಾಟಿ ಮಲ್ಲ ದೇವರ ಗುಡಿಗೆ ಹೋಗಿ ಬನ್ನಿ ಮುಡಿಯುವ, ಗ್ರಾಮದೈವ ಅರಸಂಗ ರಂಗನಾಥನಿಗೆ, ಗಂಗಾದೇವಿಗೆ ಬನ್ನಿಕೊಟ್ಟು ಬನ್ನಿ ಹಬ್ಬದ ಸಂಭ್ರಮದಾಚರಣೆ ಮಾಡಿಕೊಳ್ಳುವ ಸಂದರ್ಭದಲ್ಲಿ ಎಂದು ಹಾಡುವರು.

**ಹನುಮನ ಸಾಹಸ ಕೋಲಾಟದ ಪದ**

ತಾನಾನು ತಂದು ನಾನಾನೋ ಸೈ
ತಾನಾನು ತಂದು ನಾನಾನೋ
ಅಡವೀಯ ಗಂಜನ ದೇವಿ ಗಿಡಗಾನ ಹಡೆದಾಳು
ತೊಡೆಯ ತೊಳೆಯೋಕೆ ನೀರಿಲ್ಲ ಹನುಮಣ್ಣ
ಸುತ್ತಲ ಸಮುದ್ರ ತಿರಿವ್ಯಾನೊ
ಕಟ್ಟಾ ಗಂಜನದೇವಿ ಪುತ್ರನ ಹಡೆದಾಳು
ಹೊಟ್ಟೆ ತೊಳಯೋಕೆ ನೀರಿಲ್ಲ ಹನುಮಂತ
ಸುತ್ತೇಳು ಸಮುದ್ರ ತಿರುವ್ಯಾನು
ಹುಟ್ಟುಗಲ್ಲಿನ ಮ್ಯಾಲೆ ಹುಟ್ಟಿದಂಗೈದಾನೆ
ದಿಟ್ಟನಾಮದ ಹನುಮಣ್ಣ ಲಂಕೆಯ
ಸುಟ್ಟು ಬಂದೂರ ಒರಗ್ಯಾನೊ
ಕರಿಯ ಬಂಡಿಯ ಮಮಾಲೆ ಮದರಂಗ ಹೊಯ್ದಾನೆ
ಹರಿಯ ನಾಮದ ಹನುಮಣ್ಣ ಲಂಕೆಯ
ಉರಿಸಿ ಬಂದೂರ ಒರಗ್ಯಾನೋ
ಕ್ವಾಡಂಗ ನಿವನೆಂದು ಕೇಡು ನುಡಿಯಲ್ಲಿ ಬೇಡಿ
ನೋಡಿರೇನವ್ವ ಅವನ ಸಾಹಸ ಹಂಪಿಯ
ಕ್ವಾಟೀಯ ಕಿತ್ತು ಉರಿದಾನೋ
ಇದು ಮಂಗನೆಂದು ಕುಂದು ನುಡಿಯುಬೇಡಿ
ನೋಡಿರೇನವ್ವ ಅವನ ಸಾಹಸ ಹಂಪಿಯ
ಗುಡಿಯನ್ನೇ ಕಿತ್ತುವೊಗೆದಾನು

(ನಾರಾಯಣ ಗಿರಿಯಪ್ಪ, ೨೦೦೭:೩೫)

**ಗವಿಸಿದ್ಧನ ಮಠದ ಕಟ್ಟಡದ ರಚನೆ ಬಗ್ಗೆ ನೋಡಬಹುದು.**

ಹಳ್ಳಿಯ ಊರಿಗೆ ಕೊಳ್ಳಿರಿವೊಂದ ಇಳೇವೋ
ಕೋಲ ಮುತ್ತಿನ ಕೋಲ ।
ತೆಳ್ಳನ ಕಲ್ಲ ಬರಲೆಂದೆ ಗವಿಸಿದನ
ಒಳ್ಳೆಯವರ ಮಠದ ಮುಗಿಲೆಂದೆ ಕೋಲ
ಮುತ್ತಿನ ಕೋಲ ॥

ಪಟ್ಟಣದೂರಿಗೆ ಕೊಟ್ಟೀರೊಂದ ಇಳೇವೋ
ಬಟ್ಟಿನ ಕಲ್ಲ ಬರಲೆಂದೆ ಕೋಲ ಮುತ್ತಿನ ಕೋಲ।
ಬಟ್ಟಿನ ಕಲ್ಲ ಬರಲೆಂದೆ ಗವಿಸಿದ್ದನ ದಿಟವ
ನಿನ್ನ ಮಠದ ಮುಗಿಲೆಂದೆ ಕೋಲ ಮುತ್ತೀನ ಕೋಲ॥

ಅಪ್ಪ ಗವಿಸಿದ್ಧನ ನಿನ್ನ ಮಠವನ ಕಟ್ಯಾರ
ಮಾನೆ ಉಣ್ಣೋ ಅಂತಾರ ರೈತರ ಕೋಲ ಮುತ್ತಿನ ಕೋಲ।
ಅಣ್ಣ ಗವಿಸಿದ್ದನ ನಿನ್ನ ಮಠವನ ಕಟ್ಯಾರ ಮಾನೆ
ಉಣ್ಣೋ ಅಂತಾರ ॥

ಅಣ್ಣಾ ನಿನ್ನ ಮಠಕ ಇನ್ನೇನ ಸಿಂಗಾರ
ಸುಣ್ಣನ ತುಂಬ್ಯಾರ ಗೆರಿ ಗೆರಿ ಗೆರಿಗೆ ಕೋಲ ಮುತ್ತಿನ ಕೋಲ।
ಸುಣ್ಣವ ತುಂಬ್ಯಾರ ಗೆರಿಗೆರ ಮ್ಯಾಗಳ
ಹೊನ್ನ ತುಂಬ್ಯಾರ ಕಳಸಕ ಕೋಲ ಮುತ್ತಿನ ಕೋಲ॥

ಅಪ್ಪನಿನ ಮಠಕ ಮತ್ತೇನ ಸಿಂಗಾರ
ಬಣ್ಣ ತುಂಬ್ಯಾರೋ ಗೆರೆಗೆರಿಗೆ ಕೋಲ ಮುತ್ತಿನ ಕೋಲ।
ಬಣ್ಣ ತುಂಬ್ಯಾರೋ ಗೆರಿಗೆರಿಗೆ ಮ್ಯಾಗಳ
ಮುತ್ತ ತುಂಬ್ಯಾರ ಕಳಸದ ಕೋಲ ಮುತ್ತೀನ ಕೋಲ॥

ಅಪ್ಪ ನಿನ್ನ ಮಠದಾಗ ಮತ್ತೇನ ಸಿಂಗಾರ
ತುಪ್ಪ ಹಾಲದಲ್ಲಿ ದಾಸೋಹ ಕೋಲ ಮುತ್ತಿನ ಕೋಲ
ತುಪ್ಪ ಹಾಲಿನಲಿ ದಾಸೋಹ ನಡಿಯಹೋತ್ತೀಗೆ
ಅಪ್ಪನಿನ ಗಂಟೆ ಡಣವಿಲ್ಲಂದ ಕೋಲ ಮುತ್ತಿನ ಕೋಲ।
ಅಣ್ಣ ನಿನ್ನ ಮಠದಾಗ ಇನ್ನೇನ ಸಿಂಗಾರ
ಹಣ್ಣ ಹಾಲಿನಲಿ ದಾಸೋಹ ಕೋಲ ಮುತ್ತಿನ ಕೋಲ॥

ಉಂಡಾರ ಉಟ್ಟಾರ ಮುಂಗೈಯತೊಳದಾರ
ಮಂಡಲ ಬಿಟ್ಟು ಇಳಿದಾರ ಕೋಲ ಮುತ್ತೀನ ಕೋಲ
ಮಂಡಲ ಬಿಟ್ಟು ಇಳಿದಾರೋ ಬಕುತರ
ತೇರಿಗೆ ಸನ್ನಿ ಹಾಕುತಾರ ಕೋಲ ಮುತ್ತೀನ ಕೋಲ ।
ಸಾವಿರ ಮಂದಿಕೂಡ ಸನ್ನಿಯ ಹಾಕಿದರೆ
ಅಣ್ಣ ನಿನ್ನ ತೇರ ಝುಳಕ್ಕಿಲ್ಲ ಕೋಲ ಮುತ್ತೀನ ಕೋಲ॥

ಅಣ್ಣ ನಿನ್ನ ತೇರ ಝುಳಕ್ಕಿಲ್ಲ ಆಕಾಸದ
ದೇವಿ ತಾ ಬಂದು ಹೇರ್‍ಯಾಳ ಕೋಲ ಮುತ್ತೀನ ಕೋಲ
ಆಕಾಸದ ದೇವಿ ತಾ ಬಂದು ಹೇರತಿಗೆ ನಿಂತಂಥ ತೇರ
ಡಣಲ್ ಎಂದು ಕೋಲ ಮುತ್ತೀನ ಕೋಲ ।

ನಿಂತಂಥ ತೇರು ಡಮಲ್ಲೆಂದು ಸಾಗುತುತೆ
ಬಂದಂತ ಪರಸಿ ಬಯಲಾಗಿ ಕೋಲ ಮುತ್ತೀನ ಕೋಲ ॥೨೮

ಈ ಮೇಲಿನ ಪದ್ಯವನ್ನು ವಿಶ್ಲೇಷಿಸಿದಾಗ ತಿಳಿಯುವ ಸಂಗತಿ ಎಂದರೆ ಕೊಪ್ಪಳ ಗವಿಸಿದ್ದನ ಮಠವನ್ನು ಒಳ್ಳೆ ಕಲ್ಲುಗಳಿಂದ ಕಟ್ಟಲು ಹಳ್ಳಿ ಜನರು ಕೂಡಿಕೊಂಡು ಕಟ್ಟಡ ಕಟ್ಟುವ ಭೋವಿ ಜನಾಂಗದವರಿಗೆ ವೀಳ್ಯ ಕೊಟ್ಟರಂತೆ. ಅದರಂತೆ ಇದ್ದಲ್ಲಿಂದ ದೊಡ್ಡ ದೊಡ್ಡ ಬಂಡೆಗಳನ್ನು ತರಿಸಿ ಗವಿಮಠವನ್ನು ಕಟ್ಟಿಸಿದ ಬಗ್ಗೆ ತಿಳಿಯುತ್ತದೆ. ಗವಿಮಠವನ್ನು ಕಟ್ಟಿದವರಿಗೆ ಕೂಲಿ, ಕಂಬಳಿಯನ್ನು ಹಣದ ರೂಪದಲ್ಲಿ ಕೊಡದೇ ರೈತರು ದಾನವಾಗಿ ಕೊಟ್ಟ ಹೊಲವನ್ನೇ ಅವರಿಗೆ ಉಡುಗೊರೆಯಾಗಿ ಕೊಟ್ಟ ಬಗ್ಗೆ ತಿಳಿಯುತ್ತದೆ. ಅದಕ್ಕೆ ಇಂದಿಗೂ 'ಮಾನೇದ ಹೊಲ' ಎನ್ನುತ್ತಾರೆ.

ಗವಿಮಠದ ಮೇಲೆ ಗೋಡೆಗಳಿಗೆ ಸುಣ್ಣ ಬಣ್ಣವನ್ನು ಹಚ್ಚಿ ಮೇಲೆ ಬಂಗಾರದ ಕಳಸವನ್ನು ಇಡಿಸಿದ್ದಾರೆ. ಅದಕ್ಕೆ ಮುತ್ತಿನ ಸರ ಹಾಕಿದ್ದಾರೆ. ಇಂಥ ಭವ್ಯವಾದ ನಿನ್ನ ಮಠದಲ್ಲಿ ಪ್ರತಿದಿನ ತುಪ್ಪ, ಹಣ್ಣು, ಹಾಲಿನ ದಾಸೋಹ ನಡೆಯುತ್ತದೆ. ಸಾವಿರಾರು ಜನರು ಪ್ರಸಾದ ಪಡೆದು ದೇವರ ದರ್ಶನ ಮಾಡಿ ಢಣ ಢಣ ಗಂಟೆ ಬಾರಿಸಿ ಮಠದಿಂದ ಕೆಳಗಿಳಿದು ಜಾತ್ರಾ ತೇರನ್ನು ಎಳೆಯಲು ಬರುತ್ತಾರೆ. ತೇರು ಭಾರವಾದಾಗ ಗಾಲಿಗಳಿಗೆ ಸನ್ನೆ ಹಾಕಿ ಹಾಕಿ ಎಳೆಯುವ ದೃಶ್ಯ, ಆಗ ತೇರು ಏನೂ ಝುಳಕದೇ ಅಲುಗಾಡದೆ ಸರಳವಾಗಿ ಎಳೆಯದಿದ್ದಾಗ ದೇವರನ್ನು ಮೊರೆಹೋಗುವ ಭಕ್ತರ ಮನಸ್ಸಿನಂತೆ ಆಕಾಶದಿಂದ ದೈವಿಶಕ್ತಿ ತೇರಿನಲ್ಲಿ ಕುಳಿತ್ತಿದ್ದಾಳೆ. ನಿಂತ ತೇರು ಸರಳವಾಗಿ ಆ ಕಡೆ ಈ ಕಡೆ ಒನಪು ಮಾಡುತ್ತ, ಬಾಗುತ್ತ, ಬಳಕುತ್ತ, ಢಣ ಢಣ ಗಂಟೆಗಳ ನಿನಾದ ಮಾಡುತ್ತ ಮುಂದೆ ಸಾಗಿದಾಕ್ಷಣ ಹರ್ಷದಿಂದ ಕೂಡಿದ ಜನರು ಪರಸಿ ಚದುರಿ ಹೊರಟರು ಎಂದು ಹೇಳುತ್ತ ಸಂಕ್ಷಿಪ್ತವಾಗಿ ಗವಿಮಠವನ್ನು ಕಟ್ಟುವಲ್ಲಿಂದ ಮಠದ ಶೃಂಗಾರ, ದಾಸೋಹ, ಜಾತ್ರೆ, ತೇರು ಮುಂತಾಗಿ ಇಡಿ ಸಂಸ್ಕೃತಿಯನ್ನೇ ನಿರ್ಮಿಸಿದ ಜನಪದರು ಎಷ್ಟು ಜಾಣರೆಂಬುದನ್ನು ನಾವು ಕಾಣಬಹುದು.

**೪.೫. ಗೀಗೀ ಪದಗಳು**

ಸಾಂಸ್ಕೃತಿಕ ಅಧ್ಯಯನದಲ್ಲಿ ಗೀಗೀ ಲಾವಣಿಗಳಿಗೆ ಜನಪದ ಸಾಹಿತ್ಯದಲ್ಲಿ ಅಗ್ರಸ್ಥಾನವಿದೆ. ಪ್ರಾಚೀನ ಕಾಲದಿಂದಲೂ ಬದುಕಿಕೊಂಡು ಬಂದ ಈ ಸಾಹಿತ್ಯದ ಪ್ರಕಾರ ಸಂಸ್ಕೃತಿಯ ಗುಣಮೌಲ್ಯಗಳನ್ನು ತನ್ನ ಅಂತರಾಳದಲ್ಲಿ ಜೀವಂತವಾಗಿ ಸೆರೆ ಹಿಡಿದುಕೊಂಡು ಬಂದಿದೆ. ಗ್ರಾಮೀಣ ಸಂಸ್ಕೃತಿಯ ಸುಮನ ಇವುಗಳ ಅಂತರಂಗದಿಂದ ಹೊರಸೂಸುತ್ತಿದೆ. ಜನಜೀವನದ ಸೂಕ್ಷ್ಮ ಪದರುಗಳನ್ನು ಇವು ಹಿಂಜಿ ಹಿಂಜಿ ನೋಡಿವೆ.

ಜನಪದರು ಇವುಗಳ ಮೂಲಕ ತಮ್ಮ ಬೌದ್ಧಿಕ ಬೆಳವಣಿಗೆಯ ಜೊತೆಗೆ ಚೇತನ ಶಕ್ತಿಯನ್ನೂ ಪಡೆದುಕೊಂಡಿದ್ದಾರೆ. ಸಾವಿರಾರು ಜನರನ್ನು ಒಂದೆಡೆ ಕೂಡಿಸಿ, ತಣಿಸಿ ಮಂತ್ರಮುಗ್ಧರನ್ನಾಗಿ ಮಾಡುವ ಸುಂದರ ಜನಪದ ಸಂಗೀತ ಕಲೆಯೂ ಕಥನಗೀತವೂ ಇವಾಗಿವೆ.

ಜನತೆಯ ತೀರ ಹತ್ತಿರದ, ವಾಸ್ತವಿಕ ಬದುಕಿನ ನಿತ್ಯ ಸತ್ಯ ದೃಷ್ಟಾಂತಗಳೊಂದಿಗೆ ಈ ಸಂಪ್ರದಾಯದ ಹಾಡುಗಳಲ್ಲಿಯ ಲಾವಣಿಗಳು ರಚನೆಗೊಂಡಿವೆ. ಜನಪದ ಜೀವನದ ವಿವಿಧ ಮುಖಗಳ ದರ್ಶನ ಇಲ್ಲಿ ಚಿತ್ರಿತವಾಗಿದೆ. ಜನಪ್ರಿಯ ಸಾಹಿತ್ಯವೆನಿಸಿ ಸರ್ವರಿಗೂ ಅಚ್ಚುಮೆಚ್ಚಿನದಾಗಿರುವ

ಗೀಗೀ ಲಾವಣಿ ಹಾಡುಗಳು ಈಗಲೂ ಊರದೇವರ ಜಾತ್ರೆ, ಹಬ್ಬ, ಹರಿದಿನ ಮುಂತಾದ ವಿಶೇಷ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಮೇಳಗಳು ಬರದ ಹೊರತು ಜಾತ್ರೆಗಳೇ ನಡೆಯುತ್ತಿರಲಿಲ್ಲ ಎನ್ನುವುದು ಇವುಗಳ ಜನಪ್ರಿಯತೆಗೆ ನಿದರ್ಶನವೆನಿಸಿದೆ. ಊರವರೆಲ್ಲ ಸೇರಿ ಹಣ ಕೊಟ್ಟು ಹಾಡುಗಾರರನ್ನು ಕರೆಸಿ ಹಾಡು ಹೇಳುತ್ತ ಆನಂದ ಜನಪದ ಕಲೆಗಳು ಜನಪದರ ಬದುಕಿನೊಂದಿಗೆ ಬೆಳೆದುಕೊಂಡು ಬಂದಿವೆ. ಜನಪದರು ತಮ್ಮ ಮನರಂಜನೆಯ ಸಲುವಾಗಿ ಮತ್ತು ದೇವರ ಆರಾಧನೆ ಮತ್ತು ಆಚರಣೆಗಳಲ್ಲಿ ಈ ಕಲೆಗಳನ್ನು ಬಳಸಿದರು ಮತ್ತು ಜನಪದ ಕಲೆಗಳನ್ನು ವೃತ್ತಿಯನ್ನಾಗಿಸಿ ಜೀವನ ನಿರ್ವಹಣೆ ಮಾಡುತ್ತಿರುವುದನ್ನು ನೋಡಬಹುದಾಗಿದೆ.

ಕೊಪ್ಪಳ ಜಿಲ್ಲೆಯಲ್ಲಿ ಈ ತೆರನಾಗಿ ಜನಪದ ಕಲೆಗಳು ಹುಟ್ಟಿಕೊಂಡಿದ್ದು, ಪ್ರತಿಯೊಂದು ಗ್ರಾಮಗಳಲ್ಲಿಯೂ ಜನಪದ ಕಲೆಗಳನ್ನು ಗುರುತಿಸಬಹುದಾಗಿದೆ. ಜನಪದ ಕಲೆಗಳು ವಿಶೇಷ ಹಬ್ಬ ಮತ್ತು ಜಾತ್ರೆ ಉತ್ಸವಗಳಲ್ಲಿ ಪ್ರದರ್ಶನಗೊಳ್ಳುವವು, ಆಚರಿಸಲ್ಪಡುವವು ಮತ್ತು ಮನರಂಜನೆಯ ಸಲುವಾಗಿಯೂ ಕೂಡ ಪ್ರದರ್ಶನಗೊಳ್ಳುತ್ತವೆ. ಐತಿಹಾಸಿಕ ಪ್ರಸಿದ್ಧಿಯ ಹಂಪಿ ವಿಜಯನಗರವು ಗಂಗಾವತಿ ಸಮೀಪವಿದ್ದು ವಿಜಯನಗರದ ವೈಭವವನ್ನು ಪ್ರತಿಬಿಂಬಿಸುವ ಹಂಪಿ ಉತ್ಸವದಲ್ಲಿ ಕರ್ನಾಟಕದ ಮತ್ತು ದೇಶದ ಹಲವಾರು ಜನಪದ ಕಲೆಗಳು ಪ್ರದರ್ಶನಗೊಂಡಿರುವುದನ್ನು ಕಾಣಬಹುದಾಗಿದೆ. ಗಂಗಾವತಿ ತಾಲೂಕಿನ ಆನೆಗುಂದಿಯಲ್ಲಿನ ಆನೆಗುಂದಿ ಉತ್ಸವ ನಡೆದಾಗಲು ಕೂಡ ಅನೇಕ ಜನಪದ ಕಲೆಗಳು ಪ್ರದರ್ಶನಗೊಂಡಿರುವುದನ್ನು ಗುರುತಿಸಬಹುದಾಗಿದೆ.

ಸಂಪ್ರದಾಯಗಳಿಲ್ಲದ ಸಮಾಜವಿಲ್ಲ, ಸಂಸ್ಕೃತಿಯಿಲ್ಲ. ಅವು ಮಾನವನ ಬದುಕಿನ ಉದ್ದಗಲಕ್ಕೂ ಹರಡಿಕೊಂಡಿವೆ. ವಿದ್ಯಾವಂತರಿರಲಿ, ಅವಿದ್ಯಾವಂತರಿರಲಿ ಈ ಸಂಪ್ರದಾಯಗಳ ಹಿಡಿತದಿಂದ ಪಾರಾಗಲು ಸಾಧ್ಯವಿಲ್ಲ. ಅಂದರೆ ಪರಂಪರೆಯನ್ನು ಗೌರವಿಸುವ, ಪರಂಪರಾಗತ ಮೌಲ್ಯಗಳನ್ನು ಉಳಿಸಿಕೊಂಡಿರುವ ಮಾನವ ಸಮಾಜಗಳಲ್ಲಿ ಈ ಸಂಪ್ರದಾಯಗಳ ಪ್ರಭಾವ ಎಷ್ಟೆಂಬುದರ ಅರಿವು ಮೂಡುತ್ತದೆ. ಸಂಪ್ರದಾಯಗಳೆಂದರೆ ಒಂದು ಜನಸಮೂಹದ ಸಂಸ್ಕೃತಿ. ಭದ್ರ ಬುನಾದಿಯ ಮೇಲೆ ರೂಪಿತಗೊಂಡು ಪರಂಪರಾಗತವಾಗಿ ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಮಾಜದಲ್ಲಿ ಮುಂದುವರಿದ ವಿಶಿಷ್ಟ ವಿಧಿ, ಉಪಾಸನೆ ಮತ್ತು ಪದ್ಧತಿಗಳೇ ಆಗಿವೆ.

ಜನಪದ ಸಂಪ್ರದಾಯಗಳು ಆಯಾ ಪ್ರದೇಶ ಹಾಗೂ ಜೀವನ ವಿಧಾನಕ್ಕೆ ಅನುಗುಣವಾಗಿ ಭಿನ್ನವಾಗಿರುತ್ತವೆ. ಅಂತಹ ಭಿನ್ನ ಭಿನ್ನ ಜನಪದ ಸಂಪ್ರದಾಯಕ್ಕೆ ತಕ್ಕಂತೆ ಸಾಹಿತ್ಯವೂ ರೂಪ ಪಡೆಯುತ್ತಾ ಬಂದಿದೆ. ಶಿಷ್ಟ ಮತ್ತು ಜನಪದ ಸಾಹಿತ್ಯ ಕ್ಷೇತ್ರಗಳಲ್ಲಿ ಇಂತಹ ಅನೇಕ ಸಂಪ್ರದಾಯಗಳನ್ನು ಗುರುತಿಸಬಹುದು. ಚಂಪೂ, ವಚನ, ದಾಸ, ನವೋದಯ, ನವ್ಯ, ಪ್ರಗತಿಶೀಲ, ದಲಿತ ಹಾಗೂ ಬಂಡಾಯ ಸಂಪ್ರದಾಯಗಳು ಶಿಷ್ಟ ಸಾಹಿತ್ಯಕ್ಕೆ ಸಂಬಂಧಪಟ್ಟರೆ, ಜನಪದ ಸಾಹಿತ್ಯದಲ್ಲಿ ಉತ್ತರ ಕರ್ನಾಟಕದಲ್ಲಿ ಸಣ್ಣಾಟ, ದೊಡ್ಡಾಟಗಳ ಸಂಪ್ರದಾಯ ಇತ್ತೀಚೆಗೆ ಗೀಗೀ ಸಂಪ್ರದಾಯ ಸಾಹಿತ್ಯ ಉಲ್ಲೇಖನಾರ್ಹವಾಗಿದೆ.[೬]

ವಿಶ್ವದಲ್ಲಿ ಜನಾಂಗ ಜನಾಂಗಗಳ ಜಾನಪದ ಪ್ರಕಾರಗಳಲ್ಲಿ ಗೀಗೀಯು ಆದಿಮಾನವನ ಕಾಲದ ಕಂಠಸ್ಥ ಸಾಹಿತ್ಯವೆಂಬುದು ಪಂಡಿತರ ಅಭಿಪ್ರಾಯ. ವಿಶ್ವದ ಜಾನಪದ ಅಧ್ಯಯನದಲ್ಲಿ

ವಿದ್ವಾಂಸರ ಆಸಕ್ತಿಯನ್ನು ಕುದುರಿಸಿದ ಪ್ರಥಮ ಜಾನಪದ ಪ್ರಕಾರ ಲಾವಣಿ. ಜಾನಪದ ಅಧ್ಯಯನ ಹಾಗೂ ಅದರ ಸ್ವರೂಪ ಇನ್ನೂ ಒಂದು ರೂಪಕ್ಕೆ ಬರುವ ಮುನ್ನವೇ ಗೀಗೀಯ ಅಧ್ಯಯನ ಶಾಸ್ತ್ರೀಯವಾಗಿ ಆರಂಭವಾಗಿತ್ತು. ಗೀಗೀಯ ಅಧ್ಯಯನವು ವ್ಯಾಪಕವಾಗಿ ಸಾಗುತ್ತಿದೆ. ಭಾರತದ ಜಾನಪದದಲ್ಲಿ ಎಲ್ಲೆಡೆಗೂ ಗೀಗೀಯೂ ಅತೀ ಪ್ರಾಚೀನವಾದುದೆಂದು ತಿಳಿದುಬರುತ್ತದೆ. ಭಾರತದ ಜಾನಪದದ ಅಧ್ಯಯನಕ್ಕೆ ಹಾಗೂ ಗೀಗೀ ಸಾಹಿತ್ಯದ ಅಧ್ಯಯನಕ್ಕೆ ಪಾಶ್ಚಾತ್ಯರೇ ಪ್ರಮುಖರು ಎಂಬುದನ್ನು ಮರೆಯಲಾಗದು.

**ಗೀಗೀ ಪದದ ನಿಷ್ಪತ್ತಿ**

ಲವಣ ಶಬ್ದದಿಂದ ಲಾವಣಿ ನಿಷ್ಪತ್ತಿಗೊಂಡಿದೆ ಎಂದು ಹೇಳಲಾಗಿದೆ. ಲವಣೆಂದರೆ ಉಪ್ಪು, ಉಪ್ಪಿನಂತೆ ಲಾವಣಿ ರುಚಿಕಟ್ಟಾಗಿರುವುದೆಂದು ಭಾವಿಸಲಾಗಿದೆ. ಲಾವಣ್ಯದಿಂದ ಲಾವಣಿ ವ್ಯುತ್ಪತ್ತಿಗೊಂಡಿರಬಹುದೆಂದು ಮತ್ತೊಂದು ಊಹೆಯಾಗಿದೆ. ಲಾವಣಿಗಳು ಮೊದಮೊದಲು ಹೆಣ್ಣಿನ ಲಾವಣ್ಯ ಇಲ್ಲವೇ ಶೃಂಗಾರವನ್ನು ವರ್ಣಿಸುವ ಸಾಧನಗಳಾಗಿದ್ದವು. ಕಾಲಾಂತರದಲ್ಲಿ ಗಂಡಿನ ಶೌರ್ಯ, ಸಾಹಸ, ದುಃಖ, ದುಮ್ಮಾನ ಹಾಗೂ ಭಕ್ತಿ-ಭಾವಗಳು ಲಾವಣಿಗೆ ವಸ್ತುವಾದವು. ಶೃಂಗಾರದಿಂದ ವ್ಯುತ್ಪತ್ತಿಗೊಂಡ ಗೀಗೀ ಕುರಿತು ನಿಖರವಾಗಿ ಹೇಳುವ ಯಾವುದೇ ಆಧಾರಗಳು ಈವರೆಗೆ ಲಭ್ಯವಿಲ್ಲವಾದರೂ ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿ ಈ ತರಹದ ಸಾಹಿತ್ಯ ಈಗಲೂ ವಿಪುಲವಾಗಿ ದೊರೆಯುವುದರಿಂದ ಅದು ಅಲ್ಲಿಂದಲೇ ಉಗಮಿಸಿರಬಹುದೆಂದು ಭಾವಿಸಲಾಗಿದೆ. ಇನ್ನೊಂದು ತಿಳಿವಳಿಕೆಯ ಪ್ರಕಾರ ಪೇಶ್ವೆಯವರು ಹೇಳಿಸುತ್ತಿದ್ದ ಪೋವಾಡ ಲಾವಣಿಗಳು ಕನ್ನಡ ಲಾವಣಿಗಳ ರಚನೆಗೆ ಪ್ರೇರಣೆಯಾದವು. ಆದಾಗ್ಯೂ ಮರಾಠಿಯ ಪೋವಾಡ ಲಾವಣಿಗಳು ಕ್ರಮವಾಗಿ ವೀರ ಹಾಗೂ ಶೃಂಗಾರ ರಸಗಳಿಗೆ ಮೀಸಲಾಗಿ ಅವು ಗ್ರಾಮೀಣಕ್ಕೆ ಬದಲಾಗಿ ನಗರ ಪ್ರದೇಶಗಳಲ್ಲಿ ಬೆಳೆದು ಬಂದರೆ, ಕನ್ನಡ ಗೀಗೀ ಪದಗಳು ವೀರ ಹಾಗೂ ಶೃಂಗಾರ ರಸಗಳನ್ನು ಮೇಳವಿಸಿಕೊಂಡು ನಗರ ಪ್ರದೇಶಗಳಿಗೆ ಬದಲಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹುಟ್ಟಿಕೊಂಡು ಶುದ್ಧ ಜಾನಪದಗಳಾಗಿ ಉಳಿದಿರುವುದೊಂದು ವಿಶೇಷ.

**ಗೀಗೀ ಪದಗಳ ಹಾಡುಗಾರಿಕೆ ಸಂದರ್ಭ**

"ಸಾಮಾನ್ಯವಾಗಿ ಹಬ್ಬ, ಹರಿದಿನ, ಜಾತ್ರೆ ರಥೋತ್ಸವಗಳಂದು ಆಮಂತ್ರಣದ ಮೇರೆಗೆ ದೇವಸ್ಥಾನದ ಮುಂದೆ ನೆರೆದಿರುವ ಅಪಾರ ಜನಸ್ತೋಮದೆದುರಿಗೆ ಘಂಟೆಗಟ್ಟಲೆ ಹಾಡಿ ಜನಮನ ರಂಜಿಸಿ, ಆಮಂತ್ರಿತರಿಂದ, ಪೂರ್ವ ನಿಗದಿತ ಸಂಭಾವನೆ ಸ್ವೀಕರಿಸುವ ಗೀಗಿ ಲಾವಣಿಕಾರರು ವೃತ್ತಿಗಾಯಕರು." ಹಾಡುವುದರಿಂದಲೇ ಉಪಜೀವಿಸುವುದಕ್ಕಾಗುವುದಿಲ್ಲವೆಂದು ಮನಗಂಡ ಅವರು ಕೃಷಿ, ಕೂಲಿ, ನೇಕಾರಿಕೆ ಇತರೆ ಕಸುಬುಗಳನ್ನು ಕೈಗೊಂಡಿರುವರು.[೧೦]

**ಗೀಗೀ ಪದಗಳ ಸಾಹಿತ್ಯದ ಲಕ್ಷಣಗಳು**

ಗೀಗೀ ಪದಗಳ ಸಾಹಿತ್ಯದ ಲಕ್ಷಣಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ನೋಡಬಹುದು.

೧. ಲಾವಣಿ(ಕನ್ನಡ)ಗಳು ಮಹಾರಾಷ್ಟ್ರದ ಪೋವಾಡ, ಲಾವಣಿಗಳಿಂದ ಪ್ರೇರಿತವಾದುದರಿಂದ ಅವುಗಳ ಶೈಲಿ ಹಾಗೂ ಹಾಡುಗಾರಿಕೆ ಪ್ರಭಾವಕ್ಕೊಳಗಾದುದು ಸಹಜ. ಸಖಿ, ಖ್ಯಾಲಿ ಕಲ್ಗಿ,

ತುರಾ, ಹರದೇಶಿ ನಾಗೇಶಿ ಮುಂತಾದ ಪಾರಿಭಾಷಿಕ ಪದಗಳು ಮುಖ್ಯ ಹಾಡನ್ನು ನುಡಿಗೆ ಬದಲಾಗಿ ಚೌಕುಗಳಾಗಿ ವಿಭಾಗಿಸುವುದು. ಆದಿಪ್ರಾಸವನ್ನು ತ್ಯಜಿಸುವುದು. ಇಡಿಯ ಚೌಕಿಗೆಲ್ಲ ಒಂದೇ ಅಂತ್ಯಪ್ರಾಸ ಯೋಜಿಸಿಕೊಂಡಿರುವ ಇವೇ ಮೊದಲಾದ ಲಾವಣಿಯ ಲಕ್ಷಣಗಳು ಮರಾಠಿ ಪ್ರಭಾವದತ್ತ ಬೆರಳಿಟ್ಟು ತೋರಿಸುತ್ತದೆ.

೨. ಲಾವಣಿಯನ್ನು ವಿಶಿಷ್ಟ ಛಂದಸ್ಸಿನಿಂದ ಗುರುತಿಸಲಾಗುತ್ತದೆ. ಮಧ್ಯ ಮಧ್ಯದಲ್ಲಿ ಲಘುಗಳು ಕಂಡು ಬಂದರೂ ಕೊನೆಯಲ್ಲಿ ಗುರು ಅವಶ್ಯ ಕಂಡುಬರುತ್ತದೆ. ಆದಿ ಪ್ರಾಸ ಇರಬೇಕೆಂಬ ನಿಯಮವಿಲ್ಲದಿದ್ದರೂ ಅಂತ್ಯಪ್ರಾಸ ಇರಲೇಬೇಕೆಂಬ ನಿಯಮವಿದೆ. ಉದಾಹರಣೆ–

ಗುರುವೆ ನಿಮ್ಮ ಪಾದಕ ಬೆರಸಿ
ಪೂಜೆ ಮಾಡುವೆ ಸಾಹಿತ ತರಸಿ
ತೀರ್ಥ ಸೀತಾಳಾದಿಂದ ಪಾದ ತೊಳಿಸಿ
ಅಬಿರ ಕಸ್ತೂರಿ ಲಿಂಗಕ ಧರಿಸಿ
ಜಾಜಿ ಪುಷ್ಪ ಮಲ್ಲಿಗೆ ಏರಿಸಿ

(ಸುಮಿತ್ರ ಅಗಳಕೆರೆ)

ಇಲ್ಲಿ ಪಾದ ಸಂಖ್ಯೆ ಮಿತಿಗೊಳಿಸದಿರುವುದು ಗಮನಾರ್ಹವಾಗಿದೆ.

೩. ಲಾವಣಿ ವಿಶಿಷ್ಟ ಲಕ್ಷಣ ಅದರ ಗೇಯತೆ ಎಂದೇ ಹೇಳಬಹುದು. ಲಾವಣಿಯನ್ನು ವಾದ್ಯ ಪರಿಕರಗಳೊಂದಿಗೆ ಹಾಡಲಾಗುತ್ತದೆ. ಸಂಗೀತದ ದೃಷ್ಟಿಯಿಂದ ಹೇಳುವುದಾದರೆ ಲಾವಣಿ ವಿಶಿಷ್ಟ ತಂತ್ರದಿಂದ ಕೂಡಿದೆ. ಚಿಟಕಿ ಲಾವಣಿಯಲ್ಲಿ ಇದಕ್ಕೆ ಸಖಿ ಎಂದು ಹೇಳಲಾಗುತ್ತದೆ. ಹಾಡಿನ ಅಂತ್ಯದ ನುಡಿಗೆ ಖ್ಯಾಲಿ ಎಂದು ಹೆಸರು. ಸಖಿ ಮತ್ತು ಖ್ಯಾಲಿಗಳ ಮಧ್ಯದಲ್ಲಿದ್ದುದೆಲ್ಲ ಲಾವಣಿ ಹಾಡು, ಹಾಡಿನ ಹರವು ಹೆಚ್ಚಾಗಿದ್ದರೆ ಅದನ್ನು ನುಡಿ ಇಲ್ಲವೆ ಚೌಕುಗಳೆಂದು ವಿಭಾಗಿಸುವುದುಂಟು. ಹಾಡಿನಾರಂಭದಲ್ಲಿರುವ ಇಡಿಯ ಲಾವಣಿಯ ಸಾರ ಹುದುಗಿರುತ್ತದೆ.

೪. ಸಂಗೀತದ ಜೊತೆಗೆ ಲಾವಣಿಯು ನರ್ತನದ ಜೊತೆಗೂಡುವುದುಂಟು. ಮೇಳ ಲಾವಣಿಯಲ್ಲಿ ಸಾಮಾನ್ಯವಾಗಿ ಅದರಲ್ಲೂ ಕಲ್ಗಿತುರಾ ಸ್ಪರ್ಧಾತ್ಮಕ ಗೀತಗೋಷ್ಠಿಯಲ್ಲಿ ಹಾಡಿನ ಜೊತೆಗೆ ಗಾಯಕರು ನರ್ತನ ಮಾಡುವುದು ಕಂಡುಬಂದರೂ, ಹಾಡಿಗಿಂತ ನರ್ತನ ಮಹತ್ವದ್ದಾಗಿ ಕಾಣುವುದಿಲ್ಲ. ಇಂಥವೆಲ್ಲ ಕಾರಣಗಳಿಂದ ಲಾವಣಿಯು ವಿಶಿಷ್ಟ ಛಂದಸ್ಸು ಹಾಗೂ ಸಂಗೀತ ಪ್ರಕಾರವೇ ಹೊರತು ವಸ್ತು ವಿಶಿಷ್ಟ ಪ್ರಕಾರವಲ್ಲ. ಜನಪದ ಗೀತ ಸಾಹಿತ್ಯದ ಕಥನ ಗೀತೆಗಳೆಲ್ಲ ಲಾವಣಿಗಳೆಂದು ಅರ್ಥೈಸುವುದು ಸಮಂಜಸವಲ್ಲ.

೫. ಲಾವಣಿಯ ಮತ್ತೊಂದು ಲಕ್ಷಣ ಅದು ಜಾನಪದಕ್ಕೆ ಸೇರಿದ್ದು. ಲಾವಣಿ ಜಾನಪದಕ್ಕೆ ಸೇರಿದ್ದರೂ ಅದು ಪುರಾತನವಾದುದಾಗಲಿ, ಅನಾಗರಿಕವಾದುದಾಗಲಿ ಅಲ್ಲ. ಅದು ಸುಶಿಕ್ಷಿತ ಮತ್ತು ಸಾಹಿತ್ಯಿಕ ಪ್ರಜ್ಞೆಯುಳ್ಳವರಿಂದಲೇ ರಚಿತವಾದದ್ದು. ಲಾವಣಿ ಜಾನಪದ ತನ್ನ ಹಿಂದೆ ಒಂದು ದೊಡ್ಡ ಪರಂಪರೆಯನ್ನೇ ಹೊಂದಿದೆ. ಆ ಪರಂಪರೆ ಅಕ್ಷರಸ್ಥ ಮತ್ತು ಪ್ರಜ್ಞಾಪೂರ್ಣ

ಸಂಸ್ಕೃತಿಯಿಂದ ಭಾಗಶಃ ನಿಯಂತ್ರಣಕ್ಕೊಳಪಟ್ಟದ್ದೂ ಆಕಾರವನ್ನು ಪಡೆದುಕೊಂಡಿರುವಂಥದ್ದೂ ಆಗಿದೆ.

೬. ಜನಪದರು ಅವಿದ್ಯಾವಂತರಾಗಿರುವುದಕ್ಕಿಂತಲೂ ಹೆಚ್ಚಾಗಿ ಅನಕ್ಷರಸ್ಥರು. ಅವರು ಸಮರೂಪದ ವ್ಯಕ್ತಿಗಳು, ಬದುಕಿನ ನಾಟಕೀಯ ಸ್ಥಿತಿಯಲ್ಲಿ ಅವರು ಎಲ್ಲದರ ಬಗ್ಗೆಯೂ ಆಸಕ್ತಿ ಇರಿಸಿಕೊಂಡವರು. ಸತ್ವಯುತ ಕಥೆ ಮತ್ತು ಜನಪದ ಕಥೆಗಳ ದೊಡ್ಡ ಭಂಡಾರವೇ ಅವರಲ್ಲಿದೆ. ಸಂಪ್ರದಾಯದ ಅರೆನಂಬಿಕೆಗಳಿಂದ ಕೂಡಿದ ಜಾನಪದ ನಿಧಿ ಅವರದು. ಹೀಗಾಗಿ ಲಾವಣಿಯು ಜಾನಪದ, ಐತಿಹ್ಯ ಮತ್ತು ಸ್ಥಳೀಯ ಚರಿತ್ರೆಗಳ ಸಮ್ಮಿಶ್ರಣವೇ ಆಗಿದೆ. ಕಾಲದಿಂದ ಕಾಲಕ್ಕೆ ಜನಪದರು ಲಾವಣಿ ರಚನೆಯೊಂದಿಗೆ ಅದಕ್ಕೆ ಆಕಾರ ಕೊಡುವುದು ವಸ್ತುವನ್ನು ಬದಲಾವಣೆಗೊಳಪಡಿಸುವುದು, ಘಟನೆ ಶೈಲಿಗಳನ್ನು ಮಾರ್ಪಡಿಸುವುದು, ತಪ್ಪಿಗೆ ಅವಕಾಶವಾಗದಂತೆ ಸ್ಪರ್ಶಿಸುವುದು ಇದನ್ನೆಲ್ಲ ಮಾಡುತ್ತ ಬಂದರು.

೭. ಲಾವಣಿ ಇನ್ನೊಂದು ಲಕ್ಷಣ ಘಟನಾಸ್ವರೂಪದ್ದಾದರೂ ವೈಯಕ್ತಿಕವಾದುದಲ್ಲ. ಸಣ್ಣ ಕಥೆಯ ಹಾಗೆ ಲಾವಣಿ ಒಂದು ಸಣ್ಣ ಘಟನೆ ತೆಗೆದುಕೊಂಡು ಅದನ್ನು ಹಂತಗೊಳಿಸಿ ಅದಕ್ಕೊಂದು ಆರ್ಥಿಕ ಕೇಂದ್ರವನ್ನೊದಗಿಸುತ್ತದೆ. ಈ ರೀತಿಯಾಗಿ ಲಾವಣಿ ಉಪಾಖ್ಯಾನಾತ್ಮಕವಾಗಿ ಘಟನೆಗಳನ್ನು ಬೆಳೆಸಿ ಕಥೆಯಾಗಿಸುವ ಜನಪದ ಕಥೆ ಅಥವಾ ಮಹಾಕಾವ್ಯಗಳಿಗಿಂತ ಭಿನ್ನವಾಗಿರುತ್ತದೆ. ಇದು ಕಥೆಯನ್ನು ಅತ್ಯವಶ್ಯಕ ವಿವರಣೆಗಳಿಂದ, ಪ್ರೇರಣೆಗಳಿಂದ, ಘಟನಾತ್ಮಕ ವಸ್ತುವಿನಿಂದ, ಎಲ್ಲಕ್ಕಿಂತಲೂ ಮುಖ್ಯವಾಗಿ ಸಂಪಾದಕೀಯ ಕ್ರಮಕೈಗೊಳ್ಳುವುದರಿಂದ ಮಾತ್ರವೇ ಆಗಿರದೆ ಅದರ ತೆರವುಳ್ಳ ನಿರೂಪಣೆಯಿಂದ ಓದುಗ ಅತ್ಯುತ್ಕಟ ನಾಟಕೀಯ ಕ್ರಿಯೆಯ ಕೆಲವು ಕ್ಷಣಗಳನ್ನು ಮಾತ್ರ ಅನುಭವಿಸುತ್ತಾನೆ.

೮. ಕೊನೆಯದಾಗಿ ಲಾವಣಿ ನಿರೂಪಣಾತ್ಮಕವಾದುದು. ನಿರೂಪಣೆಯ ನಾಲ್ಕು ಸಾಮಾನ್ಯ ಅಂಶಗಳಾದ ಕ್ರಿಯೆ, ಪಾತ್ರ, ವೇಷಭೂಷಣ ಮತ್ತು ವಸ್ತು ಇವುಗಳಲ್ಲಿ ಲಾವಣಿ ಮೊದಲನೆಯದಕ್ಕೆ ಪ್ರಾಶಸ್ತ್ಯ ಕೊಡುತ್ತದೆ. ವೇಷಭೂಷಣ ಅನಿಶ್ಚಿತ ವಸ್ತು ಮೇಲಿಂದ ಮೇಲೆ ಸುಚಿತವಾಗಿರುತ್ತದೆ.[೪೧]

ತನ್ನ ಶುದ್ಧ ಏಕರೂಪತೆಯಿಂದಾಗಿ ಮನಸ್ಸಿನ ಮೇಲೆ ಪ್ರಭಾವ ಬೀರುವಂಥದ್ದಾಗಿರುತ್ತದೆ. ಲಾವಣಿಯ ಕ್ರಿಯೆ ವಿವರಿಸುವಾಗ ಕಟ್ಟುನಿಟ್ಟಾದ ಮಿತವ್ಯಯವನ್ನು ಅನುಸರಿಸುತ್ತದೆ. ಪರಾಕಾಷ್ಠೆಗೆ ಸಂಬಂಧಿಸಿದ ಪೂರ್ವೋಕ್ತ ಘಟನೆಗಳನ್ನು ಆಗಾಗ್ಗೆ ಕೈಬಿಡಲಾಗುತ್ತದೆ. ವಿವರಣಾತ್ಮಕ ಮತ್ತು ಪ್ರೇರಕ ಅಂಶಗಳು ಮಾತ್ರ ಉಳಿದುಕೊಳ್ಳುತ್ತವೆ, ಕಡಿಮೆಗೊಳ್ಳುತ್ತಿರುತ್ತದೆ. ಕಥಾವಸ್ತು ನಿಯೋಜಿಸುವ ಅಸ್ಥಿರ ಸನ್ನಿವೇಶ ಮತ್ತು ವಿಶ್ಲೇಷಣೆಗಳಿಂದ ಲಾವಣಿ ಆಗಿಂದಾಗ್ಗೆ ವಿವರಣೆಯುತ್ತ ಗಮನಹರಿಸುತ್ತ ಕಥೆಗೆ ಬೇಕಾದ ವಿವರಗಳನ್ನು ಮತ್ತು ಪೂರ್ವೋಕ್ತ ಮಾಹಿತಿ ಒದಗಿಸುವ ವಿಚಾರಗಳನ್ನು ಕೇಳುಗನಿಗೆ ಬಿಡುತ್ತದೆ. ಆ ಹಾಡುಗಳ ಲಯ, ನಾದ, ಸಹೃದಯ ವಾಚಕರ ಹೃದಯವನ್ನು ತಟ್ಟುತ್ತದೆ.

ಹೇ ಭಾವ ಮೈದುನರ ಹೂಲಿ ಬಂದರ
ನಡೆಯಲಾರೆ ಸಣ್ಣ ಪೋರಿ ಆಗಿ ನಿಂತಿನಿ ಉಸರಿ

ಅಡಿಚಗಣ್ಣಿನ ಕುದುರಿ ತಗೊಂಡು ಬಾ
ಹೋಗನೂನು ರಾತಾರಾತರಿ ||ಗೀ ಗೀ||

ಕುದುರಿಯ ಸಾಮರ್ಥ್ಯವನ್ನು ತುಂಬಾ ಸೋಗಸಾಗಿ ಬಣ್ಣಿಸುತ್ತಾರೆ. ಅದನ್ನು ಕಂಡು ಕೇಳಿಯೇ ಆನಂದಿಸಬೇಕು. ಆಗ ಹಾss ಗೀss ಎಂದು ಶೃತಿ ಹಿಡಿಯುವ ಸೊಬಗು, ಆಡುಭಾಷೆಯ ಕಾಕು, ದೇಸಿಯ ನುಡಿಗಟ್ಟುಗಳು, ಗಾದೆಗಳು, ದ್ವಿರುಕ್ತಿಗಳು, ಅನುಕರಣ ವಾಚಕಗಳು ಮುಂತಾದವು ಬಹು ಮನೋಹರವಾಗಿ ಬಳಕೆಯಾಗಿವೆ. ಗೀಗೀ ಪದಗಳು ರಚನೆಯ ದೃಷ್ಟಿಯಿಂದ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ತ್ರಿಪದಿ, ಚೌಪದಿ, ಪಂಚಪದಿ ಮುಂತಾದ ಮಾದರಿಗಳು ಕಾಣಿಸುತ್ತವೆ. ಸಿಂಧೂರ ಲಕ್ಷ್ಮಣ ಲಾವಣಿಯಲ್ಲಿ ಈ ಮಾದರಿಗಳು ಗೋಚರವಾಗಿವೆ.

ಪರಗಾಣಿ ಜತ್ತೀ ಉಮರಾಣಿ ದೇಶಕ ವಾಯಿಣಿ
ಆಳುವಂತ ಧಣಿ ಡಪ್ಪಳ ಸರಕಾರ ||
ಸರಕಾರಿ ನೌಕರಿ ಮಾಡುತ್ತಿದ್ದ ದರೋಡೆ ಹಾಕುತ್ತಿದ್ದು
ಓಡುವಲ್ಲಿ ಮುಂದ ಹಿಡಿಯುತ್ತಿದ್ದ ಮೊಲ
ಗುರಿಯಿಟ್ಟು ಹೇಳಿದಲ್ಲಿ ತಪ್ಪದೇ ಒಗೆಯುತ್ತಿದ್ದ ||ಕಲಾ...||

ಇನ್ಸಪೇಟಾ ಲಕ್ಷ್ಮಣ ಕಿಂತಾ ಹಿಂದಾ |ಅವುಸರ ಮಾಡಿಹ್ವಾದಾ
ಭರ್ಜಿಲೇ ಬಗೆದು ಅವನ ತೊಡಿಯಾಗ
ರಾಮ ರಾಮ ಅಂತ ಲಕ್ಷ್ಮಣ ಬಿದ್ದಾ |ಭೂಮಿಮ್ಯಾಗ
ಒಯ್ದು ಹಾಕ್ಕಾರ ದವಾಖಾನ್ಯಾಗ ||

ಗೀಗೀ ಪದಗಳಲ್ಲಿ ಈ ಬಂಧಗಳು ತಮ್ಮ ಸಿದ್ಧ ನಿಯಮಗಳನ್ನು ಶಿಥಿಲಗೊಳಿಕೊಂಡಿವೆ. ಅಕ್ಷರಗಳು ಹಾಡುವಿಕೆಗೆ ತಕ್ಕಂತೆ ಹಿಗ್ಗುವ-ಕುಗ್ಗುವ ಭಾಷೆಯ ಚಲನಶೀಲತೆಯನ್ನು ಹೊಂದಿರುತ್ತದೆ. ಸ್ವಚ್ಛಂದದ ಕಡೆಗೆ ಅಂಶಗಳನ್ನು ಅಡಕ ಮಾಡಿಕೊಂಡಿರುವಂಥವರು. ಮಂದಾನಿಲ ಲಯವನ್ನು ಹೋಲುವ ಈ ಮಟ್ಟು ನಿರರ್ಗಳವಾಗಿ ಸಾಗುತ್ತದೆ. ಗೀಗೀಯ ರಾಗ ಮತ್ತು ತಾಳಗಳನ್ನು ಸ್ಪಷ್ಟವಾಗಿ ರೀತಿಯಲ್ಲಿ ಬಳಸುವುದೆಂಬುದಕ್ಕೆ ಮೇಲಿನ ಬಂಧಗಳು ಸಾಕ್ಷಿಯಾಗಿವೆ. ಒಂದೊಂದು ಚೌಕದಲ್ಲಿ ಅನೇಕ ಹಿರಿಕಿರಿ ಚರಣಗಳು ವಿವಿಧ ಪ್ರಾಸ ವಿನ್ಯಾಸದಲ್ಲಿ ಹೆಣೆದುಕೊಂಡಿರುತ್ತದೆ. ಗೀಗೀ ಪದಗಳಲ್ಲಿ ಪ್ರಾಸದ ವಿಲಾಸ, ವೈವಿಧ್ಯಮಯವಾಗಿದೆ.

ಎರಳಿ ನೋಟದಂತಹ ಹೆಣ್ಣ
ಸಿಂಹನ್ಹಾಂಗ ನಡಸಣ್ಣ
ಕುಡಿ ಹುಬ್ಬ ಕಾಡಿಗ್ಗಣ್ಣ ||
ಸುದ್ಧ ಪಾತರಗಿತ್ತಿ ಅಂತಾಹೆಣ್ಣ
ರಾಗ ಎಂಬ ರಾಗು ಟಿ ಬ್ಯಾಂಡಂದ
ಯೋಗ ಭಕ್ತಿಯಿಂದ ನತ್ತ ಇಡಿಸಿದ ||

ಇಲ್ಲಿ ಅಂತ್ಯ ಪ್ರಾಸದೊಡನೆ ಲಯವೂ ಒಂದಿಷ್ಟು ಬೇರೆಯಾಗಿ ಶೃಂಗಾರ ಸುಖದ ಪರಿಣಾಮವನ್ನುಂಟು ಮಾಡುತ್ತದೆ. ಲಯದ ಜಾಡು ಹಿಡಿದು ತಿರುಗುವ ಅಂತ್ಯ ಪ್ರಾಸವೂ

ಏಕತೆಯಲ್ಲಿ ವಿವಿಧತೆಯನ್ನು ಎತ್ತಿತ್ತೋರಿಸುತ್ತದೆ. ಗೀಗೀ ಬಂಧದಲ್ಲಿ ನಿರರ್ಗಳತೆ ಹೆಚ್ಚು; ಪ್ರಾಸವಿನ್ಯಾಸವು ಈ ಓಟಕ್ಕೆ ಒಪ್ಪುಗೊಂಡುತ್ತದೆ. ಪದ್ಯದ ಚರಣಗಳು ಗಳಿಗೆಯಂತೆ ಹರಿದುಬರುತ್ತದೆ. ಪ್ರಾಸದ ಈ ಸೊಗಸು ಲಾವಣಿ ಬಂಧಗಳ ವೈಶಿಷ್ಟ್ಯ. ಭಾವವನ್ನು ನೇರವಾಗಿ ಮನಸ್ಸಿಗೆ ಮುಟ್ಟಿಸಲು ಗೀಗೀಯ ಪ್ರಾಸ ಬಹಳ ಮಟ್ಟಿಗೆ ನೆರವಾಗುತ್ತದೆ(ಎಸ್.ಎಸ್. ಅಂಗಡಿ, ೨೦೦೮, ಜನಪದ ಸಾಹಿತ್ಯ ಭಾಷೆ, ವಿಕಾಸ ಪ್ರಕಾಶನ, ಹೊಸಪೇಟೆ, ಪುಟ ೨೨೮-೨೨೯).

**೪.೬. ಮೊಹರಂ ಹಾಡುಗಳು**

ಕನ್ನಡ ಜನಪದ ಹಾಡುಗಳು ವೈವಿಧ್ಯಮಯವಾಗಿರುವಂತೆ ಕೆಲವೊಂದು ನಿರ್ದಿಷ್ಟ ಸಂದರ್ಭಗಳಲ್ಲಿ ಮಾತ್ರ ಹೇಳಲ್ಪಡುತ್ತವೆ. ಈ ಮಾದರಿಯ ಹಾಡುಗಳಲ್ಲಿ ಮೊಹರಂ ಪದಗಳನ್ನು ಹೆಸರಿಸಬಹುದು. ಮೊಹರಂ ಪದಗಳನ್ನು 'ರಿವಾಯತ ಪದ'ಗಳೆಂತಲೂ ಕರೆಯಲಾಗುತ್ತದೆ. ಕೊಪ್ಪಳ ಜಿಲ್ಲೆಯ ಕೆಲವು ಭಾಗಗಳಲ್ಲಿ ಪ್ರಚಲಿತವಿರುವ ಮುಸ್ಲಿಂ ಸಂಪ್ರದಾಯ ಮನರಂಜನಾ ಕಲೆ ರಿವಾಯತ್. ಈ ರಿವಾಯತ್ ಪದ ರಿವಾಜು ಇದರಿಂದ ಮೂಡಿಬಂದಿರಬೇಕು. ರಿವಾಜು ಎಂದರೆ ರೂಢಿ ಅಥವಾ ಸಂಪ್ರದಾಯವೆಂದು ಅರ್ಥೈಸಲಾಗುತ್ತದೆ. ಹಿಂದಿ ಅಥವಾ ಉರ್ದುವಿನ ಕವ್ವಾಲಿ ರಿವಾಯತ್ ರಚನೆಗೆ ಸ್ಪೂರ್ತಿ ನೀಡಿದಂತೆ ತೋರುತ್ತದೆ. ಎರಡು ಗುಂಪುಗಳ ಮಧ್ಯೆ ನಡೆಯುವ ಸವಾಲ್ ಜವಾಬ್ ಹಾಡಿನ ಸ್ಪರ್ಧೆಯೇ ರಿವಾಯತ್. ಈ ಕಲೆ ಮುಸ್ಲಿಂ ಸಂಪ್ರದಾಯಕ್ಕೆ ಸಂಬಂಧಿಸಿದ್ದಾದರೂ ಹಿಂದುಗಳು ಇದರಲ್ಲಿ ಪಾಲ್ಗೊಳ್ಳುವುದೊಂದು ವಿಶೇಷ.

ಮೊಹರಂ ಪದಗಳನ್ನು ಕರ್ಬಲಾ ಪದಗಳೆಂದೂ ಕರೆಯಲಾಗುತ್ತಿದೆ. ಸತ್ಯ, ನ್ಯಾಯ, ಧರ್ಮ ಪುನರ್‌ಪ್ರತಿಷ್ಠಾಪನೆಗಾಗಿ ಪ್ರವಾದಿ ಮೊಹಮ್ಮದ್ ಪೈಗಂಬರ ಮೊಮ್ಮಗ ಹುಸೇನ ತಮ್ಮ ಅನುಯಾಯಿಗಳೊಂದಿಗೆ ಹಿಜರೀ ಶಕ ೬೧ರ ಮೊಹರಂ ತಿಂಗಳ ಆರಂಭದಲ್ಲಿ ಶಿರಿಯಾ ಪ್ರಾಂತಾಧಿಕಾರಿ ಯಜೀದನೊಡನೆ ಇರಾಕಿನ ಪರಾತಾ ನದಿ ದಂಡೆ ಮೇಲಿನ ಕರ್ಬಲಾ ಮೈದಾನದಲ್ಲಿ ಹೋರಾಡಿ ಅಮರರಾದ ಘಟನೆಗಳು ಮೊಹರಂ ಪದ ರಚನೆಗೆ ವಸ್ತುವಾದುದೇ ಕಾರಣವಾಗಿದೆ.

**ಮೊಹರಂ ಪದಗಳ ಹಾಡುಗಾರಿಕೆ ಸಂದರ್ಭ**

ಹೆಸರೇ ಸೂಚಿಸುವಂತೆ ಮೊಹರಂ ಪದಗಳನ್ನು ಮೊಹರಂ ಹಬ್ಬದ ಸಂದರ್ಭದಲ್ಲಿ ಮಾತ್ರ ಹೇಳಲಾಗುತ್ತದೆ. ಮೊಹರಂ ಆಚರಣೆ ಹಾಗೂ ಮೊಹರಂ ಪದಗಳು ಮುಸಲ್ಮಾನರಿಗೆ ಸೀಮಿತವಾಗಿದ್ದರೂ ಕಾಲಾಂತರದಲ್ಲಿ ಹಿಂದೂ ಧರ್ಮ ಹಾಗೂ ಸಂಸ್ಕೃತಿಯ ಪ್ರಭಾವ ಅವುಗಳ ಮೇಲಾಗಿ ಹಿಂದೂಗಳು ಅವುಗಳಲ್ಲಿ ಪಾಲ್ಗೊಳ್ಳಲಾರಂಭಿಸಿದರು. ಜಾತಿ, ಮತವೊಂದನ್ನು ಪರಿಗಣಿಸದೇ ಖ್ಯಾತ ರಚನೆಯತ್ತ ಕಲಾವಿದರನ್ನು ವೀಳ್ಯಕೊಟ್ಟು ಆಮಂತ್ರಿಸಿ ಹಾಡು ಕೇಳಿ ಸಂತೋಷ ಪಟ್ಟು ಅವರನ್ನೂ ಸನ್ಮಾನಿಸುವ ಪರಂಪರೆ ಕೊಪ್ಪಳ ಜಿಲ್ಲೆಯ ಬಹುತೇಕ ಹಳ್ಳಿಗಳಲ್ಲಿ ಈಗಲೂ ಮುಂದುವರಿಸಿಕೊಂಡು ಬಂದಿರುವುದು ವಿಶೇಷ. "ಆದಾಗ್ಯೂ ಇವರು ವೃತ್ತಿಗಾಯಕರಲ್ಲ. ಧರ್ಮ ರಕ್ಷಣೆಗಾಗಿ ಕರ್ಬಲಾ ಮೈದಾನದಲ್ಲಿ ಯಜೀದನ ಸೈನ್ಯದೊಡನೆ ಹೋರಾಡಿ ಹುತಾತ್ಮರಾದ ಇಮಾಮ್ ಹುಸೇನ್‌ರ ಜೀವನ, ಸಂದೇಶವನ್ನು ಮನುಕುಲಕ್ಕೆ ಮುಟ್ಟಿಸುವ ಪವಿತ್ರ ಉದ್ದೇಶ ಹೊಂದಿದ ಹವ್ಯಾಸಿ ಗಾಯಕರು" ಎಂದು ಡಾ. ಶಿವಾನಂದ ಗುಬ್ಬಣ್ಣವರ ಅವರ ಸರಿಯಾಗಿಯೇ ಗುರುತಿಸಿದ್ದಾರೆ.[೨೨]

### ಮೊಹರಂ ಪದಗಳ ಲಕ್ಷಣಗಳು

ಈ ಮೊದಲೇ ಹೇಳಿದಂತೆ ಮುಸ್ಲಿಂ ಸಮುದಾಯದ ಬಾಂಧವರು ಮಾತ್ರ ಹಾಡುವ ಈ ಮೊಹರಂ ಪದಗಳ ಸಾಮಾನ್ಯ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಹೆಸರೇ ಸೂಚಿಸುವಂತೆ ಮೊಹರಂ ಪದಗಳು ಪ್ರಮುಖವಾಗಿ ಮೊಹರಂ ಘಟನೆ ಹಾಗೂ ಹಬ್ಬದ ಆಚರಣೆಯನ್ನು ಒಳಗೊಂಡ ವಸ್ತುವಾಗಿಸಿಕೊಂಡಿವೆ.

೨. ಜಾನಪದದ ಇತರೆ ಪ್ರಕಾರಗಳಂತೆ ಮೊಹರಂ ಪದಗಳಲ್ಲಿಯೂ ಪಲ್ಲವಿ ಅನುಪಲ್ಲವಿಗಳಿದ್ದು ಅವುಗಳಲ್ಲಿ ಹಾಡಿನ ಸಾರವಡಗಿರುವುದು ಕಂಡುಬರುತ್ತದೆ.

೩. ಪ್ರತಿ ಪದ್ಯದಲ್ಲಿ ಸಾಮಾನ್ಯವಾಗಿ ಐದರಿಂದ ಹದಿನೈದು ನುಡಿಗಳಿದ್ದು ಪದ್ಯದ ಕೊನೆಗೆ ಕೃತಿಕಾರ ತನ್ನ ಊರು ಹೆಸರಿನೊಂದಿಗೆ ಹೇಳುವ ಇಲ್ಲವೇ ಆರಾಧ್ಯ ದೈವದ ಅಂಕಿತದೊಂದಿಗೆ ಹಾಡನ್ನು ಮುಕ್ತಾಯ ಮಾಡುತ್ತಾನೆ.

೪. ಹಾಡಿನ ಪಲ್ಲವಿ ಮುಕ್ತಾಯಗೊಂಡ ನಂತರ ಆರಂಭವಾಗುವ ನುಡಿಗಳು, ರೂಪದಲ್ಲಿ ಪಲ್ಲವಿ ಛಂದಸ್ಸನ್ನೇ ಹೋಲುತ್ತಿದ್ದರೂ ಸಾಲುಗಳ ಸಂಖ್ಯೆ ಹೆಚ್ಚಾಗಿರುತ್ತವೆ. ಇವುಗಳನ್ನು ಧಾಟಿಗಳಿಗನುಗುಣವಾಗಿ ಏರು ಜಾಲ ಎಂದು ವರ್ಗೀಕರಿಸಿ ನುಡಿಗಳಲ್ಲಿ ಅಳವಡಿಸಲಾಗಿರುತ್ತದೆ. ಎಂಥ ಗಂಭೀರವಾದ ಸನ್ನಿವೇಶಗಳನ್ನು ಸಹ ಇವು ಯಶಸ್ವಿಯಾಗಿ ನಿರೂಪಿಸುತ್ತವೆ.

೫. ಮೊಹರಂ ಪದಗಳು ಲಾವಣಿಯ ಶಿಲ್ಪ ಹೋಲುತ್ತಿದ್ದರೂ ಹಾಡು ಧಾಟಿ, ಹೇಳುವ ಕಥಾವಸ್ತುವಿನಿಂದ ಭಿನ್ನವಾಗಿ ನಿಲ್ಲುತ್ತವೆ. ಛಂದಸ್ಸಿನ ದೃಷ್ಟಿಯಿಂದ ನೋಡಿದಾಗ ಶಿಷ್ಟ ಸಾಹಿತ್ಯದ ಛಂದಸ್ಸುಗಳಿಗೆ ಜನಪದ ಹಾಡುಗಳು ಹೊಂದಿಕೊಳ್ಳುವುದಿಲ್ಲ.

   ಭಾವಕ್ಕನುಗುಣವಾಗಿ ಒಂದು ಗತಿಯನ್ನು ಹಿಡಿದುಕೊಂಡು ಪದ್ಯಗಳನ್ನು ರಚಿಸಿ ಹಾಡುವುದೇ ಹಾಡುಗಬ್ಬದ ಛಂದಸ್ಸಾದ ಸಾಂಗತ್ಯ ಅಥವಾ ತ್ರಿಪದಿಯ ಮೊದಲ ಸಾಲಿನ ಅಂಶಗಣ ಛಂದಸ್ಸಿಗೆ ಸಾಂಗತ್ಯ ಅಥವಾ ತ್ರಿಪದಿಯ ಮೊದಲ ಸಾಲಿನ ಅಂಶಗಣ ಛಂದಸ್ಸಿಗೆ ಹೆಚ್ಚು ಹತ್ತಿರವಾಗಿ ನಿಲ್ಲುತ್ತವೆ. ಈ ಪದಗಳು ಮಾತ್ರಾಗಣಕ್ಕೆ ಹೊಂದಿಕೊಳ್ಳುವುದಿಲ್ಲವಾದರೂ ಲಯದ ದೃಷ್ಟಿಯಿಂದ ಕೆಲವೊಂದು ಪದಗಳು ಅಪರೂಪವಾಗಿ ಶರಷ್ಪಟ್ಪದಿ ಲಯ, ಭಾಮಿನಿ ಷಟ್ಪದಿ ಲಯಗಳನ್ನು ಹೋಲುತ್ತವೆ.

೬. ಸಂಗೀತದ ಜೊತೆಗೆ ಕುಣಿತವನ್ನು ಮೈಗೂಡಿಸಿಕೊಂಡಿರುವುದು ಮೊಹರಂ ಪದಗಳ ಮತ್ತೊಂದು ಲಕ್ಷಣ. ವೃತ್ತಾಕಾರದಲ್ಲಿ ನಿಂತು ಹಾಡು ಹೇಳುವ ಕಲಾವಿದರು ನಿಂತಲ್ಲಿಯೇ ಮೈ ಮಣಿಸಿ ಕುಣಿಯುವುದು ಒಂದು ಪ್ರಕಾರವಾದರೆ, ಹಾಡುವ ಕಲಾವಿದರು ತಾಳಕ್ಕೆ ತಕ್ಕಂತೆ ಸಮಸಂಖ್ಯೆಯಲ್ಲಿರುವ ಹೆಜ್ಜೆ ಮೇಳ ಕುಣಿತ ಮತ್ತೊಂದು ಬಗೆಯದು. ಕುಣಿತದಲ್ಲಿ ಅನೇಕ ಪ್ರಕಾರಗಳಿವೆ. ಎರಡೆಜ್ಜೆ ಹದಿನಾರು ಬೈಸಾಕೆ ಮುಂತಾಗಿ ವಿವಿಧ ಎಣಿಕೆಯ ಹೆಜ್ಜೆಗಳಿವೆ.

೭. ಮೊಹರಂ ಪದಗಳು ಮೂಲತಃ ಇಸ್ಲಾಂ ಮತ ಸಂಸ್ಕೃತಿಯಿಂದ ಸ್ಫೂರ್ತಿ ಪಡೆದವುಗಳಾದರೂ ಅವುಗಳ ಮೇಲೆ ಹಿಂದೂ ಧರ್ಮ ವಿಶೇಷವಾಗಿ ವೀರಶೈವ ಪಂಥ ಸಂಸ್ಕೃತಿಯ

ಪ್ರಭಾವವಾಗಿರುವುದು ಕಂಡುಬರುತ್ತದೆ. ಉದಾಹರಣೆಗೆ ಶಿವ, ಮಹಾದೇವ, ಹರ, ಶರಣ, ಲಿಂಗ ಮುಂತಾದ ವೀರಶೈವ ಪಾರಿಭಾಷಿಕ ಪದಗಳು ಮೊಹರಂ ಪದಗಳಲ್ಲಿ ವಿಪುಲ ಪ್ರಮಾಣದಲ್ಲಿ ಬಳಕೆಯಾಗಿರುವುದರಿಂದ ಮೊಹರಂ ಪದಗಳು ಹಿಂದೂ, ಮುಸಲ್ಮಾನರನ್ನು ಭಾವನಾತ್ಮಕವಾಗಿ ಜೋಡಿಸುವ ಕೊಂಡಿಗಳಾಗಿರುವುದು ಕಂಡುಬರುತ್ತದೆ.

೮. ಮೊಹರಂ ಪದಗಳು ಕನ್ನಡ ಭಾಷೆಯಲ್ಲಿ ರಚಿತವಾದರೂ ಅವುಗಳಲ್ಲಿ ಪರ್ಶಿಯನ್ ಉರ್ದು, ಮರಾಠಿ ಇಂಗ್ಲೀಷ್ ಪದಗಳು ಹೇರಳವಾಗಿದ್ದು, ಭಾಷಾ ವಿಜ್ಞಾನಿಗಳ ಸಂಶೋಧನೆಗೆ ಗ್ರಾಸವಾಗಿದೆ.[೪೩]

ಒಟ್ಟಿನಲ್ಲಿ, ಮೊಹರಂ ಪದಗಳ ಭಾವ, ಭಾಷೆಗಳು ಸರಳವಾಗಿವೆ; ಸಹಜವಾಗಿದೆ. ಕೆಲವೆಡೆ ಗದ್ಯ ಎದ್ದು ಕಂಡರೂ ಅಲ್ಲಲ್ಲಿ ಹುಡಿಯಲ್ಲಿ ಬೆರೆತುಹೋದ ಹೊನ್ನಿನ ಕಾವ್ಯಾಂಶಗಳು ಇದ್ದೇ ಇವೆ. ಅಂಥವುಗಳಲ್ಲಿ ಜನಪದ ಕಾವ್ಯ, ಕಾವ್ಯದ ಸತ್ವ ಉಜ್ವಲವಾಗಿ ಬೆಳಗಿವೆ.

ಮೊಹರಂ ಹಾಡುಗಳು ಹಿಂದೂ-ಮುಸ್ಲಿಂ ಸಂಸ್ಕೃತಿಯ ಭಾವೈಕ್ಯತೆಯ ಸಂಕೇತಗಳಾಗಿವೆ. ಹೊರದೇಶದಿಂದ ಬಂದ ಸಂಸ್ಕೃತಿ ಇದೆಂದು ತುಚ್ಛೀಕರಿಸಿದೇ, ಅದಕ್ಕೆ ಬೆನ್ನಲುಬಾಗಿ ನಿಂತು ಸಹಕರಿಸಿ ನಡೆಸುತ್ತಿರುವುದನ್ನು ನೋಡಿದಾಗ ಮುಸಲ್ಮಾನ ಸಂಸ್ಕೃತಿಯನ್ನು ಹಿಂದೂಗಳು ತಮ್ಮ ಸಂಸ್ಕೃತಿಯೊಂದಿಗೆ ಒಪ್ಪಿಕೊಂಡ ಹೆಗ್ಗಳಿಕೆಗೆ ಸಾಕ್ಷಿಯಾಗಿದೆ. ಮುಸಲ್ಮಾನರು ಹಳ್ಳಿಗಳಲ್ಲಿ ಕಡಿಮೆ ಸಂಖ್ಯೆಯಲ್ಲಿದ್ದರೂ ಹಿಂದೂಗಳೇ ಇದಕ್ಕೆ ಪ್ರೇರಣೆ ನೀಡಿ ಸಹಕರಿಸಿಕೊಂಡು ಬಂದಿದ್ದಾರೆ. ಹಿಂದೂಗಳ ಜಾತ್ಯಾತೀತ ಭಾವನೆ, ನೈತಿಕ ಗುಣಮಟ್ಟಗಳ ಪರಿಸರ ಪ್ರಭಾವ ಇಲ್ಲಿನ ನಡವಳಿಕೆಗೆ ಮುಖ್ಯ ಕಾರಣವಾದಂತಿದೆ. ನಮ್ಮ ಪರಧರ್ಮ ಸಹಿಷ್ಣತೆಗೆ ಮೊಹರಂ ಬಹುದೊಡ್ಡ ಕಾಣಿಕೆಯಾಗಿದೆ. ಬೇರೆ ದೇಶವೊಂದರ ಇತಿಹಾಸವನ್ನು ನಮ್ಮ ಹಬ್ಬವೆಂದು ತಿಳಿದು ಆಚರಿಸುವ ಈ ನಾಡಿನ ಜನತೆಯ ಔದಾರ್ಯ ಹಿರಿದಾದುದು.

ಮುಸಲ್ಮಾನ ಅರಸರ ದಬ್ಬಾಳಿಕೆಯ ಆಡಳಿತ ಹಿಂದೂಧರ್ಮ ವಿರೋಧಿ ನಡತೆ, ರಜಾಕಾರರ ಹಾವಳಿ ಮುಂತಾದ ದುರಂತ ಘಟನೆಗಳಲ್ಲಿ ಸಿಲುಕಿಯೂ ಜನ ಅಚಲರಾಗದೇ. ತಮ್ಮತನವನ್ನು ಮರೆಯದೇ, ಮುಸಲ್ಮಾನರನ್ನು ದೂಷಿಸದೇ ಹಬ್ಬಗಳನ್ನು ಆಚರಿಸುವುದರಿಂದ ಅವರಲ್ಲಿಯ ಅಂತರ ದೂರವಾಗಿ ಸಾಮಾಜಿಕ ಭಾವೈಕ್ಯ ಬೆಳೆಯುವುದು. ಇದರಿಂದ ಪರಸ್ಪರ ತಿಳಿವಳಿಕೆ ಬೆಳೆಯಲು ಸಹಾಯವಾಗುವುದು. ಮಾನವನ ಉದಯೋನ್ಮುಖ ಬೆಳವಣಿಗೆಗೆ, ಜಾಗೃತ ಮನೋಭಾವನೆಗೆ ಇಂತಹ ಆಚರಣೆಗಳು ಅವಶ್ಯವೆನಿಸುತ್ತವೆ.[೪೪]

ಕನ್ನಡ ಜನಪದ ಹಾಡುಗಳು ವೈವಿಧ್ಯಮಯವಾಗಿವೆ ಎಂಬುದನ್ನು ಕೆಲವೊಂದು ನಿರ್ದಿಷ್ಟ ಸಂದರ್ಭದಲ್ಲಿ ಮಾತ್ರ ಹೇಳಲ್ಪಡುತ್ತವೆ. ಈ ಮಾದರಿಯ ಹಾಡುಗಳಲ್ಲಿ ಮೊಹರಂ ಪದಗಳನ್ನು ಹೆಸರಿಸಬಹುದು. ಮುಸ್ಲಿಂ ಸಮುದಾಯದ ಸಂಸ್ಕೃತಿ ಅರಿಯಲು ಈ ಪದಗಳು ತುಂಬ ನೆರವಾಗುತ್ತದೆ.

### ಚರಿತ್ರೆಯ ಪದಗಳು

ಜಾನಪದ ಸಾಹಿತ್ಯ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಜಾನಪದ ಸಾಹಿತ್ಯದಲ್ಲಿ ಚರಿತ್ರೆ ವ್ಯಾಪಕವಾಗಿ ಒಳಗೊಂಡಿದೆ. ಚರಿತ್ರೆ ಎಂದರೆ ಇತಿಹಾಸ. ಅಂದರೆ ಗತಕಾಲದ

ಚರಿತ್ರೆಯನ್ನು ತಿಳಿಸುವುದು. ಈ ಮೊಹರಂ ಪದಗಳಲ್ಲಿ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಸಾಕಷ್ಟು ವಿಚಾರಗಳು ತಿಳಿದುಬರುತ್ತವೆ. ಪ್ರಾಚೀನ ಸಾಹಿತ್ಯವು ಗ್ರಂಥಸ್ಥ ರೂಪದಲ್ಲಿ ಇರದೇ ಇರುವ ಸಂದರ್ಭದಲ್ಲಿ ಯಾವುದೇ ಚರಿತ್ರೆಯ ವಿಷಯ ದಾಖಲು ರೂಪದಲ್ಲಿ ಇರುತ್ತಿರಲಿಲ್ಲ. ಕೇವಲ ಜನಪದ ಮೌಖಿಕ ವಾಹಿನಿಯಲ್ಲಿ ಅಂದರೆ ಹಾಡಿನ ರೂಪದಲ್ಲಿ. ಕಥೆಯ ರೂಪದಲ್ಲಿ, ಲಾವಣಿ, ಗೀಗಿ ಪದಗಳ ರೂಪದಲ್ಲಿ ಅಭಿವ್ಯಕ್ತಿಗೊಳ್ಳುತ್ತಿತ್ತು. ಅದರಂತೆ ಮೊಹರಂ ಪದಗಳಲ್ಲಿಯೂ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಪದಗಳು ಕೂಡ ಸಿಗುತ್ತವೆ.

ಹಾಗೆಯೇ ದೇಶವನ್ನು ಕಟ್ಟಿದವರ, ಧರ್ಮವನ್ನು ಕಟ್ಟಿದವರ, ತ್ಯಾಗ, ಬಲಿದಾನಗೈದವರ, ಶರಣರ, ಪವಾಡ ಪುರುಷರ, ಐತಿಹಾಸಿಕ ವ್ಯಕ್ತಿಗಳ ಕುರಿತು ಮೊಹರಂ ಪದಗಳು ಪ್ರಚಲಿತದಲ್ಲಿವೆ. ಇಂತಹ ವ್ಯಕ್ತಿ ಚರಿತ್ರೆಯ ಪದಗಳು ಜಾನಪದದಲ್ಲಿ ಸಾಕಷ್ಟು ಸಿಗುತ್ತವೆ. ಇಲ್ಲಿ ಅಧ್ಯಯನದ ಸೀಮಿತ ಉದ್ದೇಶಕ್ಕಾಗಿ ಕೆಲವು ಚರಿತ್ರೆಯ ಪದಗಳನ್ನು ಹಾಗೂ ವ್ಯಕ್ತಿ ಚರಿತ್ರೆಯ ಪದಗಳನ್ನು ಸಂಗ್ರಹಿಸಿ ಸಂಶೋಧನೆಗೆ ಒಳಪಡಿಸಲಾಗಿದೆ.

ಮಕ್ಕ ಇಂದಿಗೂ ಇಸ್ಲಾಂ ಧರ್ಮದ ಪವಿತ್ರ ಕ್ಷೇತ್ರವಾಗಿದೆ ಎಂಬುದು ಈ ಕೆಳಗಿನ ಮಕ್ಕಾಚರಿತ್ರೆ ಎಂಬ ಮೊಹರಂ ಪದ ತಿಳಿಸುತ್ತದೆ.

ಕುಂದ್ರೊ ಕುಂದ್ರೊ ಶಾಹೀರಾ ನೀನು
ಕೊಡುತ್ತೀನಿ ಹಾಡಿಗೆ ತೋಡಿಯಾನ
ಇಬ್ರಾಹಿಂ ಖಲಿಲುಲ್ಲಾ ಶರಣರ
ಮಕ್ಕಾ ಕಟ್ಟಿಸಿಲಿಕ್ಕೆ ಪ್ರಾರಂಭ
ಎಷ್ಟು ಕಟ್ಟಿಸಿದರೆ ಮಕ್ಕಸ್ತಾನ ನಿಲ್ಲವಲ್ಲು ।
ಕೇಳಿರಿ ಹಿರಿಯರಾ ॥

(ಹುಸೇನಿ ಮಕಾನಾದರ, ಕುದುರೆಮೋತಿ)

ಎಂದು ಆರಂಭಗೊಳ್ಳುವ ಈ ಪದ ಇಬ್ರಾಹಿಂ ಖಲಿಲುಲ್ಲಾ ಶರಣರು ಮಕ್ಕಾ ಕಟ್ಟಿಸಲಿಕ್ಕೆ ಪ್ರಾರಂಭ ಮಾಡಿದರು. ಎಷ್ಟು ಕಟ್ಟಿಸಿದರೂ ಅದರ ಸ್ಥಾನ ನೆಲೆಗೊಳ್ಳದೇ ಚಿಂತೆಯಿಂದ ಮಲಗಿರುವಾಗ ಕನಸಿನಲ್ಲಿ ಬಂದ ದೇವರು ಮಕ್ಕಾದ ಕಟ್ಟಡ ನಿಲ್ಲಬೇಕಾದರೆ ಒಂದು ಕರಾರು ಇದೆ. ಅದು ಪೂರ್ಣಗೊಳಿಸಿದ ಮೇಲೆ ನಿಲ್ಲುತ್ತದೆ ಎಂದು ಹೇಳಿ ಅದೃಶ್ಯವಾಗಿ ಹೋದಾಗ ಇಬ್ರಾಹಿಂ ಖಲಿಲುಲ್ಲಾರವರು ಶಾಲೆಗೆ ಹೋಗುತ್ತಿದ್ದ ತಮ್ಮ ಮಗ ಇಸ್ಮಾಯಿಲ್ ಹಿಯಾನನ್ನು ಕರೆಸಿ ಕಣ್ಣೀರು ಸುರಿಸುತ್ತಾ ನಿಲ್ಲುತ್ತಾರೆ.

ಸ್ವಪ್ನದಲ್ಲಿ ಮಹಾದೇವ ।
ಕುರುಬಾನ್ ಮೊಡೆಂದು ಹೇಳ್ಯಾರ ನಿನ್ನ ।
ಇಸ್ಮಾಯಿಲ್ ಶರಣರ ಭಕ್ತಿವಾನ ।
ಕೊಟ್ರು ತಂದಿ ಕೈಯಲ್ಲಿ ಚೂರಿಯಾನ ।

(ಲಾಲ್‌ಸಾಬ, ಕೊಪ್ಪಳ)

ಮಗನ ಮುಂದೆ ಆಗ ತಂದೆಯ ತಾನು ಕಂಡ ಕನಸನ್ನು ಹೇಳುತ್ತಾ ಮಕ್ಕಾ ಪ್ರದೇಶದ ಸ್ಥಾಪನೆಗೆ ನಿನ್ನನ್ನು ಕುರುಬಾನ್ ಬಲಿ ಮಾಡಬೇಕೆಂದು ಹೇಳಿದಾಗ, ಮಗನು ಚೂರಿ(ಚಾಕು)ಯನ್ನು ತಂದೆಯ ಕೈಯಲ್ಲಿ ಕೊಟ್ಟು ಬಲಿಯಾಗಲು ದೇವರನ್ನು ನೆನೆಸುತ್ತಾ ನಿಲ್ಲುತ್ತಾನೆ. ತಂದೆಯ ಕೈಯಲ್ಲಿ ಚಾಕುವನ್ನು ಹಿಡಿದು ಮಗನ ಕಣ್ಣಿಗೆ ಬಟ್ಟೆಯನ್ನು ಕಟ್ಟಿ ಕೆಡವಿ ಹಾಕಿ ದೇವರ ಧ್ಯಾನ ಮಾಡುತ್ತ ಮಗನ ಕತ್ತನ್ನು ಹಿಡಿದು ಕೊಯ್ಯಲು ಶುರು ಮಾಡುತ್ತಾರೆ.

ಎಷ್ಟು ಕೊಯ್ದಾರೋ ಮಗನ ಗೋಣ ।
ಹರಿವಲ್ದು ಕೇಳ್ರಿ ಚೂರಿಯಾನ ।
ಸಿಟ್ಟೀಲೇ ಒಗೆದಾರೋ ಚೂರಿಯಾನ
ಹೋಗಿ ಬಿತ್ತು ದೊಡ್ಡದೊಂದು ಸಮುದ್ರಾನ
ಮೀನು ಹಲಾಲು ಆ ದಿನ ।
ಆಗ್ಯಾವು ಕೇಳ್ರಿ ಸರ್ವಜನ
ಅಲ್ಲಿಗೆ ನಿಂತಿತು ಮಕ್ಕಾಸ್ಥಾನ
ಕಟ್ಟಿ ಹೋದ್ಯಾರೋ ಮುಕ್ತಿಯಾನ[೪೫]

ಇಬ್ರಾಹಿಂ ಖಲಿಲುಲ್ಲಾ ಮಗನ ಕತ್ತನ್ನು ಎಷ್ಟು ಕೊಯ್ದರೂ ಕತ್ತು ಕೊಯ್ಯಲಾಗುತ್ತಿಲ್ಲ. ಕೊಯ್ದಷ್ಟು ಕತ್ತು ಕೊಯ್ಯಲಾಗದೇ ಸಿಟ್ಟಿನಿಂದ ಚಾಕುವನ್ನು ಬೀಸಿದಾಗ ಅದು ಹೋಗಿ ದೊಡ್ಡ ಸಮುದ್ರದಲ್ಲಿ ಬಿತ್ತು. ಆಗ ಆಗ ಸಮುದ್ರದೊಳಗಿನ ಮೀನುಗಳು ಸತ್ತು ಹೋಗುತ್ತವೆ. ಅಲ್ಲಿಗೆ ಮಕ್ಕಾ ಸ್ಥಾನವು ನೆಲೆಗೊಂಡಿತು. ಮಕ್ಕಾ ಸ್ಥಾಪಿಸಿದ ನಂತರ ಇಬ್ರಾಹಿಂ ಖಲಿಲುಲ್ಲಾ ಅವರು ಮುಕ್ತಿ ಪಡೆದರು ಎಂದು ತಿಳಿಸುವುದರೊಂದಿಗೆ ಈ ರಿವಾಯತ್ ಪದ ಮುಕ್ತಾಯವಾಗುತ್ತದೆ. ಜೊತೆಗೆ ಇತ್ಯರ್ಥ ಪ್ರಾರ್ಥನೆ ಮಾಡುವುದರಿಂದ ಸ್ವರ್ಗ ಸಿಗುವುದು ಎಂದು ಸಹ ತಿಳಿಸುತ್ತದೆ.

ಐತಿಹಾಸಿಕವಾಗಿ ಹೆಸರು ಪಡೆದಿರುವ ಕರ್ಬಲ ಯುದ್ಧದ ಕುರಿತು ಹಲವಾರು ಮೊಹರಂ ಪದಗಳು ದೊರಕುತ್ತವೆ. ಅದರಂತೆ ದೊರೆತ ಒಂದು ರಿವಾಯತ್ ಪದವು ಕರ್ಬಲದ ದಾರುಣ ಸ್ಥಿತಿಗತಿಯನ್ನು ತಿಳಿಸುತ್ತದೆ. ಕರ್ಬಲದ ಅಡವಿಯಲ್ಲಿ ಹಸನ್ ಹುಸೇನ್ ಪರಿವಾರದವರು ನೀರು ಇಲ್ಲದೇ ಮೂರು ದಿನವಿಡೀ ಬಳಲುತ್ತಾರೆ. ದುರುಳ ಯಾಜೀದರು ಅವರೊಂದಿಗೆ ಕರ್ಬಲದಲ್ಲಿ ಕದನ ಹೂಡಿದರು. ಆ ಕದನದಲ್ಲಿ ಕುರಿಕೋಳಿಯಂತೆ ಹಸನ್ ಶರಣರ ಗೋಣು ಕೊಯ್ದುರು. ಮಕ್ಕಳಾದ ಅಸ್ಗರ್ ಅಲಿ ಅಲಿ ಅಬ್ಬಾಸನನ್ನು ಕೊಂದರು.

ಘೋರ ಕದನ ನಡೆದು ಆಕಾಶ ಭೂಮಿ ನಡುಗಿತು. ಕರ್ಬಲದ ಮಣ್ಣು ರಕ್ತದಿಂದ ಕೆಂಪಾಗಿತು. ಪ್ರಳಯ ಕಾಲವನ್ನು ನೆನಪಿಸುವಂತೆ ಮಾಡಿತು. ಈ ಯುದ್ಧದ ಕಾಲ್ಪನಿಕ ಚಿತ್ರವು ಕರ್ಣ ಮತ್ತು ಅರ್ಜುನರ ನಡುವಿನ ಯುದ್ಧದ ಸಮಯದಲ್ಲಿ ಭೂಮಿ ಆಕಾಶ ನಡುಗಿ ಭೂಮಿ ಕೆಂಪಾಗಿ, ಪ್ರಳಯ ನೆನಪಾಯಿತು ಎನ್ನುವ ಕಾಲ್ಪನಿಕ ಚಿತ್ರಕ್ಕೆ ಹೊಂದಿಕೆಯಾಗುತ್ತದೆ ಎಂಬ ಕಲ್ಪನೆ ಈ ಕೆಳಗಿನ ಮೊಹರಂ ಪದವಾದ ಕರ್ಬಲ ಯುದ್ಧ ಚರಿತ್ರೆಯಿಂದ ತಿಳಿದುಬರುತ್ತದೆ.

ಕರ್ಬಲದ ಅಡವಿಯಲ್ಲಿ । ಕಷ್ಟದಲ್ಲಿ ಸಿಲುಕಿ ಹುಸೇನಾ
ನೀರು ಇಲ್ಲದಿನ್ನಾ । ಆಗಿ ಮೂರು ದಿನಾ
ಸಣ್ಣ ಸಣ್ಣ ಮಕ್ಕಳು ಇನ್ನಾ । ಬಾಯಿ ಆರಿ ಬಳಲಿ ತಾನಾ ।
ಭೂಮಿಯನ್ನು ಬಗಿತಾರೋ ಬಾನು ಸಖಿನಾ
ಕುಂತು ಅಳುವರಿನ್ನಾ । ಕುಲು ಸುಮುಜ್ಯೆನಾ ॥
ಸವಾಲ್ ಜವಾಬ ಪದಗಳು

(ದಾವನಸಾಬ ಅತ್ತಾರ್, ಆಬಲಕಟ್ಟಿ)

ಒಂದು ಜನಪದ ಕಲೆಯು ಜೀವಂತವಿರಬೇಕಾದರೆ ಅದು ಜನರ ಬಾಯಿಯಲ್ಲಿ ನಿರಂತರವಾಗಿ ನಲಿದಾಡುತ್ತಿರಬೇಕು. ಒಂದು ಗಂಡು, ಹೆಣ್ಣಿನ ಸಂವಾದ ಹೊಂದಿದ ಕತೆಯಾಗಿರಬೇಕು ಇಲ್ಲವೇ ಗಂಡು ಗಂಡಿನ ವಾಗ್ವಾದದ ಕಥೆಯಾಗಿರಬೇಕು. ಇಲ್ಲವೇ ಚಾರಿತ್ರಿಕ ವಿಷಯವನ್ನು ಎತ್ತಿಕೊಂಡು ಚರ್ಚಿಸುವುದು ಅನುಕೂಲ.

ಮೊಹರಂ ಕಾಲದಲ್ಲಿ ಅಥವಾ ಕೆಲವು ಸ್ಥಳೀಯ ಉರುಸುಗಳಲ್ಲಿ ಈ ಸವಾಲ್ ಜವಾಬ್ ಪದಗಳನ್ನು ಹಾಡುವುದುಂಟು. ರಿವಾಯತ್ ದಾಟಿಯ ಸವಾಲ್ ಜವಾಬ್ ಪದಗಳ ಜೊತೆಗೆ ಇತ್ತೀಚಿನ ಕವಿಗಳು ರಚಿಸಿದ ಪದಗಳನ್ನು ಹಾಡುವರು. ಇವುಗಳಲ್ಲಿ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಇಸ್ಲಾಮೇತರ ಧರ್ಮಕ್ಕೆ ಸಂಬಂಧಿಸಿದ ಸವಾಲ್ ಜವಾಬ್ ಪದಗಳುಂಟು. ಕೇಳುಗರಲ್ಲಿ ಏಕಕಾಲಕ್ಕೆ ಕುತೂಹಲವನ್ನು ಕೆರಳಿಸುತ್ತದೆ. ಅವರ ಮನಸ್ಸಾಕರ್ಷಿಸುತ್ತವೆ. ಇಂತಹ ಸವಾಲ್ ಜವಾಬ್ ಪದಗಳನ್ನು ಮೊಹರಂ ಹಬ್ಬದಲ್ಲಿ ಹಾಡುತ್ತಾರೆ.

ಎಲ್ಲೋಹ ಕರೀ ನಿಮ್ಮ ಶ್ಯಾಹೀರ ಕೊಟ್ಟು ಹೋಗಲಿ ಇದಕ ಉತ್ತರ
ಖಾಲೀ ಖಟಪಟ ಯಾಕೋ ಶ್ಯಾಹೀರಯಾವಲ್ಲಿ ಕಲಿತಿದಿ ಹಲಲ್ ಖೋರ ।
ಹಲ್ಲ ಕಿಸಿತಿದಿ ನೀನು ಹದಿನಾರು ಜಾತಿ ಜಲ್ಮಕ್ಕೆ ನಾಚಿಕಿಲ್ಲೊ ಪೋರ ।

(ಹುಸೇನಿ ಮಕಾನಾದರ, ಕುದುರೆಮೋತಿ)

ಎಂದು ಮೊಹರಂ ಪದದ ಹಾಡುಗಾರ ಸವಾಲನ್ನು ಆರಂಭಿಸುತ್ತಾನೆ. ಮತ್ತೊಬ್ಬ ಸವಾಲ್‌ಕಾರರನ್ನು ಕುರಿತು ನಿಮ್ಮ ಕವಿ ಎಲ್ಲಿರುವನೆಂದು ನನ್ನ ಸವಾಲಿಗೊಂದು ಉತ್ತರವನ್ನು ಕೊಟ್ಟು ಹೋಗಲಿ ಎಂದು ಹಲುಬುತ್ತಾನೆ. ಹಾಗೆಯೇ ಅವನಿಗೆ ಯಾವಾಗ ಕಲೀತಿದಿ, ಹಲಲ್ ಕೋರನೆಂದು ಹದಿನಾರು ಜಾತಿ ಜನ್ಮಕ್ಕೆ ಜನಾಚಿಕೆ ಇಲ್ಲವೆಂದು ಮೂದಲಿಸುತ್ತಾನೆ. ಇದು ಕೇಳುಗರಲ್ಲಿ ಕುತೂಹಲವನ್ನು ಹುಟ್ಟಿಸುತ್ತದೆ.

ಕಠೋರ ಭಾಷೆಯಲ್ಲಿ, ಕಠೋರ ಪದಗಳಲ್ಲಿ ನಿಂದಿಸುವ ಈ ವೈಖರಿ ಕುತೂಹಲವನ್ನು ಹುಟ್ಟಿಸುತ್ತದೆ. ಜನರು ಕೂಡ ಇದಕ್ಕುತ್ತರವಾಗಿ ಜವಾಬು ಏನು ಬರುತ್ತದೆಂದು ನಿರೀಕ್ಷಿಸುತ್ತಾ ಇರುತ್ತಾರೆ. ಹಾಗೆ ಈ ಮೊಹರಂ ಪದ ಮುಂದುವರಿದು

ಪೊಳ್ಳು ಮಾತಿನ ಶ್ಯಾಹಿರಾ ಹೆಂಗಸರ ಮುಂದೆ ಇವನ ಬಡಿವಾರ
ಹುಡಿಕ್ಯಾಡಿ ತಗದೀನಿ ಶ್ಯಾಸ್ತರಾ. ಲಗು ಹುಡಿಕಿಕೊ ಇದಕ್ಕೆ ಉತ್ತರ
ಸತ್ಯವಂತ ಮೌಲಾಲಿ ಶರಣರ ದಪನ್ ಮಾಡಿದವರು ಯಾರ ಅವರ ।

ಪ್ರಾಣಾ ಬಿಟ್ಟಿದ್ದು ಯಾವ ವಾರ ತಿಳಿದೇಳೋ ತಲಹರಕ ಕುಂಬಾರ
ತಡ ಮಾಡದೆ ಕೇಡು ಇದಕ ಉತ್ತರ ಇಲ್ಲಂದ್ರ ಬಡಿದೇವು ಕುಂಡಿಗೆ ಕೇರಾ
ಹುಡಿಕ್ಯಾಡಿ ಹಾಕೀನಿ ಶಾಸ್ತ್ರಾ ಇಲ್ಲಿಂದ ಪಾರಾಗಿ ಸೇರೋ ಊರಾ।

(ಅಕ್ಬರ್ ಸಿ., ಶಾಲಿಮಿರ್ಚಿ, ಕುದುರೆಮೋತಿ)

ಎನ್ನುವ ಸಂಭಾವಣೆ ಮಾತುಗಳ ಪರಸ್ಪರರಲ್ಲಿ ನಡೆಯುತ್ತದೆ. ಎದುರಾಳಿ ಹಾಡುಗಾರನಿಗೆ ಪೊಳ್ಳು ಮಾತಿನ ಶ್ಯಾಹೀರ ಎಂದು ಹೆಂಗಸರ ಮುಂದೆ ಇವನ ಬಡಿವಾರ ಎಂದು ಅವನನ್ನು ನಿಂದಿಸುವುದು.

ಯಾಕೋ ನಮ್ಮಣ್ಣ ಸವಾಲ್ ಸಾಕೋ ಬೇಕಣ್ಣ
ಸವಾಲಿನೊಳು ಸಾರಿ ಹೇಳುವ ಕಳಕೊಂಡ್ಯೋ ಚೋಣ್ಣಾ
ಹೆಜ್ಜೆ ಅಲ್ಲದೇ ತಮ್ಮಾ ಕಾಲಿನ ಕಾಲಿನ ಗೆಜ್ಜೆ ಬಿಚ್ಚಲೇ
ಹೆಜ್ಜಿ ಹೆಜ್ಜೆಗೆ ಮೀಸಿಕಿತ್ತೆವು ಬಹಳ ಜೋಕೆಲೆ
ಹಲ್ಲಹದಿನಾರು ಮುರಿಸಿಕೊಂಡ್ಯೋ
ಚೂರು ಮೂರು ದುಡ್ಡಿಗೆ ಶೇರ ತಂದು ಬಡಿದೇವ ಕೆರಾ[೪೬]

ಎನ್ನುವ ಗಂಭೀರ ಸ್ವಭಾವದ ಸವಾಲ್ ಪದ ಅಚ್ಚರಿಯನ್ನು ಹುಟ್ಟಿಸುತ್ತದೆ. ಸವಾಲ್ ಸಾಕೋಬೇಕಣ್ಣ ಕಳಕೊಂಡ್ಯೋ ಚೋಣ್ಣಾ ಕಾಲಿನ ಗೆಜ್ಜೆ ಬಿಚ್ಚಲೇ ಮೀಸೆ ಕಿತ್ತೇವು. ಹಲ್ಲಹದಿನಾರು ಮುರಿಸಿಕೊಂಡ್ಯೊ ಈ ಮೊದಲಾದ ಪದಗಳ ಜನಪದ ಮಾತಿನ ಸೊಗಡನ್ನು ವಿಡಂಬನೆಯನ್ನು ತಿಳಿಸುತ್ತದಲ್ಲದೇ ಎದುರಾಳಿಯನ್ನು ಹೇಗೆ ಮಣಿಸಬಹುದು, ಎಂತೆಂತಹ ಗಂಭೀರ ಸವಾಲುಗಳಿರುತ್ತವೆಂಬುದನ್ನು ತಿಳಿಸುತ್ತವೆ.

ಸ್ವಂತ ಸಭಾ ಕೇಳಿರಿ ಹಿರಯರಾ ಬಂದಾನ್ರಿ ಇಲ್ಲಿ ಹೊಸತಾಗಿ ಕಲಿತಾವ।
ಕದನಾ ಹಚ್ಚಿಕಡೆಗಾಗಾವ ಇನ್ನು ಬಿಟ್ಟು ಬಿಡ್ರಿ ನಡೆಲ್ಲ ನಿಮ್ಮ ಆಟ।
ನಮ್ಮ ಕೈಯಾಗ ಸಿಕ್ಕು ಆಗಿ ಹೋದ್ರಿ ಬಹಳ ಚಿಪ್ಪ।
ಕೈಯಾಗ ಚಡಿ ಹಿಡಕೊಂಡು ಮಾಡುವೆ ಆರ್ಬಟ।
ಬಾಯಿಲೆ ಅಕ್ಷರ ನುಡಿಯೋ ಮುಡುದಾರ।

(ಇಬ್ರಾಹಿಂಸಾಬ, ಬಹಾದ್ದೂರ್ ಬಂಡಿ)

ಎಂದು ಆರಂಭವಾಗುವ ಮತ್ತೊಂದು ಮೊಹರಂ ಪದದಲ್ಲಿ ಹೊಸತಾಗಿ ಕಲಿತವನು ಬಂದಿರುವನೆಂದು ಅವ ಜಗಳ ಇಟ್ಟು ಹೋಗಾವನೆಂದು. ಅಂಥವರ ಆಟ ನಡೆಯುವುದಿಲ್ಲವೆಂದು ನಮ್ಮಂಥ ಅನುಭವಸ್ಥರ ಮುಂದೆ ಎದುರಾಳಿಯ ಆಟ ನಡೆಯುವುದಿಲ್ಲವೆಂದು ಏನಾದರೊಂದು ಪದ ನುಡಿದು ಜವಾಬು ನೀಡಬೇಕೆನ್ನುವ ಭಾವ ತಿಳಿದುಬರುತ್ತದೆ. ಈ ಮೊಹರಂ ಪದ ಮುಂದುವರಿದು ಒಂದು ಕಥಾನಕ, ಆಧ್ಯಾತ್ಮಿಕ ವಿಷಯ ತಿಳಿಸುತ್ತದೆ.

ಹಿರೇಬ್ಯಾನಿ ಹತ್ತಿವೂದೀಯ ಮಗಳು ಮಾಡ್ವಳು ಶೋಕ
ಕೈಕಾಲು ಬೆರಳು ಹೊಡೆದು ಹೋದವಪಕ್ಕ
ವಾರೀಗಿ ಗೆಳತಿಯರು ಹಾಸ್ಯ ಮಾಡಿ ಹೋದರು ನಕ್ಕಾ
ಹಾಕ್ಯಾಳೋ ಉಸುರಾ ಕಾಯೋನಿ । ಈಶ್ವರ ಅಲ್ಲಾ

(ರಾಮಚಂದ್ರಪ್ಪ ಆನೆಗೊಂದಿ)

ಕುಷ್ಠರೋಗಕ್ಕೆ ಬಲಿಯಾಗಿ ನೊಂದು, ಬೆಂದು, ಕೈಕಾಲು, ಬೆರಳುಗಳನ್ನು ಕಳಕೊಂಡು ಗೆಳತಿಯರೊಂದಿಗೆ ಅವಮಾನಗೊಂಡು ಅವಳು ಈಶ್ವರ ಅಲ್ಲಾನಿಗೆ ಮೊರೆಹೋದಳು. ಮನುಷ್ಯ ಪ್ರಯತ್ನ ಕೊನೆಗೊಂಡು ದೈವತ್ವಕ್ಕೆ ಮೊರೆಹೋದಳು. ಕಣ್ಣೀರು ಸುರಿಸುತ್ತಾ ಅಡವಿಯಲ್ಲಿ ಸಂಚರಿಸಿದಳು. ದಾರಿಯಲ್ಲಿ ಹುಲಿ-ಕರಡಿಗಳಾವು ಮುಟ್ಟಲಿಲ್ಲ. ನೋವಿನಿಂದ ಸೊರಗುತ್ತಾ ಹೋದಳು

ಹಿಡಿದಾಳು ದಾರಿ ಹೊಂಟಾಳು ನಾರಿ, ಹುಲಿ ಕರಡಿ ಮುಟ್ಟಲಿಲ್ಲ
ಹಗಲು ರಾತ್ರಿ ಬಾನಿಲಿಂದ ಅದಾಳು ಸಣ್ಣಾ ಹಾಕ್ಕಾಳೋ ಉಸರಾ

(ರಾಮಚಂದ್ರಪ್ಪ ಆನೆಗೊಂದಿ)

ಆ ಯಹೂದಿಯ ಮಗಳು ಸುತ್ತಾಡುತ್ತಾ ಗಿಡದ ಮೇಲೆ ರಕ್ತಸಿಕ್ತವಾದ ಪಾರಿವಾಳವನ್ನು ನೋಡುತ್ತಾಳೆ.

ಹುಸೇನ್ಶೈನಾ ಕದನಾ ಮಾಡಿದ ಬಹದ್ದೂರಾ
ಭಲ್ಲಿ ಕಾಳಗದಲ್ಲಿ ಪಶುಜಾತಿ ಪಾರಿವಾಳ
ರಕ್ತದಲ್ಲಿ ಮುಳುಗಿ ಹಾರೈತಿ ಮೇಲಾ
ಒಂದು ಗಿಡಕ ಕುಂತಿತು ನೋಡ್ಯಾಳು ಚಲುವಿ ಹರುಷದಿಂದ
ಪಕ್ಕ ರೆಕ್ಕೆ ಜ್ಯಾಡಿಸಿದರ ರಕ್ತ ಬಿದ್ದಿತ್ರಿ
ಮೊದಲಿನಂತೆವೂದೀಯ ಮಗಳು ರೂಪವಾದಳು ಉದ್ದಾರ
ಕುಂತುಕೇಳ್ರಿ ಹಿರಿಯರಾ ಪಾರಿವಾಳ ಹಾರಿತು ಮದೀನಾಕ[೪೭]

ದೇವರ ದಯೆ ಒಂದಿದ್ದರೆ ಏನೆಲ್ಲಾ ಒಳಿತು ಆಗಬಹುದೆಂಬುದಕ್ಕೆ ಇದೊಂದು ಉದಾಹರಣೆ. ಹಸೇನ ಹುಸೇನರು ಕಾಳಗ ಮಾಡಿದ ರಕ್ತದ ಮಡುವು ಪಾರಿವಾಳಕ್ಕೆ ತಾಗಿ ಆ ಪಾರಿವಾಳ ರೆಕ್ಕೆ ಬಡಿಯುವುದರ ಮೂಲಕ ಅವಳ ಕುಷ್ಠರೋಗ ಮಾಯವಾದಂತ ಕತೆ ತಿಳಿಯುತ್ತದೆ.

ಹಾಡು ಬಾರೋ ಕೈಯಾಗ ಸಿಕ್ಕೀದಿ ವೈರಿ
ಬಿಡುಬಿಂಕ ವೈಯಾರ ನಡಿಬೇಕು ಶಾಸ್ತ್ರದ ಸರಿ
ಕಡುಹಾರ ಹಾಕಿರಿ ಹೊಡೆತ ತಿಂದೀಯೇ ಮೊದಲ ಬಾರಿ

(ಗೌಸ್‌ಸಾಬ, ಕುದುರೆಮೋತಿ)

ಎಂದು ಆರಂಭಗೊಳ್ಳುವ ಈ ಮೊಹರಂ ಪದದಲ್ಲಿ ಹಾಡುಗಾರ ಮತ್ತೊಬ್ಬನಿಗೆ ಸವಾಲನ್ನು ಹಾಕುತ್ತಾನೆ. ಕೈಯಾಗ ಸಿಕ್ಕೀದಿ ಎಂದು ನಿನ್ನಲ್ಲಿರುವ ಬಿಂಕ ಅಹಂ ವೈಯ್ಯಾರ ಬಿಡಬೇಕೆಂದು ಧರ್ಮಶಾಸ್ತ್ರದ ಪ್ರಕಾರ ನಡೆಯಬೇಕೆಂದು ಇಲ್ಲದಿದ್ದರೆ ಹೊಡೆತ ತಿನ್ನುವಿಯೆಂದು ತಿಳಿದುಬರುತ್ತದೆ. ಅದಕ್ಕಾಗಿಯೇ ಆಕಾಶ ಜಾನಪದವೆಂಬ ಹೆಸರು ಬಂದಿರಬೇಕು. ನಿರೀಕ್ಷೆಗೂ ಮೀರಿದ ಸವಾಲುಗಳು ಬಂದಾಗ ಎದುರಿನ ಪಕ್ಷದವನನ್ನು ನಿರತರನಾಗುವುದಿಲ್ಲ. ಈ ಹಾಡನ್ನು ಹಾಡಿ ತೋರಿಸುತ್ತಾರೆ. ಅಲ್ಲಿಯೂ ಕೂಡ ಪಲ್ಲ, ನುಡಿ ದುಮಾಲಿ ಯಾವುದರಲ್ಲಿಯಾದರೂ ಜವಾಬು ಕೊಡಬಹುದು. ಆದರೆ ಪಲ್ಲದಿಂದಲೇ ಜವಾಬ್ ಕೊಡುವ ಹಾಡನ್ನು ನೋಡಬಹುದು.

ಗರ್ಕುಲಿ ಮಾಡಿ ಆಡುವ ಹೆಣ್ಣ ತಿರಕರಂತೆ ಒದರಬೇಡ
ಮುರ್ಕಾ ಮಾಡೋ ನಿನ ಮೂಗಿನ ತುದಿಗಿ ಮಿಂಚೈತಿ ನಮಗಂಡ
ನೀ ಗುರು ಗುರು ಬೀಸುವ ಗೋಧಿ ಕಲ್ಲಿನ ಗೂಟೈತಿ ನಮಗಂಡ
ನಿನ ಬುರಕಿ ಹಾರಿಸಿ ದರಕಾರಿಲ್ಲದೆ ಮೆಟ್ಟೈಲೆ ನಮಗಂಡ
ಶರೀರದೊಳು ಪಂಚ ಪ್ರಾಣಗಂಡ ಸಕಾರದೊಳು ಸರ್ವೇಶ್ವರ
ಪರಮೇಶ್ವರ ಹನನಮಗಂಡ(ಜಿ)

(ರಜಾಕಸಾಬ್, ಕುದುರೆಮೋತಿ)

ಹೀಗೆ, ಹೆಣ್ಣಿನ ಮೈ ಮೇಲಿರುವ ಆಭರಣಗಳು ಹಿಡಿದು ಆಕೆ ದಿನನಿತ್ಯ ಬಳಸುವ ಸಾಮಗ್ರಿಗಳಲ್ಲಿಯು ಗಂಡಿನ ಗುರುತನ್ನು ಹೇಳುವುದರ ಮೂಲಕ ಜವಾಬ್ ಕೊಡಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

**ಸವಾಲ್-ಜವಾಬ್ ಪದಗಳು**

ಸವಾಲ್-ಜವಾಬ ಪದಗಳಲ್ಲಿ ಗಂಡು ಹೆಣ್ಣಿನ ಸಂವಾದ ಹೊಂದಿದ ಕಥೆಯಾಗಿರಬೇಕು ಅಥವಾ ಗಂಡು ಗಂಡಿನ ವಾಗ್ವಾದದ ಕಥೆಯಾಗಿರಬೇಕು. ಇಲ್ಲವೆ ಚಾರಿತ್ರಿಕ ವಿಷಯವನ್ನು ಎತ್ತಿಕೊಂಡು ಚರ್ಚೆಯಲ್ಲಿ ಯಾರು ಬುದ್ಧಿವಂತರೆಂಬುದನ್ನು ಸಭೆ ನಿರ್ಣಯಿಸುತ್ತದೆ. ಸ್ಪರ್ಧೆಯಿದ್ದಾಗ ಮಾತ್ರ ಅದರ ಕುರಿತು ಅಭಿರುಚಿ ಹೆಚ್ಚಾಗಿರುತ್ತದೆ. ಸೋಲು ಗೆಲುವು ಮನುಷ್ಯರ ಗಮನವನ್ನು ಸೆಳೆಯುತ್ತದೆ. ಸವಾಲ್ ಮತ್ತು ಜವಾಬ್‌ನ ಹಾಡುಗಳು ಮಾತ್ರ ಸಮಕಾಲೀನ ಸಮಸ್ಯೆಗಳನ್ನು ಇಟ್ಟುಕೊಂಡು ಚರ್ಚಿಸಲು ಅನುಕೂಲಕರವಾಗಿದೆ. ಇಂಥ ಸವಾಲ್ ಜವಾಬ್ ಪದಗಳನ್ನು ಉರುಸ್ ಮತ್ತು ಮೊಹರಂ ಹಬ್ಬದಲ್ಲಿ ಹಾಡುತ್ತಾರೆ. ಸವಾಲ್-ಜವಾಬ್ ಪದಗಳು ಸವಾಲಿಗೆ ಜವಾಬು ಹೇಳುವ ಸನ್ನಿವೇಶವನ್ನು ಸೃಷ್ಟಿಸುತ್ತವೆ.[೪೮]

**ಸಲಾಂ ಪದಗಳು**

ಭಾರತ ದೇಶವು ಸಂಸ್ಕೃತಿಗಳ ತವರೂರು. ಹುಟ್ಟಿನಿಂದ ಹಿಡಿದು ಸಾವಿನವರೆಗೆ ತನ್ನದೇ ಆದ ಹಲವು ಹತ್ತು ಭಿನ್ನ ಬಗೆಯ ಸಂಪ್ರದಾಯ, ಪದ್ಧತಿಗಳನ್ನು ಆಚರಿಸುತ್ತಾರೆ. ವಿವಿಧ ಧರ್ಮಿಯರು ನಾನಾ ರೀತಿಯ ಆಚರಣೆಯಲ್ಲಿ ತೊಡಗುತ್ತಾರೆ. ಅಂತೆಯೇ ಹಿಂದುಗಳ ಯಾವುದೇ ಧಾರ್ಮಿಕ ಆಚರಣೆಯಲ್ಲಿ ಪ್ರಾರಂಭದಲ್ಲಿ ವಿಘ್ನಗಳ ನಿವಾರಣೆಗಾಗಿ ಗಣಪತಿಯನ್ನು ಸ್ಮರಿಸುವುದುಂಟು. ಶಿವಶರಣರು, ದಾಸರು ಹಾಡಿದ ವಚನ ಅಥವಾ ಕೀರ್ತನೆಗಳಲ್ಲಿ ಅವರವರ ಆರಾಧ್ಯದೈವಗಳ ಅಂಕಿತವನ್ನು ಬಳಸಿರುವುದುಂಟು. ಇದೇ ರೀತಿ ಮೊಹರಂ ಪದಗಳಲ್ಲಿಯೂ ಕೂಡ ಪ್ರಾರಂಭದಲ್ಲಿ ದೇವರನ್ನು ಕುರಿತು, ಗುರುಹಿರಿಯರನ್ನು ಕುರಿತು, ಚಿಕ್ಕವರನ್ನು ಕುರಿತು, ಗೌರವ ಸೂಚನೆಗಾಗಿ 'ಸಲಾಂ ಪದ'ಗಳನ್ನು ಹಾಡುತ್ತಾರೆ. ಇವುಗಳಿಗೆ ಸಲಾಂ ಪದಗಳು, ಶರಣು ಸೂಚಕ ಪದಗಳು ಮತ್ತು ಗೌರವ ಸೂಚಕ ಪದಗಳೆಂದು ಕರೆಯುತ್ತಾರೆ.[೪೯] ರಚನೆಯ ದೃಷ್ಟಿಯಿಂದ ಆರಂಭ, ಕಥಾಪ್ರಸಂಗ, ಮುಕ್ತಾಯ ಹೀಗೆ ಮೂರು ಭಾಗಗಳನ್ನು ಗುರುತಿಸಬಹುದಾಗಿದೆ. ಕೂಡಿರುವ ಭಕ್ತವರ್ಗಕ್ಕೆ ಆರಂಭದಲ್ಲಿ ಸಲಾಂ ಗೌರವ ಸೂಚಿಸುವುದರ ಮೂಲಕ ಆರಂಭಗೊಳ್ಳುತ್ತದೆ.

ಪಾಕ ದಿಲಾಸೇ ಪಡೋಜಿ ಕಲಾಮ್
ಮಹಮ್ಮದ್‌ಪರ್ ದರೋದ ಸಲಾಂ
ಆದಂಬಾವಾ, ಅಮ್ಮಾಹೂವ್ವಾ ॥

ಈನ್ಕಿ ದುವ್ವಾ ಸಬಾಪರವೂರಾ
ಇನ್‌ಸೇ ಬನ್‌ಗಾಯಿ ದುನಿಯಾ ತಮ್‌ಮ್
ಆದಮ್ ಹವ್ವಾಕೋ ಪೈಲಾ ಸಲಾಂ ॥ [೩೦]

ಎಂದು ಆರಂಭವಾಗುವ ಈ ಮೊಹರಂ ಪದಗಳಲ್ಲಿ ನಿರ್ಮಲವಾದ ಮನಸ್ಸಿನಿಂದ ಕಲ್ಮಾ ಓದಬೇಕೆಂದು, ಕೊನೆಯ ಪೈಗಂಬರ್ ಅವರಿಗೆ ಸಲಾಂ ಎಂದು ಇಸ್ಲಾಂ ಧರ್ಮದ ಪ್ರಕಾರ ಪ್ರಥಮ ಮನುಷ್ಯರೆಂದು ನಂಬಲಾದ ಆದಂ ಅವರಿಗೆ ಮೊದಲು ಸಲಾಂ ಎಂದು ಹಾಗೇ ಅವರ ಕೃಪೆಯಿಂದ ಜಗತ್ತು ಸೃಷ್ಟಿಯಾಗಿದೆ. ಅದಕ್ಕಾಗಿ ಅವರಿಗೆ ಮೊದಲು ಸಲಾಂ ಎಂದು ಹಾಡಲಾಗುತ್ತದೆ.

ತಂದೆತಾಯಿಗೆ ಶರಣಾ
ಚೆಂದದಿಂದ ಕಂದಾ ನಿಮಗೆ ಮಾಡುವೆ ಶರಣಾ
ಹರುಷದಿಂದ ಶಿರಬಾಗಿ ನಾನು ಮಹಮ್ಮದ್‌ನಿಗೆ ಮಾಡುವೆ ಶರಣಾ ॥

ಇಮಾಮ್ ಹುಸೇನ ಹಸನರಿಗೆ ಮಾಡುವೆ ಶರಣಾ
ಹಜರತ ಮಹಿಬೂಬಸುಬಾನಿ ಶರಣಾ
ಅವರ ಪಾದಕ್ಕೆ ವಂದನಾ ॥[೩೧]

ಎಂದು ಶುರುವಾಗುವ ಈ ಮೊಹರಂ ಪದದ ಆರಂಭದಲ್ಲಿ ಹಡೆದ ತಂದೆ, ತಾಯಿಗಳ ಸ್ಮರಣೆ ಕಂಡುಬರುತ್ತದೆ. ಏಕೆಂದರೆ ತಂದೆ ತಾಯಿಗಿಂತ ಮಿಗಿಲಾದ ದೇವರಿಲ್ಲ ಎಂಬ ನಂಬಿಕೆ ಭಾರತಿಯರಲ್ಲಿದೆ. ಅವರ ಸಾರ್ಥಕ ಪರಿಶ್ರಮ ಗಮನಿಸಿ ಹಾಡುಗಾರರು ನೆರೆದ ಎಲ್ಲರೆದುರು ಮಾತಾ ಪಿತೃಗಳಿಗೆ ಶರಣು ಸೂಚಿಸುತ್ತಾರೆ. ಕೇವಲ ಹಿರಿಯರಿಗಲ್ಲದೆ, ಕಿರಿಯ ಮಗುವಿಗೂ ಗೌರವ ಸೂಚಿಸಿ ತಮ್ಮ ದೊಡ್ಡತನವನ್ನು ಮೆರೆಯುತ್ತಾರೆ. 'ದೇವನೊಬ್ಬ ನಾಮ ಹಲವು' ಎನ್ನುವಂತೆ ಮಹಮ್ಮದ್ ಕರ್ಬಾಲದಲ್ಲಿ ದುರುಳಯಾ ಜೀವನೊಂದಿಗೆ ಹೋರಾಡಿ ವೀರ ಮರಣವನ್ನಪ್ಪಿದ ಹಸನ್ ಹುಸೇನ್, ಸತ್ಯಶರಣ ಮಹಿಬೂಬ ಸುಬಾನಿ ಎಲ್ಲರನ್ನು ಸ್ಮರಿಸಿಯೇ ಮುಂದೆ ಸಾಗುತ್ತಾರೆ.

ಮಹಾತ್ಮಾಗಾಂಧಿ ನೆಹರೂ ಅವರಿಗೆ ಮಾಡುವೆ ಶರಣಾ
ಸಾಧುಸತ್ ಪುರುಷರಿಗೆ ಮಾಡುವೆ ನಾನು ಶರಣಾ
ಆರು ಗುಣಗಳು ಅಳಿದವರಿಗೆ ಮಾಡುವೆ ಶರಣಾ
ಪೀರ ನಮ್ಮ ಮಹಿಬೂಬ ಶರಣಾ ಹಿಡಿಯುವೆ ಅವರ ಶರಣ
ಸರಿಯಾಗಿ ಶರಣರ ನಮ್ಮನ್ನು ಕಾಪಾಡುವರನ್ನ ॥[೩೨]

ಇಸ್ಲಾಂ ಧರ್ಮದ ಆಧ್ಯಾತ್ಮಿಕ ಪುರುಷರಲ್ಲದೇ ಈ ದೇಶದ ಐತಿಹಾಸಿಕ ವ್ಯಕ್ತಿಗಳಾದ ಗಾಂಧೀಜಿ, ನೆಹರೂ ಅವರನ್ನು ಮೊಹರಂ ಪದಗಳಲ್ಲಿ ಸ್ಮರಿಸಲಾಗುತ್ತದೆ. ಇದು ಜನಪದರ

ಕೈಚಳಕ ಎನ್ನಬಹುದು. ಧರ್ಮವನ್ನು ಕಟ್ಟಿದವರಲ್ಲದೇ ದೇಶವನ್ನು ಕಟ್ಟಿದವರ ನೆನಪು ಚಿರಕಾಲವಾಗಿರಲೆಂಬುದು ಅವರ ವಿಚಾರವಾಗಿರಬಹುದು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಗಾಂಧೀಜಿ, ನೆಹರೂ ಅವರಿಗೆ ಶರಣು ಸೂಚಿಸಿದ್ದಾರೆ. ಎಲ್ಲ ಧರ್ಮದ ಸಾಧು-ಸಂತರನ್ನೊಳಗೊಂಡು ಸತ್‌ಪುರುಷರಿಗೂ ಶರಣು ಸೂಚಿಸಿದ್ದಾರೆ. ಅದೇ ರೀತಿ ದೇವ ಮಹಿಬೂಬ ಶರಣ ಅವರ ಚರಣ ಹಿಡಿದರೆ, ಅರ್ಥಾತ್ ನಂಬಿದರೆ ಆ ಶರಣ ನಮ್ಮನ್ನು ಕಾಪಾಡುವನೆಂದು ಈ ಮೊಹರಂ ಪದದ ಪ್ರಮುಖ ನುಡಿ ಹೇಳುತ್ತದೆ.

ಸಭೆಯೊಳು, ಮೊದಲು ನಾಬಂದೆ ಶಿರಬಾಗಿ ಮಾಡುವೆ ಸಲಾಂ
ಅಲ್ಲಮಪ್ರಭುವಿಗೆ, ಬೀಬಿ ಪಾತೀಮಾಗೆ ಶಿರಬಾಗಿ ಮಾಡುವೆ ಸಲಾಂ
ತಾಯಿ ತಂದೆಗೆ ಮಾಡುವೆ ಸಲಾಂ ॥

ವಿದ್ಯಾಬುದ್ಧಿ ಕಲಿಸಿದ ಗುರುವಿಗೆ ಶಿರಬಾಗಿ ಮಾಡುವೆ ಸಲಾಂ
ನನ್ನ ಸರಿಗೂಡಿ ಹಾಡುವ ಶ್ಯಾಹೀರನಿಗೆ ಮಾಡುವೆ ಸಲಾಂ
ಹೀಗಿರುವ ರಾಜಧಾನಿಗೆ ಬಡದೇ ಶಿರಬಾಗಿ ಮಾಡುವೆ ಸಲಾಂ ॥[೫೩]

ದುಷ್ಟ ಯಾಜೀದನೊಂದಿಗೆ ಹೋರಾಡಿ
ಮರಣವನಪ್ಪಿದ ಹಸನ್ ಹುಸೇನರಿಗೆ ಮಾಡುವೆ ಸಲಾಂ
ಬಹದ್ದೂರಬಂಡಿ ಯಮನೂರ ಸ್ವಾಮಿಗೆ ಮಾಡುವೆ ಸಲಾಂ ॥

ಈ ಮೊಹರಂ ಪದದಲ್ಲಿ ಹಾಡಿನ ಆರಂಭದ ಸಂಪ್ರದಾಯಕ್ಕೆ ತಕ್ಕಂತೆ ಸಭೆಗೆ ಬಂದಿರುವ ಜನರಿಗೆ ಅಲ್ಲಮಪ್ರಭು ದೇವರು, ಬೀಬಿ ಪಾತೀಮ ಜನ್ಮ ನೀಡಿದ ತಾಯಿ ತಂದೆ, ಗುರು, ಕವಿಗೆ ಸಲಾಮು ಹೇಳುತ್ತಾನೆ. ಅಲ್ಲದೆ ರಾಜಧಾನಿಗೂ ಸಲಾಂ ಹೇಳುತ್ತಾ ಸಾರ್ವತ್ರಿಕ ಗೌರವ ನಮನ ಸೂಚಿಸುತ್ತಾನೆ. ಮೊಹರಂ ಘಟನೆಗೆ ಕಾರಣವಾದ ಮಹಮ್ಮದ್ ಪೈಗಂಬರರ ಮೊಮ್ಮಕ್ಕಳಾದ ಹಸನ್ ಹುಸೇನರಿಗೂ ಸಲಾಂ ಹೇಳುತ್ತಾ ಸ್ಥಳೀಯ ಹಸನ್ ಬಹದ್ದೂರ ಬಂಡಿಯ ಯಮನೂರ ಸ್ವಾಮಿಗೆ ಶಿರಬಾಗಿ ಸಲಾಂ ಎಂದು ನೆನೆದಿರುತ್ತಾನೆ.

ಕುಂತಿರಿ ಅಸಲಾ ಬುದ್ಧಿವಂತರೆಲ್ಲಾ
ಪಂಡಿತರಿಗೆ ನಮ್ಮ ಸಲಾಂ ಮೊದಲಾ
ಸಲಾಂ ಮಾಡಿದ್ದ ಬಳಿಕ ತೋಡಿ ನೀನು ಹಾಡಬೇಕಾ

ಸುಳ್ಳು ಸುಳ್ಳು ಯಾಕ ವಾದಿಹಗಲೆಲ್ಲ
ನಾಡಿನ ಮೇಲಾಸರ್ವ ಶ್ಯಾಹೀರಗೆಲ್ಲಾ
ಹಾಕೀನಿ ಕುದ್ರಿಮೋತಿ ಶ್ಯಾಹೀರಾನಾನೊಂದ ಬಿಕ್ಕಟ್ಟು ಸವಾಲು ॥[೫೪]

ಈ ಮೊಹರಂ ಪದವು ಒಂದು ಸವಾಲ್ ಪದವಾಗಿದೆ. ಆದರೂ ಮೊಹರಂ ಪದದ ಪರಂಪರೆಯಂತೆ ಸಲಾಮು ಹೇಳುವ ಕಲೆ ವ್ಯಕ್ತವಾಗಿದೆ. ಅದರಂತೆ ಹಾಡಿನ ಸಂದರ್ಭದಲ್ಲಿ ಕೂಡಿರುವ ಜನರಿಗೆ ಬುದ್ಧಿವಂತರೆಂದು, ಪಂಡಿತರೆಂದು ತಿಳಿಯುವ ಔದಾರ್ಯ ಹಾಡುಗಾರರಲ್ಲಿದೆ. ಅದಕ್ಕಾಗಿ ಅಸಲಾ ಬುದ್ಧಿವಂತರಿಗೆ, ಪಂಡಿತರಿಗೆ ಸಲಾಮು ಹೇಳಿ ಶ್ಯಾಹೀರರು ಸವಾಲುಗಳಲ್ಲಿ ತೊಡಗುತ್ತಾರೆ.

ಮೊದಲು ಸಭೆಗೆ ನಾ ಬಂದೆ ಕರ ಜೋಡಿಸಿ ಮಾಡುವೆ ಸಲಾಂ
ಹತ್ತು ದೈವದೊಳಗೆ ಮೇಲಾಗಿ ಸಾರುವೆ ಶರಣರ ಲೀಲಾ
ವಿದ್ಯೆ ಕಲಿಸಿದ ಗುರುವಿಗೆ ಮೊದಲು ಮಾಡುವೆ ಸಲಾಂ ॥[೩೫]

ಎಂದು ಹೇಳುತ್ತಾ ಎಂದಿನ ಪರಂಪರೆ ಮುಂದುವರಿಯುತ್ತದೆ. ಹತ್ತು ದೈವದೊಳಗೆ ಶರಣರ ಲೀಲೆಯನ್ನು ಹಾಡಿನ ಮೂಲಕ ಸಾರುವ ಅಥವಾ ಪ್ರಚಾರ ಮಾಡುವ ಪ್ರಯತ್ನ ಮಾಡುತ್ತಾನೆ. ಶರಣರ ಲೀಲೆಗಳನ್ನು ಸಾರುತ್ತಾ ಅವರ ಕೃಪೆಗೆ ಒಳಗಾಗುವಂತೆ ಮಾಡುವ ಚತುರತೆ ಮೊಹರಂ ಪದಗಳಲ್ಲಿವೆ.

ಈ ಮೊದಲಾದ ಸಲಾಂ ಪದಗಳು ಕೊಪ್ಪಳ ಜಿಲ್ಲೆಯಾದ್ಯಂತ ಗ್ರಾಮಗಳಲ್ಲಿ ದೊರಕುತ್ತವೆ. ಸಲಾಮ್ ಪದಗಳು ಅಲ್ಲದೇ ಇತರೆ ಸಲಾಂ ಪದಗಳಲ್ಲಿ "ಪಂಡಿತರ ಪಂಥರ ಮುಂದ ಶಾಸ್ತ್ರ ತಗರೀನಿ ಒಂದ, ಕೇಳಿರಿ ಧ್ಯಾನಕ ಚಂದ ಜನರೆಲ್ಲ, ಚಿತ್ತಿಟ್ಟ ಕೇಳಿರಿ ದೈವಾ, ಶರಣಾ ಸಲಾಂ ತಗೊಳಿ ದೈವರೆಲ್ಲಾ". ಈ ಮೊದಲಾದ ಪದಗಳು ಮೊಹರಂ ಪದಗಳಲ್ಲಿ ಬರುವುದರಿಂದ ಇಸ್ಲಾಂ ಸಂಸ್ಕೃತಿಯಲ್ಲಿ ಜನಪದ ಸೊಗಡಿನ ಸ್ವರೂಪ ಕಾಣಬಹುದು.

### ೪.೭. ಗೊಂದಲಿಗರ ಹಾಡುಗಳು

ಕೊಪ್ಪಳ ಜಿಲ್ಲೆಯ ಧಾರ್ಮಿಕ ವೃತ್ತಿಗಾಯಕರಲ್ಲಿ ಗೊಂದಲಿಗರು ಪ್ರಸಿದ್ಧರು. ಇವರು ನೀಡುವ ಕಲಾ ಪ್ರದರ್ಶನಕ್ಕೆ 'ಗೊಂದಲ ಮೇಳ', 'ಗೊಂದಲ ಪೂಜೆ', 'ಗೊಂದಲ ಹಾಕುವುದು' ಎಂಬ ಹೆಸರುಗಳಿವೆ. ಹಾಡಿಗೆ ತಕ್ಕಂತೆ ಜೋರಾಗಿ ವಾದ್ಯ ನುಡಿಸುವ ಮೂಲಕ ಗೊಂದಲವೆಬ್ಬಿಸುವುದರಿಂದ ಈ ಹೆಸರು ಬಂದಿರಬೇಕೆಂದು ಕಲಾವಿದರು ಹೇಳುತ್ತಾರೆ. ವಿಶೇಷವಾಗಿ ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುವ ಗೊಂದಲಿಗರು ಪರಂಪರಾನುಗತವಾಗಿ ಬಂದ ಈ ಕಲೆಯನ್ನು ತಮ್ಮ ಪ್ರವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ.

ಮಹಾರಾಷ್ಟ್ರದವರಾದ ಗೊಂದಲಿಗರು ಶಿವಾಜಿ ಕಾಲದಲ್ಲಿ ಮುಸಲ್ಮಾನರು ಆಳುತ್ತಿದ್ದ ವಿಜಾಪುರಕ್ಕೆ ಬಂದು ಗೊಂದಲ ಕಲೆಯನ್ನು ಗೂಢಚರ್ಯೆಗೆ ಬಳಸಿಕೊಂಡರು. ಇವರ ಕುಲದೇವತೆ ಮಹಾರಾಷ್ಟ್ರ ತುಳಜಪುರದ ಅಂಬಾಭವಾನಿ. ಕೆಲವರು ಬೆಳಗಾವಿ ಜಿಲ್ಲೆಯ ಸವದತ್ತಿಯ ರೇಣುಕಾ ಎಲ್ಲಮ್ಮನನ್ನೂ ಆರಾಧಿಸುವುದುಂಟು. ಗೊಂದಲಿಗರು ಗೊಂದಲ ಹಾಕುವವರಾದರೆ, ಬುಡಬುಡಕೆಯವರು ಶಕುನ ಹೇಳುವರು. ಅರೆಪಂಚಾಂಗದವರು ಊರೂರು ತಿರುಗುತ್ತ ಜ್ಯೋತಿಷ ಹೇಳಿದರೆ, ಸಿಂಗದವರು ನಪೂರಿ ವಾದ್ಯ ನುಡಿಸುತ್ತಾರೆ.

### ಗೊಂದಲಿಗ

ಮರಾಠಿಯ ಗೋಂದಳ್ ಶಬ್ದ ಕನ್ನಡ ಗೊಂದಲ ಶಬ್ದದಿಂದ ಉತ್ಪತ್ತಿಗೊಂಡಿದೆಯೆಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಇದಕ್ಕೆ ಪೂರಕವಾಗಿ ಪಂಪ, ನಾಗಚಂದ್ರ ಮುಂತಾದ ಪ್ರಾಚೀನ ಕವಿಗಳು ತಮ್ಮ ಕಾವ್ಯದಲ್ಲಿ ಗೊಂದಲ ಶಬ್ದ ಬಳಸಿರುವುದನ್ನು ಉದಾಹರಿಸಲಾಗುತ್ತದೆ. ಗೊಂದಲಿಗ ಸಮಾಜದಲ್ಲಿ ಅವರದೇ ಆದಂಥ ನಂಬಿಕೆಗಳು ಹಾಗೂ ಸಂಪ್ರದಾಯಗಳಿವೆ. ಆ ಸಮಾಜದಲ್ಲಿ ಇರುವ ಕಾಯ್ದೆ ಕಾನೂನಿಗೆ ಎಲ್ಲರೂ ಬದ್ಧರಾಗಿದ್ದಾರೆ. ತಲೆತಲಾಂತರಗಳಿಂದ ಗೊಂದಲಿಗರ

ಪದ, ಕಥೆಗಳನ್ನು ಹಾಡಿಕೊಂಡು ಜೀವನ ಸಾಗಿಸುತ್ತಿದ್ದ ಇವರ ಬದುಕು ಈಗ ಗೊಂದಲಮಯ ವಾಗಿದೆ. ಒಂದು ಕಡೆ ಜೀವನ, ಮತ್ತೊಂದು ಕಡೆ ಕಲೆ; ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಗೊಂದಲಿಗರ ಬದುಕು ಅತಂತ್ರವಾಗಿದೆ. ಬುಡಕಟ್ಟು ಪಂಗಡದವರಾಗಿದ್ದರೂ ಇವರನ್ನು ಪರಿಶಿಷ್ಟ ಸಮುದಾಯದವರೆಂದು ಸರ್ಕಾರ ಗುರುತಿಸಿಲ್ಲ. ವೃತ್ತಿ ಕಸುಬಿನಿಂದ ಜೀವನ ನಿರ್ವಹಣೆ ಸಾಗದೇ ಯುವ ಪೀಳಿಗೆಯ ಯುವಕರು ಇನ್ನಿತರ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ವೃದ್ಧರು ಮಾತ್ರ ಪದ, ಕಥೆಗಳನ್ನು ಹೇಳುವಂತಾಗಿದೆ. ಕಲೆಗೆ ಪ್ರೋತ್ಸಾಹವಿಲ್ಲದೆ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಬಹಳ ಹಿಂದುಳಿದ ಸಮುದಾಯದವರಾಗಿದ್ದಾರೆ. ಗೊಂದಲಿಗರ ಬಾಯಲ್ಲಿರುವ ನೂರಾರು ಕಥೆಗಳು ಮುಂದಿನ ಪೀಳಿಗೆಗೆ ಮರೆಯಾಗುವ ಸಂಭವವಿದೆ. ಆದ್ದರಿಂದ ಸರ್ಕಾರವು ಈ ಜನಪದ ಕಲೆಗೆ ಪ್ರೋತ್ಸಾಹ ಕೊಟ್ಟು ಆರ್ಥಿಕವಾಗಿ ಸಹಾಯ ಮಾಡಿದರೆ ಈ ಕಲೆಯು ಉಳಿಯುವ ಸಂಭವವಿದೆ. ಗೊಂದಲಿಗರ ಆಚರಣೆ, ನಂಬಿಕೆ, ಸಂಸ್ಕೃತಿ ಬೇರೆ ಕಲೆಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಗೊಂದಲಿಗರನ್ನು ಶಿಸ್ತಿನ ಸಿಪಾಯಿಗಳು ಎಂದು ಹೇಳಿದರೆ ತಪ್ಪಾಗಲಾರದು. ಏಕೆಂದರೆ ಗೊಂದಲಿಗರು ತಮ್ಮದೇ ಆದಂತಹ ಸಮಾಜವೊಂದನ್ನು ಸೃಷ್ಟಿ ಮಾಡಿಕೊಂಡಿದ್ದಾರೆ.

ಪುರಾಣ (೧) ಬೇಟಾಸುರನೆಂಬ ರಾಕ್ಷಸನು ಜನರಿಗೆ ಬಹಳವಾಗಿ ಉಪಟಳ ಕೊಡುತ್ತಿದ್ದ. ಇದನ್ನು ತಿಳಿದ ರೇಣುಕಾದೇವಿಯು ಅವನನ್ನು ಕೊಲ್ಲಲು ಪರಶುರಾಮನಿಗೆ ತಿಳಿಸಿದಳು. ಆ ಪ್ರಕಾರ ಪರಶುರಾಮನು ರಾಕ್ಷಸನನ್ನು ಕೊಂದನು. ಅವನ ದೇಹದ ನರಗಳಿಂದ ತಂತಿಗಳನ್ನು ಮಾಡಿ ಅದರಿಂದ ಚೌಡಿಕೆಯನ್ನು ನಿರ್ಮಿಸಿ ನುಡಿಸುತ್ತಾ ಪರಶುರಾಮ ಬರುತ್ತಾನೆ. ಇದರಿಂದಾಗಿ ಯಲ್ಲಮ್ಮನ ಭಕ್ತರು ಹಾಡುವಾಗ ಮತ್ತು ಕುಣಿಯುವಾಗ ಚೌಡಿಕೆಯನ್ನು ನುಡಿಸುತ್ತಾರೆ.

ಪುರಾಣ (೨) ಪರಶುರಾಮನು ತನ್ನ ತಂದೆಯನ್ನು ಕೊಂದ ಕಾರ್ತಿವೀರ್ಯಾರ್ಜುನನ್ನು ಕೊಂದು ಅವನ ದೇಹದ ಅವಯವಗಳಿಂದ ಚೌಡಿಕೆ ಮತ್ತು ಗೊಂದಲೀ ನಿರ್ಮಿಸಿದನು. ಅಂದಿನಿಂದ ಗೊಂದಲೀ ಪ್ರಾರಂಭವಾಯಿತು ಎಂಬ ನಂಬಿಕೆ ಇದೆ. ಸ್ವತಃ ರೇಣುಕೆಯೇ ಯಲ್ಲಮ್ಮನ ಅವತಾರ ತಾಳಿ ಕಾರ್ತಿವೀರ್ಯನ ಶಿರಹರಿದು ಚೌಡಿಕೆ ಮಾಡಿಕೊಂಡಳು ಎಂಬ ಮತ್ತೊಂದು ಪಾಠಾಂತರವೂ ಇದೆ.

ಕರ್ನಾಟಕದ ವೃತ್ತಿಗಾಯಕರಲ್ಲಿ ಪ್ರಮುಖ ಸಮುದಾಯವಾಗಿ ನಿಲ್ಲುತ್ತಾರೆ ಗೊಂದಲಿಗರು. ಗೊಂದಲವೆಂಬುದು ದೇವಾರಾಧನೆಯ ಒಂದು ವಿಧಿ-ವಿಧಾನ. ಈ ವಿಧಿ ಧಾನಗಳನ್ನು ಕ್ರಮಬದ್ಧವಾಗಿ ನಡೆಸುವವರು ಗೊಂದಲಿಗರೆನ್ನಿಸಿಕೊಂಡಿದ್ದಾರೆ. ಗೊಂದಲಿಗರು ದೇವಿ ಆರಾಧಕರು. ದೇವಿ ಆರಾಧನೆಯನ್ನು ಇವರು ನಡೆಸುವುದಕ್ಕೆ ಗೊಂದಲ ಹಾಕುವುದು ಎಂದು ಹೇಳಲಾಗುತ್ತದೆ.

ಆರಾಧನೆಗೆ ಸಂಬಂಧಿಸಿದ ಈ ಕಸುಬು ಅನಂತರದ ದಿನಗಳಲ್ಲಿ ಕಥಾ ಗೋಷ್ಠಿಯಾಗಿಯೂ ರೂಪಾಂತರ ಪಡೆದಿದೆ. ಕನ್ನಡ ಸಾಹಿತ್ಯದಲ್ಲಿ ಅದರಲ್ಲೂ ಹನ್ನೆರಡನೆಯ ಶತಮಾನದ ವಚನಕಾರರ ದೃಷ್ಟಿಯಲ್ಲಿ ಶರಣರ ಚಿಂತನೆಗಳಲ್ಲಿ ಕಸುಬುಗಳ ಮೇಲಿಂದಲೇ ಸಮುದಾಯವನ್ನು ಗುರುತಿಸಿದ್ದುಂಟು. ಗೊಂದಲಿಗರು ಆದಿಕಾಲದಿಂದಲೂ ಅಲೆಮಾರಿ ಜನಾಂಗದವರಾಗಿದ್ದಾರೆ. ಇತ್ತೀಚಿನ ಗೊಂದಲಿಗರ

ಅಲೆಮಾರಿ ಸಮುದಾಯದವರಾಗಿದ್ದಾರೆ. ಇತ್ತೀಚಿನ ಗೊಂದಲಿಗರು ಅಲೆಮಾರಿಯಾಗಿರದೆ ತಮಗೆ ಪ್ರಸಕ್ತವಾದ ಸ್ಥಳಗಳಲ್ಲಿ ನೆಲೆಗೊಂಡಿದ್ದಾರೆ.

ಗೊಂದಲಿಗರು ಚೌಡಿಕೆಯವರಂತೆ ದೀಕ್ಷೆ ತೆಗೆದುಕೊಂಡವರಲ್ಲ. ಹಿಂದೆ ಯಾರು ಬೇಕಾದರೂ ಗೊಂದಲಿಯರಾಗುವ ಅಧಿಕಾರ ಇತ್ತು. ಕಾಲಕ್ರಮೇಣ ಭಕ್ತಾಧಿಗಳ ಸಂಖ್ಯೆ ಹೆಚ್ಚುತ್ತಾ ಹೋದಂತೆ ಅವರ ಗುಂಪನ್ನು ಗೊಂದಲಿಗರು ಎಂದು ಕರೆಯುವ ವಾಡಿಕೆ ಆಯಿತು. ಜಾತಿಯಾಗಿ ಪರಿವರ್ತನೆಗೊಂಡರು. ನಂತರ ಇವರು ತಮ್ಮ ಜಾತಿಗೆ ಸೇರದವರನ್ನು ಗೊಂದಲ ಹಾಕುವುದಕ್ಕೆ ಸೇರಿಸಿಕೊಳ್ಳಲಿಲ್ಲ. ಗೊಂದಲಿಗರಲ್ಲಿ ಕಿನ್ನರಿ ಜೋಗಿ, ಹಂದಿಜೋಗಿ, ಟಗರು ಜೋಗಿ, ಕೋಣಿ ಜೋಗಿ, ಗಂದಲೀ ಜೋಗಿ ಎಂಬ ಕುಲ ಭೇದಗಳಿವೆ. ಇದಲ್ಲದೆ ಗೊಂದಲೀ ಜೋಗಿಗಳಲ್ಲಿ ಮತ್ತೆ ಬುಡುಬುಡುಕೆ, ಅರೆ ಪಂಚಾಂಗ, ಸಿಂಗದವರು, ಭೂತೇರು, ಚಿತ್ತ ವೃತ್ತಿಯವರು, ಭಾಟರು, ವಾಸುದೇವ ಮೊದಲಾದ ಪಂಗಡಗಳೂ ಇವೆ. ಈ ಎಲ್ಲಾ ಗೊಂದಲಿಗರ ಬುಡಕಟ್ಟು ಪಂಗಡಗಳು ಸಾಮಾಜಿಕ ಸಂಬಂಧಿಗಳಾಗಿ ಒಂದೇ ಆದರೂ ಅವರ ಕೆಲಸಗಳು ಮಾತ್ರ ಬೇರೆಯೇ ಆಗಿವೆ.[೫೬]

ಗೊಂದಲಿಗರ ಹೇಳಿಕೆಯ ಪ್ರಕಾರ ತಾವೇ ಮೊದಲು ದೇವಿಯ ಅರ್ಚಕರಾಗಿದ್ದೇವೆ. ಆಕೆಯ ಭಕ್ತರಲ್ಲಿ ನಾವೇ ಮೊದಲಿಗರು, ಶ್ರೇಷ್ಠರು ಎಂದು ಹೇಳುತ್ತಾರೆ. ಮೂಲದಲ್ಲಿ ಎಣ್ಣೆ ಜೋಗಿಗಳು ನಾವಾಗಿದ್ದು ದೇವಿಯ ಎದುರಿಗೆ ಪತ್ತಾ ಕುಣಿಯುತ್ತಿದ್ದೆವು. ನಮ್ಮನ್ನು ಕಂಡ ಕುರುಬರು ನಮ್ಮಂತೆ ಪ್ರತಿ ಹುಣ್ಣಿಮೆ, ಅಮವಾಸ್ಯೆಯ ದಿನ ಹಗಲು ರಾತ್ರಿ ಸಿಡಿ ಆಡುತ್ತಿದ್ದರು. ನಮ್ಮಂತೆ ಅವರಲ್ಲಿಯು ದೇವಿಯು ಆವೇಶವಾಗುತ್ತಿದ್ದಳು ಎಂದು ನಿಂಗಣ್ಣ ಸಣ್ಣಕ್ಕಿ ಅವರು ತಮ್ಮ ಎಲ್ಲಮ್ಮ ಜೋಗಿಗಳು ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ.

"ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣಿತ ಮತಿಗಳ್" ಕನ್ನಡ ನಾಡಿನ ಜನರನ್ನು ಕುರಿತು ಹೆಮ್ಮೆಯಿಂದ ಹೃದಯ ತುಂಬಿ ಹಾಡಿದ ಶ್ರೀ ವಿಜಯನ ಮಾತಿನ ಜ್ವಲಂತ ನಿದರ್ಶನವನ್ನು ಜನಪದ ಸಾಹಿತ್ಯದಲ್ಲಿ ನಾವು ಕಂಡುಕೊಳ್ಳಬಹುದು. 'ಕುರಿತೋದದೆ' ಇದ್ದ ಜನಸಾಮಾನ್ಯರ ಜೀವನದಿಂದ ಸೆಲೆಯೊಡೆದು ಬಂದ ಈ ಜನಪದ ಸಾಹಿತ್ಯ ಅವರ ಕಾವ್ಯ ಪ್ರಯೋಗ ಪರಿಣತಮತಿಗೆ ಸಾಕ್ಷಿಯಾಗಿದೆ. ಜೀವನದ ಸುಖವನ್ನೋ ದುಃಖವನ್ನೋ ನೋವನ್ನೋ ನಲಿವನ್ನೋ ಕಂಡುಂಡ ಚೇತನಗಳು ತಮ್ಮ ಆ ಅನುಭವಗಳನ್ನು ಹಾಡಿಕೊಂಡಿವೆ. ತಮ್ಮ ಆಶೋತ್ತರಗಳನ್ನು ತೋಡಿಕೊಂಡಿವೆ. ಅದು ನಮ್ಮ ನಿತ್ಯಜೀವನದ ಸಮಸ್ಯೆಗಳನ್ನು ಕುರಿತಿರಬಹುದು, ತಮ್ಮಲ್ಲಿ ಆಗಿಹೋದ ಮಹಾವ್ಯಕ್ತಿಯನ್ನೋ, ಮಹಾಘಟನೆಯನೋ ಕುರಿತ ಕಥಾನಕವಾಗಿರಬಹುದು, ವಿರಹ-ಮಿಲನಗಳ ಸಂಸಾರದ ಚಿತ್ರಣವಾಗಿರಬಹುದು, ಅಣ್ಣ-ತಂಗಿಯರು ಬಂಧು-ಬಳಗಗಳು ಮೊದಲಾದ ಮಾನವೀಯ ಸಂಬಂಧಗಳನ್ನುಕ್ಕಿಸುವ ಹೃದಯದ ಭಾವನೆಗಳಾಗಿರಬಹುದು. ಹೀಗೆ ಯಾವುದೇ ಆಗಲಿ ಜೀವನದ ಶ್ರೀಮಂತ ಅನುಭವದಿಂದ ತುಂಬಿ ಬಂದ ಮಾತು ಸಹಜವಾಗಿಯೇ ಸಾಹಿತ್ಯವಾಗಿದೆ. ಉತ್ತರ ಕರ್ನಾಟಕದ ಕೊಪ್ಪಳ ಜಿಲ್ಲೆಯ ಧಾರ್ಮಿಕ ವೃತ್ತಿಗಾಯಕರಾದ ಗೊಂದಲಿಗರ ಹಾಡುಗಳನ್ನು ನಮ್ಮ ಜನಜೀವನದ ಸಂಸ್ಕೃತಿಯ ಕೆನೆ ಎಂದು ಹೇಳಬಹುದು.

ಹಾಡಿಗೆ ತಕ್ಕಂತೆ ಜೋರಾಗಿ ವಾದ್ಯ ನುಡಿಸುವ ಮೂಲಕ ಗೊಂದಲವೆಬ್ಬಿಸುವುದರಿಂದ ಈ ಹೆಸರು ಬಂದಿರಬೇಕು ಎಂದು ಕಲಾವಿದರು ಹೇಳುತ್ತಾರೆ. ವಿಶೇಷವಾಗಿ ಕೊಪ್ಪಳ ಜಿಲ್ಲೆ, ಬಾದಾಮಿ

ಕೆರೂರು ಪಟ್ಟದಕಲ್ಲು, ಜಮಖಂಡಿ, ರಬಕವಿ, ಬನಹಟ್ಟಿ ಮುಂತಾದ ಸ್ಥಳಗಳಲ್ಲಿ ವಾಸವಾಗಿದ್ದಾರೆ. ಕೆರೂರಿನ ಹಾಗೂ ಕಟಕೋಳ ಗೊಂದಲಿಗರು ಹಾಡು ಹೇಳುವಲ್ಲಿ ಪರಿಪೂರ್ಣ ಪರಂಪರೆಯನ್ನು ಕಾಯ್ದುಕೊಂಡಿದ್ದಾರೆ.[೫೭]

ಕೊಪ್ಪಳ ಜಿಲ್ಲೆಯಲ್ಲಿ ವಾಸಿಸುವ ಗೊಂದಲಗರು ಆಂಧ್ರಪ್ರದೇಶದಲ್ಲಿ ಕೊಂದಲಿಗರಾಗಿದ್ದಾರೆ. ಮಹಾರಾಷ್ಟ್ರದ ಕಡೆಗೆ ಹೋದಾಗ ಗೊಂದಳದವರಾಗಿದ್ದಾರೆ. ಹೀಗೆ ಕನ್ನಡ, ಮರಾಠಿ ಹಾಗೂ ತೆಲುಗು ಭಾಷೆಗಳನ್ನು ಮಾತನಾಡುವ ಗೊಂದಲಿಗರ ಪದ್ಯ ಜಾತಿಯಾದ ಗೊಂದಲ ಪದದ ಮೂಲ ಯಾವ ಭಾಷೆಯೆಂಬ ಪ್ರಶ್ನೆ ಎದುರಾಗುತ್ತದೆ. ಆದರೆ ಈ ಮೂರು ಭಾಷೆಗಳಲ್ಲಿ ಹುಟ್ಟಿದ ಸಾಹಿತ್ಯವನ್ನು ನೋಡಿದಾಗ ಕನ್ನಡದಲ್ಲಿಯೇ ಅದು ಮೊದಲು ಪ್ರಯೋಗವಾದದ್ದು ಕಂಡುಬರುತ್ತದೆ. ಕನ್ನಡ ಮಹಾಕವಿಗಳಾದ ಪಂಪ, ರುದ್ರಭಟ್ಟ, ಹರಿಹರ, ವಿರೂಪಾಕ್ಷ ಪಂಡಿತ, ಲಕ್ಷ್ಮೀಶ ಮೊದಲಾದ ಕವಿಗಳು ಈ ಶಬ್ದವನ್ನು ಸಮೂಹ ಎಂಬರ್ಥದಲ್ಲಿ ಪ್ರಯೋಗಿಸಿದ್ದಾರೆ. ಆದರೆ ಇದು ಕರ್ನಾಟಕ ಗೊಂದಲಿಗರ ಪ್ರಾಚೀನತೆಯನ್ನು ಹತ್ತು ಹನ್ನೊಂದನೆಯ ಶತಮಾನದಷ್ಟು ಹಿಂದಕ್ಕೆ ಒಯ್ಯುತ್ತದೆ. ಗೊಂದಲಿಗರು ತಾವು ವಾಸಿಸುವ ಸಮೀಪದ ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ. ಬಾದಾಮಿಯಲ್ಲಿ ಬನಶಂಕರಿ, ಮೈಸೂರಿನಲ್ಲಿ ಚಾಮುಂಡಿ, ಶೃಂಗೇರಿಯಲ್ಲಿ ಶಾರದೆ, ಹಂಪೆಯಲ್ಲಿ ಭುವನೇಶ್ವರಿ, ಸವದತ್ತಿಯಲ್ಲಿ ಯಲ್ಲಮ್ಮ, ಚಂದ್ರಗುತ್ತಿಯಲ್ಲಿ ರೇಣುಕೆ, ಕೊಲ್ಲೂರಿನಲ್ಲಿ ಮೂಕಾಂಬಿಕಾ, ಶಿರಸಿಯಲ್ಲಿ ಮಾರಿಕಾಂಬಾ, ಕೊಲ್ಲಾಪುರದಲ್ಲಿ ಮಹಾಲಕ್ಷ್ಮೀ ಅಂಬಾಭವಾನಿ, ತುಳಜಾಪುರದಲ್ಲಿ ತುಳಜಾಭವಾನಿ, ಅಂಬಲಪಾಡಿನಲ್ಲಿ ಮಹಾಕಾಳಿ, ಸನ್ನತಿ ಶ್ರೀಚಂದ್ರಲಾಂಭ ಪರಮೇಶ್ವರಿ ಮುಂತಾದ ದೇವಿಯರನ್ನು ಆರಾಧಿಸಿ ಭಕ್ತಿಯಿಂದ ಸ್ಮರಿಸುತ್ತ ಹಾಡುತ್ತಾರೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಎಲ್ಲ ಪ್ರದೇಶದ ಗೊಂದಲಿಗರು ಸ್ತ್ರೀ ದೇವತೆಯನ್ನು ಆರಾಧಿಸುವುದು ಕಂಡುಬರುತ್ತದೆ.[೫೮]

ಗೊಂದಲಿಗರು ದೇವಿಯ ಆರಾಧನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಗೊಂದಲ ಕಲಾ ಪ್ರದರ್ಶನದ ಕುರಿತು ಕೆಲವು ನೀತಿ ನಿಯಮಗಳನ್ನು ಪಾಲಿಸುತ್ತಾರೆ.

೧. ವರ್ಷದಲ್ಲಿ ಒಮ್ಮೆಯಾದರೂ ಗೊಂದಲ ಹಾಕಬೇಕು.

೨. ಮದುವೆಯ ಸಂದರ್ಭದಲ್ಲಿ ಗೊಂದಲ ಹಾಕಬೇಕು.

೩. ಮದುವೆಗೆ ಬರದಿದ್ದರೂ ಗೊಂದಲಕ್ಕಾದರೂ ಬರಬೇಕು.

೪. ಗೊಂದಲಕ್ಕೆ ಹೆಣ್ಣುಮಕ್ಕಳ ಹಾಜರಾತಿ ಅವಶ್ಯ.

೫. ಮಂಗಳವಾರ ಹಾಗೂ ಶುಕ್ರವಾರ ಗೊಂದಲ ಹಾಕಬೇಕು.

೬. ರಾತ್ರಿ ವೇಳೆಯಲ್ಲಿ ಮರದ ಕೆಳಗೆ ಗೊಂದಲ ನಿಷಿದ್ಧ.

೭. ಬಯಲಗೊಂದಲ ಮರದಡಿ ಹಾಗೂ ಭಾಗ್ಯದ ಗೊಂದಲ ದೇವಸ್ಥಾನದ ಪ್ರಾಂಗಣದಲ್ಲಿ ಹಾಕಬೇಕು.

೮. ಗೊಂದಲಕ್ಕೆ ಮೊದಲು ದೇವಿಗೆ ಪ್ರಾಣಿಬಲಿ ಕೊಡಬೇಕು.

## ಗೊಂದಲಿಗರ ಮೂಲ

ಗೊಂದಲೀಯ ಐತಿಹಾಸಿಕ ಅಂಶಗಳನ್ನು ಪರಿಶೀಲಸುತ್ತ ಮಹಾರಾಷ್ಟ್ರ ಮತ್ತು ಕರ್ನಾಟಕ ಗಳೆರಡಲ್ಲಿಯೂ ಆ ಸಂಬಂಧಿತ ದಾಖಲೆಗಳು ದೊರಕುತ್ತವೆ. ಮಹಾರಾಷ್ಟ್ರದಲ್ಲಿ ಇಂದಿಗೂ ಗೊಂದಲೀಯು ಪ್ರಮುಖ ಜನಪದ ಕಲೆಯಾಗಿದೆ. ಆದರೆ ಗೊಂದಲ ಎನ್ನುವ ಕನ್ನಡ ಪದದಿಂದಲೇ ಗೊಂದಳ ಹುಟ್ಟಿತೆಂಬುದು ವಿದ್ವಾಂಸರ ಅಭಿಪ್ರಾಯ. ಡಾ. ಶಂಬಾ ಜೋಶಿಯವರು ಕರ್ನಾಟಕ ಮತ್ತು ಮಹಾರಾಷ್ಟ್ರಗಳೆರಡೂ ಹಿಂದೆ ಒಂದೇ ರಾಜ್ಯವಾಗಿತ್ತೆಂಬುದನ್ನು ಸಾದರಪಡಿಸುತ್ತ ಈಗಿನ ಕರ್ನಾಟಕವು ಮಹಾರಾಷ್ಟ್ರದವರೆಗೆ ಪಸರಿಸಿತ್ತು ಎಂದೆನ್ನುತ್ತಾರೆ. ಹಾಗಾದುದರಿಂದ ಒಂದು ಕಾಲದಲ್ಲಿ ಕನ್ನಡ ಮೂಲದ್ದೇ ಆದ ಈ ಕಲೆ ಈಗಿನ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಿಗೆ ಹಬ್ಬಿದೆ ಎಂಬುದು ಕನ್ನಡದ ಅನೇಕ ವಿದ್ವಾಂಸರ ಅಭಿಪ್ರಾಯವಾಗಿದೆ.[೫೯]

## ಗೊಂದಲ ಶಬ್ದ ನಿಷ್ಪತ್ತಿ

ಗೊಂದಲ ಶಬ್ದದ ಬಗ್ಗೆ ತುಸು ವಿಚಾರ ಮಾಡಬಹುದೆನಿಸುತ್ತದೆ. ಈ ಕುರಿತು ಜ್ಯೋತಿ ಹೊಸೂರ, ನಿಂಗಣ್ಣ ಸಣ್ಣಕ್ಕಿ(೧೯೪-೯೪) ತುಂಬ ವಿವರವಾಗಿ ಚರ್ಚಿಸಿದ್ದಾರೆ. ಭಾಷಿಕ ನೆಲೆಯಲ್ಲಿ ತುಂಬಾ ಸೈದ್ಧಾಂತಿಕವಾಗಿ ನಡೆದಿರುವ ಈ ಚರ್ಚೆಗಳು ಗೊಂದಲ ಶಬ್ದ ಮರಾಠಿಯದಲ್ಲ, ಅದು ಕನ್ನಡದ್ದು ಎನ್ನುವ ನೆಲೆಯದ್ದಾಗಿವೆ.

ಸಹಜವಾಗಿಯೇ ಈ ಗೊಂದಲ ಶಬ್ದ ಸ್ಫುರಿಸುವ ಅರ್ಥ ಗೋಜಲು, ಗದ್ದಲ, ಧಾಂದಲೆ ಎನ್ನುವ ಸರಳಾರ್ಥಗಳಿವೆ. ಮೂಲತಃ ಈ ಗೊಂದಲ ಎನ್ನುವುದು ದೈವೀ ಆರಾಧನೆಯ ಒಂದು ಕ್ರಮ. ಗೊಂದಲಿ ಎನ್ನುವುದು ಈಗ ಜಾತಿಸೂಚಕ ಪದ. ವಿಶೇಷ ಸಂದರ್ಭಗಳಲ್ಲಿ ದೇವಿ ಗುಡಿಯ ಮುಂದೆ ಅಥವಾ ಭಕ್ತರ ಮನೆಯಲ್ಲಿ ಹೆಣ್ಣು ಗಂಡೆಂಬ ಭೇದವಿಲ್ಲದೆ ದೇವಿ ಕುರಿತು ಮಾಡುವ ಆರಾಧನೆ ರೀತಿಗೆ ಗೊಂದಲ ಹಾಕುವುದು ಎಂದು ಕರೆಯುತ್ತಾರೆ. ಈ ವಾತಾವರಣ ಎಷ್ಟು ಭಾವಾವೇಶವೂ ಮತ್ತು ಗದ್ದಲಮಯವೂ ಆಗಿರುತ್ತದೆ. ಸಂಬಾಳ, ತಾಳ, ತುಂತುಣಿಯ ಅಬ್ಬರ, ಕುಣಿತ ಮತ್ತು ಕಿರುಚಾಟಗಳಿಂದ ತುಂಬಿರುತ್ತದೆ. ಯಾವ ಪರಿವೆಯೂ ಇಲ್ಲಿರುವುದಿಲ್ಲ. ಭಾವಾವೇಶದಿಂದ ಕುಣಿಯುವುದೇ ಇಲ್ಲಿನ ಪ್ರಮುಖ ಆಶಯವಾಗಿರುತ್ತದೆ. ಹೀಗೆ ಗೊಂದಲ ಅನ್ನುವುದು ಒಂದು ಸಮುದಾಯದ ಕುಲಕಸುಬಾಗಿ, ಕಥಾಗೋಷ್ಠಿಯ ವಿಧಾನವಾಗಿ ಬೆಳೆದು ಬಂದಿರಬಹುದು.[೬೦]

## ಗೊಂದಲಿಗರ ಆರಾಧ್ಯ ದೈವಗಳು

ಗೊಂದಲಿಗರು ಶಕ್ತಿಯ ಸೌಮ್ಯ ಮತ್ತು ರೌದ್ರ ಎರಡು ಪ್ರವೃತ್ತಿಗಳನ್ನು ಆರಾಧಿಸುತ್ತಾರೆ ಮತ್ತು ಪ್ರಾರ್ಥಿಸುತ್ತಾರೆ. ಮೂಲ ಶಕ್ತಿಗಿಂತ ಸಾಂಸ್ಕೃತೀಕರಣ ಹೊಂದಿದ ಶಕ್ತಿಯ ಸ್ವರೂಪವನ್ನೇ ಇವರು ಹೆಚ್ಚು ಬೆಳೆಸುತ್ತಾರೆ. ಹಾಡುಗಳು ಕೂಡ ಇದೇ ಆಶಯವನ್ನು ಪ್ರಕಟಪಡಿಸುತ್ತವೆ. ಬಹಳ ಮುಖ್ಯವಾಗಿ ಇವರು ಆದಿಶಕ್ತಿ ಮತ್ತು ಆಕೆಯ ಸಮರೂಪಗಳಾದ ಕೊಲ್ಲಾಪುರದ ಮಹಾಲಕ್ಷ್ಮಿ, ಪಂಢರಪುರದ ತುಳುಜಾಭವಾನಿ, ಅಂಬಾಭವಾನಿ, ರೇಣುಕೆ, ಬನಶಂಕರಿ, ಚಾಮುಂಡಿ, ಚೌಡೇಶ್ವರಿ, ಮಹಾಕಾಳಿ, ಶಿರಸಂಗಿ ಕಾಳಮ್ಮ, ದುರಗಿ, ಮಾಯವ್ವ ಇಂತಹ ದೇವತೆಗಳನ್ನು ಆರಾಧಿಸುತ್ತಾರೆ.

ಮತ್ತು ಪ್ರತಿವರ್ಷ(ಅವರವರ ಆರ್ಥಿಕ ಹಿನ್ನೆಲೆಯಲ್ಲಿ) ಈ ಸ್ಥಳಗಳಿಗೆ ಕಾಲ್ನಡಿಗೆಯಿಂದ ದರ್ಶನಕ್ಕಾಗಿ ಹೋಗಿ ಬರುತ್ತಾರೆ. ಆದರೆ ಇಂದು ಆಧುನಿಕ ಸಂಚಾರ ಸೌಲಭ್ಯಗಳಿಗೆ ಮಾರುಹೋಗಿ ಕಾಲ್ನಡಿಗೆ ಕಡಿಮೆಯಾಗಿದೆ. ಮಾತೃಮೂಲದವರಾದ ಗೊಂದಲಿಗರು ಗಂಡು ದೇವರ ಬಗ್ಗೆ ತಾತ್ಸಾರ ತಾಳುವವರಲ್ಲ. ಪಂಢರಪುರದ ವಿಠ್ಠಲ, ಗಣಪತಿ, ಹಂಪಿ, ವಿರೂಪಾಕ್ಷ, ಕೃಷ್ಣರಂತಹ ಗಂಡು ದೇವತೆಗಳನ್ನು ಪೂಜಿಸುತ್ತಾರೆ, ಸ್ತುತಿಸುತ್ತಾರೆ.

### ಗೊಂದಲಿಗರ ಹಾಡುಗಾರಿಕೆ ಮತ್ತು ಕಥನ ಕ್ರಿಯೆಯ ಸ್ವರೂಪ

ಗೊಂದಲಿಗರ ಆಟವನ್ನು ಎರಡು ರೀತಿಯಲ್ಲಿ ನಿರ್ವಚಿಸಿಕೊಳ್ಳಬಹುದು. ಒಂದು ಧಾರ್ಮಿಕ ಆವರಣವುಳ್ಳದ್ದು. ಎರಡು ಮನರಂಜನೆ ಉದ್ದೇಶವುಳ್ಳದ್ದು. ಮೊದಲು ಅದರ ಧಾರ್ಮಿಕ ಪರಿಧಿಯನ್ನು ಅರ್ಥೈಸಿಕೊಳ್ಳಬಹುದೆನಿಸುತ್ತದೆ.[೬೧]

### ಮನರಂಜನ ಮಾಧ್ಯಮವಾಗಿ

ಗೊಂದಲವು ಸಾಂಪ್ರದಾಯಿಕ ಆರಾಧನಾ ರೂಪವಾಗಿ ಆಟ, ಭಕ್ತಿ, ಆರಾಧನೆಯನ್ನು ಒಳಗೊಂಡಿದೆ. ಆದರೂ ಅದು ಒಂದು ರಂಗಕಲೆಯಾಗಿ ಮನರಂಜನಾ ಮಾಧ್ಯಮವಾಗುಳಿದಿದೆ. ಅಂದರೆ ಗೊಂದಲಿಗರ ಆಟದಲ್ಲಿ ಭಕ್ತಿಯ ಜೊತೆ ಮನರಂಜನೆಯೂ ಸೇರಿದೆ. ಕೇವಲ ಕಥೆ ಅಥವಾ ಹಾಡು ಗೊಂದಲಿಗರ ಆಟವಲ್ಲ. ಕಥೆ ಹಾಡುಗಳೊಂದಿಗೆ ಇಡೀ ಮೇಳವೇ ಅರ್ಥಗಾರಿಕೆಯ ಕ್ರಿಯೆಯನ್ನು ನಿರ್ವಹಿಸುತ್ತವೆ. ಈ ಕ್ರಿಯೆಯಲ್ಲಿ ಮನುಷ್ಯರು, ಮನುಷ್ಯರಲ್ಲದ ರಂಗ ಪರಿಕರಗಳೂ ಸಹ ಮನುಷ್ಯನಷ್ಟೇ ಸಮರ್ಥವಾದ ಸಂವಹನ ಮಾಧ್ಯಮಗಳಾಗಿ ಬಳಕೆಯಾಗುತ್ತವೆ. ಗೊಂದಲಿಗರ ಮೇಳದ ವಿಶೇಷತೆ ಇರುವುದು ಈ ನೆಲೆಯಲ್ಲಿ. ಕೇವಲ ಇಬ್ಬರು ಕಲಾವಿದರು ಮಾತ್ರ ಇರುತ್ತಾರೆ. ಈ ಪ್ರದರ್ಶನ ನಡೆಯುವುದು ತುಂಬ ಅನಿರೀಕ್ಷಿತ. ಭಿಕ್ಷೆಗಾಗಿ ಬಂದ ಗೊಂದಲಿಗರು ವಸತಿ ಮಾಡಿದ ಊರಿನಲ್ಲಿ ಆ ಊರಿನ ಹಿರಿಯರ ಅಪ್ಪಣೆ ಮೇರೆಗೆ ಅಂದು ರಾತ್ರಿ ತಮ್ಮ ಆಟವನ್ನು ಆಡಿತೋರಿಸುತ್ತಾರೆ. ಖಚಿತ ಸಂಭಾವನೆ ಇಲ್ಲಿರುವುದಿಲ್ಲ. ಗೊಂದಲಿಗರು ಕೂಡ ಅದಕ್ಕೆ ಕಟ್ಟು ಬೀಳುವುದಿಲ್ಲ. ರಾತ್ರಿ ಇಡೀ ಆಟ ನೋಡಿ ಮರುದಿನ ಗೊಂದಲಿಗರು ಮನೆ ಮನೆ ಭಿಕ್ಷೆಗೆ ಬಂದಾಗ ಇವರಿಗೆ ತಮಗಾದಷ್ಟು ಸಹಾಯ ಮಾಡುತ್ತಾರೆ. ಅದು ಕಾಳು, ಹಣ, ಅರಿವೆ, ದನಕರುಗಳ ರೂಪದ್ದು ಸಹ ಆಗಿರುತ್ತದೆ. ತಮಗೆ ತೀರ ಬೇಕಾದ ಭಕ್ತರಲ್ಲಿ ಕಾಡಿಬೇಡಿ ಮಕ್ಕಳಂತೆ ಹಟ ಮಾಡಿ ಹಣ, ಅರಿವೆ ಅಥವಾ ಹೊಟ್ಟು ಕಣಕಿಯನ್ನು, ದನಕರುಗಳನ್ನು ಪಡೆದುಕೊಂಡು ಹೋಗುತ್ತಾರೆ. ಯಾರು ಇವರನ್ನು ತಿರಸ್ಕರಿಸುವುದಿಲ್ಲ. ರಾತ್ರಿ ನಡೆದ ಕಥೆ ತಮಗೆ ಹಿಡಿಸಿದ್ದರೆ ಬೇಷ್ ಎಂದು ಗೊಂದಲಿಗರನ್ನು ಹೊಗಳುತ್ತಾರೆ.

ಆಟದ ಆರಂಭದಲ್ಲಿ ಪ್ರಾರ್ಥನೆ ದೇವಿ ಸ್ತುತಿ ಗಣಪತಿ ಸ್ತುತಿ, ಗಣಪತಿ ಸ್ತುತಿ, ಆ ಊರಿನ ದೇವರ ಸ್ತುತಿ, ನಂತರ ತಮಗೆ ಬರುವ ಹಾಡುಗಳ ವಸ್ತುವನ್ನು ಪ್ರೇಕ್ಷಕರ ಮುಂದಿಟ್ಟು ಅವರು ಹೇಳಿದ ಕಥೆಯನ್ನು ಎತ್ತಿಕೊಂಡು ಹಾಡಿ, ಆಡಿ ತೋರಿಸುತ್ತಾರೆ.

ಈ ಬಯಲಾಟದ ಸಂದರ್ಭದಲ್ಲಿ ಭಕ್ತಿ ಇದ್ದರೂ ಅದು ಹೆಚ್ಚು ಪ್ರಕಟವಾಗದೇ ಹಾಸ್ಯ, ಶೃಂಗಾರ ವೀರದಂತಹ ಕಥೆಗಳು ಹೆಚ್ಚು ಸಮಕಾಲೀನ ವಸ್ತುಗಳೇ ಆಗಿರುತ್ತವೆ. ಇವತ್ತಿನ ಪ್ಯಾಷನ್, ವಿಜ್ಞಾನದ ಅತಿರೇಕ, ರಾಜಕೀಯ ಹೊಲಸುಗಳನ್ನು ನಿರ್ಭಿಡೆಯಿಂದ ಇವರು ಹಾಡುತ್ತಾರೆ.

ಗೊಂದಲಿಗರ ಹಾಡು ಮತ್ತು ಕಥೆಗಳು ಮನಂಜನೆ, ಆರಾಧನೆ ಇನ್ನಾವುದೇ ಆಶಯವನ್ನು ಬಹುಮುಖ್ಯವಾಗಿಸಿಕೊಂಡಿದ್ದರೂ ಅವರ ಬಾಯಿಂದ ಬರುವ ಸ್ವರ್ಗ ಪಾತಾಳ, ದೇವಲೋಕ, ಮೃತ್ಯುಲೋಕ ಮುಂತಾದ ಅತಿಮಾನುಷ, ರಮ್ಯ ವಿಷಯಗಳು ಅವರ ಬದುಕಿನ ಪ್ರತಿರೂಪಗಳಾಗಿವೆ ಎನ್ನುವುದನ್ನು ಮನಗಾಣಬೇಕು.

**ಕಲಾವಿದರ ವೇಷಭೂಷಣಗಳು**

ತಲೆಗೆ ರೇಶ್ಮಿಪಟಗ, ಬಿಳಿಧೋತರ, ಬಿಳಿ ಅಂಗಿ ಅದರ ಮೇಲೆ ಕರಿಕೋಟು ಧರಿಸಿ ಹಣೆಗೆ ತಿಲಕವಿಟ್ಟುಕೊಂಡಿರುತ್ತಾರೆ. ಕೆಲವರು ದೈನಂದಿನ ವೇಷದಲ್ಲಿಯೇ ಇರುವುದು ಕಂಡುಬರುತ್ತದೆ. ಆಟದ ಸಮಯದಲ್ಲಿ ಇದನ್ನು ಸೊಂಟಕ್ಕೆ ಕಟ್ಟಿಕೊಂಡು ಭಾವಾವೇಶದಿಂದ ಹಾಡು ಹೇಳುತ್ತಾರೆ. ಹಾಡಿಗೆ ಎಲ್ಲಾದರೂ ದೊರೆತ ಮಾನಪಾನಗಳಿದ್ದರೆ, ಅವನ್ನು ತಲೆಯ ಪಟಗ ಅಥವಾ ಎದೆಯ ಮೇಲೆ ಹಾಕಿಕೊಂಡಿರುತ್ತಾರೆ. ಇದು ಕಲಾವಿದರ ಪ್ರತಿಷ್ಠೆಯ ಕುರುಹು ಆಗಿ ಕೆಲಸ ಮಾಡುತ್ತದೆ. ಆತ ಶ್ರೇಷ್ಠ ಕಲಾವಿದನೆನ್ನುವ ಸಂವಹನ ಕ್ರಿಯೆಯನ್ನು ಈ ಗೌರವ ಪದಕಗಳು ಸೂಚಿಸುತ್ತವೆ.

ಭಿಕ್ಷಾಟನೆ ಸಂದರ್ಭದಲ್ಲಿಯೂ ಇದೇ ಬಟ್ಟೆಗಳು ಇರುತ್ತವೆ. ಬಗಲಿಗೆ ಆಹಾರ ಧಾನ್ಯಗಳನ್ನು ಹಾಕಿಕೊಳ್ಳಲು ಎರಡು ಮೂರು ರೀತಿಯ ಜೋಳಿಗೆಯನ್ನು ಹಾಕಿಕೊಂಡಿರುತ್ತಾರೆ. ಒಂದರಲ್ಲಿ ಒಂದೊಂದು ರೀತಿಯ ಧಾನ್ಯಗಳನ್ನು, ಮತ್ತೊಂದರಲ್ಲಿ ರೊಟ್ಟಿ, ಪಲ್ಲೆಗಳಂತಹ ಸಿದ್ಧವಸ್ತುಗಳನ್ನು ಹಾಕಿಕೊಳ್ಳುತ್ತಾರೆ. ಹಣವನ್ನು ಕಿಸೆಯಲ್ಲಿ ಹಾಕಿಕೊಳ್ಳುತ್ತಾರೆ. ಭಿಕ್ಷಾಟನೆ ಸಂದರ್ಭದಲ್ಲಿ ಕಥೆಗಿಂತ ಮುಖ್ಯವಾಗಿ ಪದಗಳನ್ನು ಹಾಡುತ್ತ ಸಾಗುತ್ತಾರೆ. ಒಂದೊಂದು ಹಾಡು ಸುಮಾರು ಎರಡು ಮೂರು ಮನೆಗಳಿಗೆ ಆಗುವಂತೆ ಹಿಗ್ಗಿಸಿ, ಕುಗ್ಗಿಸಿ ಹಾಡುವ ಕಲೆ ಇವರಿಗೆ ಕರಗತವಾಗಿದೆ. ಬಿಡಿಪದಗಳಲ್ಲಿ ಪುರಂದರದಾಸರು ಮತ್ತು ಶಿಶುನಾಳ ಶರೀಫರ ಹಾಡುಗಳು ಹೆಚ್ಚು ಬಳಕೆಗೊಳ್ಳುತ್ತವೆ.[೨]

**ಗೊಂದಲಿಗರು ಹಾಡುವ ಸಂದರ್ಭ**

ಸಾಮಾನ್ಯವಾಗಿ ಮದುವೆಯ ವಿಧಾನಗಳು ಸಾಂಗವಾಗಿ ಜರುಗಿದುದಕ್ಕೆ ಪ್ರತಿಯಾಗಿ ದೇವಿಗೆ ಕೃತಜ್ಞತೆ ವ್ಯಕ್ತಪಡಿಸುವ, ಜಾತ್ರೆಯಲ್ಲಿ ದೇವಿಯ ಕೃಪಾಕಟಾಕ್ಷಕ್ಕೆ ಪಾತ್ರವಾಗುವ ಹಾಗೂ ಹರಕೆ ಕೈಗೂಡಿದುದಕ್ಕೆ ಪ್ರತಿಯಾಗಿ ದೇವಿಗೆ ಕೃತಜ್ಞತೆ ವ್ಯಕ್ತಪಡಿಸುವುದಕ್ಕಾಗಿ ಗೊಂದಲ ಹಾಕಿಸುವ ಸಂದರ್ಭಗಳಲ್ಲಿ ಆಮಂತ್ರಣದ ಮೇರೆಗೆ ಹಾಗೂ ಭಿಕ್ಷಾಟನೆ ಸಂದರ್ಭದಲ್ಲಿ ಸ್ವಯಂಸ್ಫೂರ್ತಿಯಿಂದ ಗೊಂದಲಿಗರು ಹಾಡುವುದು ಕಂಡುಬರುತ್ತದೆ. ಗೊಂದಲ ಹಾಕಿಸುವ ಸಂದರ್ಭದಲ್ಲಿ ಸ್ತುತಿಪದ ಕಥನ ಗೀತೆಗಳು, ಭಿಕ್ಷಾಟನೆ ಸಂದರ್ಭದಲ್ಲಿ ಬಿಡಿಪದ. ವಿಶೇಷವಾಗಿ ದಾಸರಪದ, ಶಿಶುನಾಳ ಶರೀಫರ ಗೀತೆಗಳನ್ನು ಹಾಡಿ ಜನಮನ ತಿದ್ದುವ ಕಾರ್ಯ ಮಾಡಿದ್ದು ಕಂಡುಬರುತ್ತದೆ.[೩]

**ಗೊಂದಲಿಗರ ಹಾಡಿನ ಲಕ್ಷಣ**

೧. ಗೊಂದಲಿಗರ ಹಾಡುಗಳು ಶಕ್ತಿಯನ್ನು ಕೇಂದ್ರಬಿಂದುವಾಗಿಸಿಕೊಂಡಿವೆ.

೨. ಜನಪದ ಸಾಹಿತ್ಯದ ಇತರೆ ಪ್ರಕಾರಗಳಂತೆ ಗೊಂದಲಿಗರ ಹಾಡುಗಳಲ್ಲಿ ಪಲ್ಲವಿ ಅನುಪಲ್ಲವಿಗಳಿದ್ದ ಕೊನೆಯಲ್ಲಿ ಪುನರಾವೃತ್ತಿಗೊಳ್ಳುತ್ತವೆ. ಹಾಡಿನ ಕೊನೆಗೆ ಕವಿ ತನ್ನ ಹೆಸರು, ಆರಾಧ್ಯ ದೈವ ಹಾಗೂ ತನ್ನ ಊರಿನ ಹೆಸರನ್ನು ಹೇಳುವುದು ಕಂಡುಬರುತ್ತದೆ.

೩. ಗೊಂದಲಿಗರ ಹಾಡುಗಳು ಪದ್ಯಗಳಿಂದ ಕೂಡಿರುತ್ತವೆ.

೪. ಗೊಂದಲಿಗರ ಹಾಡು ಕಲಾತ್ಮಕವಾದರೂ ಕಥೆ ಹೇಳುವ ಕ್ರಿಯೆ ಗದ್ಯದಲ್ಲಿ ನಡೆಯುತ್ತದೆ. ಸಂಭಾಷಣೆಯ ರೂಪದಲ್ಲಿ ನಾಟಕೀಯ ಧಾಟಿಯಲ್ಲಿ ಕಥೆ ಸಾಗುತ್ತದೆ.

೫. ಗೊಂದಲಿಗರ ಹಾಡುಗಳು ವರ್ಣಾತ್ಮಕವಾಗಿರುತ್ತವೆ.

೬. ಗೊಂದಲಿಗರ ಹಾಡು ದೀರ್ಘ ಹಾಗೂ ಪುನರಾವರ್ತನೆ ಸ್ವರೂಪ ಹೊಂದಿದೆ. ಕಥೆಯೊಳಗೆ ಕಥೆ ಎಂದು ಹೇಳಬಹುದಾದಂತಹವುಗಳು ಹಾಗೂ ಅಲ್ಲಿಯವರೆಗೆ ನಡೆದ ಕಥೆಯಲ್ಲಿ ಸಾಂದರ್ಭಿಕವಾಗಿ ಮತ್ತೆ ಮತ್ತೆ ಪುನರಾವರ್ತನೆಗೊಳ್ಳುವುದು ಕಂಡುಬರುತ್ತದೆ.

೭. ಗೊಂದಲಿಗರ ಕಥನ ಗೀತೆಗಳು ಗೊತ್ತಾದ ರೀತಿಯಲ್ಲಿ ಪ್ರಾರಂಭವಾಗಿ ಗೊತ್ತಾದ ರೀತಿಯಲ್ಲಿ ಮುಕ್ತಾಯಗೊಳ್ಳುತ್ತವೆ.

೮. ಕಥೆ ಮುಗಿಯಿತೆನಿಸಿದರೂ ಮುಂದುವರಿಯುವ ವಿಶಿಷ್ಟಗುಣ ಗೊಂದಲಿಗರ ಹಾಡುಗಳಲ್ಲಿ ಕಂಡುಬರುತ್ತದೆ.

೯. ಗೊಂದಲಿಗರ ಹಾಡುಗಳಲ್ಲಿ ಅದೆಷ್ಟೋ ಸಂದರ್ಭಗಳಲ್ಲಿ ರೀತಿ ಪ್ರಮುಖ ಪಾತ್ರವಹಿಸಿದರೂ ಇನ್ನಿತರ ಲಕ್ಷಣಗಳ ಹಾವಳಿಯಿಂದ ನೀತಿ ತನ್ನ ಪ್ರಾಮುಖ್ಯತೆಯನ್ನು ಕಾಯ್ದುಕೊಳ್ಳುವಲ್ಲಿ ವಿಫಲವಾಗುತ್ತಿದೆ.

೧೦. ಗೊಂದಲಿಗರ ಹಾಡುಗಳಲ್ಲಿ ಮಾಂತ್ರಿಕ ವಸ್ತುಗಳು ತಲೆ ಹಾಕುವುದೊಂದು ವಿಶೇಷ.[೬೪]

**ಶಾಂಭವಿ ಸ್ತುತಿ**

ಶಾಂಭವಿ ನಿಮ್ಮ ಚರಣ
ನಂಬಿದ್ದೇನೆ ಪರಿಪೂರ್ಣ
ಅಂಬಾ ಮಾಡು ಅಂತಕರಣ
ನಂಬಿ ಬಂದೆ ನಿನ್ನ ಹತ್ತರ
ಕುಂಬಿನಿಯೊಳು ಹಡಗನ್ನಿಂದೆ ಉತ್ತರ ॥ ಗೀ ॥

ಅಂಬುಜಳೆ ನಿನ್ನ ವರ್ಣ
ತುಂಬಿದ ಸೂರ್ಯನ ಕಿರಣ
ಸಂಬ ಹಿಡಿದ ನಿನ್ನ ಚರಣ
ಸಂಭ್ರಮದಿ ಕುಂತ್ರ ನಿಂತ್ರ
ರಂಬಿಯಾಗಿ ನಡಿಸಿದೆ ನಿನ್ನ ಯಂತ್ರ ॥ ಗೀ ॥

ಶುಂಬ ನಿಶುಂಬರ ಕ್ವಾಣಾ
ಗಂಭೀರಳೆ ಕಡಿದೆ ಗೋಣ
ಜಂಬಿಗೆಯ ಶಿವಶರಣ
ಬರೆದ ನಿನ್ನನು ಪತ್ರ
ಪತ್ರದಿ ಬಾ ಒಂದು ಮಾಡು ಪವಿತ್ರ ॥ ಗೀ ॥[೬೫]

ಗೊಂದಲಿಗರು ಜನಪದ ಸಾಹಿತ್ಯವನ್ನು ತಮ್ಮದೇ ಪರಂಪರೆಯಲ್ಲಿ ಪೋಷಣೆ ಮಾಡುತ್ತ ಬಂದಿದ್ದಾರೆ ಅವರ ಒಂದು ಸ್ತುತಿ ಪದವನ್ನು ಗಮನಿಸೋಣ.

**ಜಗದಂಬಾ ಸ್ತುತಿ**

ಬಾ ಮಾಯಿ ಜನಗದಂಬಿ
ಮಾಯದ ಮಾತಿನರಂಬಿ ॥ ಪಲ್ಲ ॥
ಬಾ ಮಾಯಿ ಜಗದಂಬಿ
ಕಂಕಣ ಕೈಯಾಲಿ
ಕಿವಿಯಾಗ ಮುತ್ತಿನವಾಲಿ
ಪದಕವ ಕೊರಳಲ್ಲಿ
ನವರತ್ನ ಗಂಡಮಾಲಿ
ಬಾ ಮಾಯಿ ಜಗದಂಬೆ
ನೋಡಲಿಕ್ಕೆ ನಿನ್ನ ರೂಪಾ
ಓಡಿ ಹೋದಾವೇನ ಪಾಪಾ
ತೋರಿ ಹೋಗ ನಿನ್ನ ದೀಪಾ
ಹಿಡದಿನ್ನೆ ಜ್ಞಾನ ದೀಪಾ
ಬಾ ಮಾಯಿ ಜಗದಂಬಾ
ನಾಕದಿಕ್ಕಿಗೆ ನಾಕ್ ಸಮುದ್ರ
ನಟ್ಟ ನಡುವೆ ತುಳಜಾಪುರ
ಪೂಜ ಆಗುವ ಅವತಾರ
ಪರಶುರಾಮು ನಿನ್ನ ಕುಮಾರ[೬೬]

ಅಮ್ಮಾ ಅಮ್ಮಾ ದೇವಿ ಅಂಬಾದೇವಿ, ಜಗದಂಬಾ ರೇಣುಕಾದೇವಿ ಅಂಬಾಬಾಯಿ ಇತ್ಯಾದಿ ಹೆಸರುಗಳನ್ನು ಗೊಂದಲಿಗರು ಕೊಂಡಾಡುವರು. ಅಂಬಾಬಾಯಿ ಗುಡಿಯಲ್ಲಿ ಹಾಡಿದ ಹಾಡನ್ನು ಇಲ್ಲಿ ಗಮನಿಸೋಣ.

**ಅಂಬಾಸ್ತುತಿ**

ಅಂಬಾ ನಿನ್ನ ಸ್ಮರಣೆಯ ನಾನು
ದೇವಿ ನಿನ್ನ ಸ್ಮರಣೆಯ ನಾನು
ಮರೆಯಲಾರೆನ ದೇವಿ ಮರೆಯಲಾರೆನು
ಖಡಗದಿಂದ ಕ್ವಾಣನ ಶಿರವು
ಹರಣ ಮಾಡಿದಾಳ ದೇವಿ
ಅಂಬಿ ನಿನ್ನ ಸ್ಮರಣೆಯನಾನು
ಎಂಟು ಭುಜ ಹತ್ತು ಕೈಯಾ
ಮುಕುಟಾನ ಚೆಂದ ದೇವಿ
ಅಂಬಿ ನಿನ್ನ ಸ್ಮರಣೆಯನಾನು
ಕಲ್ಲು ಗುಡಿಯ ಕಟ್ಟಿ ದೇವಿ

ಕೊರಳದಲ್ಲಿ ಇರುವುವಾಕೆ
ಅಂಬಿ ನಿನ್ನ ಸ್ಮರಣೆಯನಾನು
ದೇಶಕ್ಕ ದಿಕ್ಕವಾದ
ವಾನುಳ್ಳ ಶಿಶುನಾಳ
ಅಂಬಿ ನಿನ್ನ ಸ್ಮರಣೆಯ ನಾನು
ಏಳು ಕೊಳ್ಳದ ವಾಸ
ಎಲ್ಲರ ಅಮ್ಮನಾಗಿ
ಎಲ್ಲಮ್ಮ ನೀನಮ್ಮ[೬೭]

ಗೊಂದಲಿಗ ವೃತ್ತಿ ಗಾಯಕರ ಸ್ತುತಿ ಪದದ ಒಂದೆರಡು ಧಾಟಿಗಳಿಂದ ಹಾಡುಗಳು ಇಲ್ಲಿವೆ.

### ಅಂಬಾದೇವಿ ಸ್ತುತಿ

ಬರಬಾರದೆ ನನ್ನ ಮನಿಗಿ
ಅಂಬಾದೇವಿ ಆನಂದಿ
ಅರ್ಥದಲ್ಲಿ ರೇಣುಕಾ ನೀಬಾ
ತ್ರೇತಾದಲ್ಲಿ ಜಾನುಕಾ ನೀಬಾ
ದ್ವಾಪಾರದಲ್ಲಿ ದ್ರೌಪದಿ ಎನಿಸಿದಿ
ಕಲಿಯ ಲೋಕದಲ್ಲಿ ಎಲ್ಲಮ್ಮನಾದಿ
ಬರಬರಾದೇ ನನ್ನ ಮನಿಗಿ
ಇರುವುದು ಏಳಕೊಳ್ಳ ಸ್ಥಳ
ಜಳಕ ಮಾಡುದು ಏಣಿಗೊಂಡ
ಖಾಸ ಸೊಕ್ಕಿನವರನ್ನೆಲ್ಲ
ಮೀಸಿಯ ತಗಿಸಿರಿ
ದಾಸದಾಸರಿಗೊಲದಿ
ನಿನ್ನ ಹರಸಿ ಇರುವುದು ಜೋಗಳಬಾವಿ

(ಕೃಷ್ಣಪ್ಪ ಗೊಂದಳಿ, ಮನ್ನೇರಹಾಳು)

ಕರ್ನಾಟಕದ ಗೊಂದಲಿ ಸಮಾಜ ಸಂಘ ಚೌಡಪ್ಪ ದುಮ್ಮಳ ಇವರ ಮಾರ್ಗದಶನದ ಮೇರೆಗೆ ಕೊಪ್ಪಳ ಜಿಲ್ಲೆಯಲ್ಲಿ ಗೊಂದಲಿಗರನ್ನು ಶೋಧಿಸಿದನು.

### ದೇವಿ ಸ್ತುತಿ

ಅನಾಥರಿಗೆ ಮೂಲಮಾಯ
ದೇವತೆಯಾದ ಅಂಬಾ
ಭಕ್ತಿ ಭಾವ ಎಂಬುತ
ಜ್ಯೋತಿಯನ್ನು ಬೆಳಗುವಾ ಅಂಬಾ
ಜ್ಞಾನ ಎಂಬ ಪ್ರಕಾಶಾ

ಕೊಡುವ ಅಂಬಾ
ಜಗತ್ತಿಗೆ ಹನ್ನೊಂದನ ಅವತಾರ ತಾಳಿ
ಮೂಲ ಪೀಠ ಎಲ್ಲಮ್ಮನಾದಿ
ಹೆಸರು ಹೊತ್ತು
ಗೊಂದಲಿ ಎಂಬುವ
ಬಿರುದನು ಹೊತ್ತು
ಸರ್ವರ ಭಾವಾ ನಿನ್ನಾ ಮಾಯಾ[೬೮]

ಸಮಗ್ರ ಕೊಪ್ಪಳ ಜಿಲ್ಲೆಯಲ್ಲಿ ಗೊಂದಲಿಗರ ಸ್ತುತಿ ಪದಗಳನ್ನು ಸಂಗ್ರಹ ಮಾಡಿ ಆಳಕ್ಕೆ ಹೋಗಿ ಸಂಶೋಧನೆ ಮಾಡಿದಾಗ ಅವರ ಪರಂಪರೆಯನ್ನು ಶಕ್ತಿಯನ್ನು ಸ್ತುತಿಸುವುದೇ ಆಗಿದೆ.

**ಅಡಿಟಿಪ್ಪಣಿಗಳು**

೧. ಬೋರಲಿಂಗಯ್ಯ ಹಿ.ಚಿ.(ಸಂ), ೧೯೯೬, **ಕರ್ನಾಟಕ ಜನಪದ ಕಲೆಗಳ ಕೋಶ,** ಪುಟ ೧೪೮.

೨. ಅದೇ, ಪುಟ ೧೪೯–೧೫೦.

೩. ಅದೇ, ಪುಟ ೧೫೪.

೪. ಬಸವರಾಜ ಆಕಳವಾಡಿ, ೨೦೦೪, **ಉತ್ತರ ಕರ್ನಾಟಕ ಜನಪದ ಹಬ್ಬಗಳು,** ಪುಟ ೧೦೯.

೫. ಬಿರಾದಾರ ಮ.ಗು, ೨೦೦೦, **ಹೋಳಿ ಹಾಡುಗಳು,** ಪುಟ ೧೨.

೬. ಅದೇ, ಪುಟ ೧೫.

೭. ಅದೇ, ಪುಟ ೧೭.

೮. ಅದೇ, ಪುಟ ೧೯.

೯. ದುರ್ಗಪ್ಪ ಸುಭಾಸ ದೊಡ್ಡಮನಿ., ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೫೯೧.

೧೦. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೨೩೦–೨೩೧.

೧೧. ಅಂಗಡಿ ಎಸ್.ಎಸ್, ೨೦೦೮, ಜನಪದ ಸಾಹಿತ್ಯ ಭಾಷೆ, ಪುಟ ೨೩೧–೨೩೨.

೧೨. ಭೀಮಪ್ಪ ಶೆಟ್ಟೆಪ್ಪ ಕುರುಬರು, ಕುಕನೂರು.

೧೩. ದಾವನ್‌ಸಾಬ, ಅತ್ತರ ಆಜಲಕಟ್ಟಿ.

೧೪. ಸಿದ್ದಪ್ಪ, ಕುಕನೂರು.

೧೫. ಭೀಮಪ್ಪ ಶೆಟ್ಟೆಪ್ಪ ಕುರುಬರು, ಕುಕನೂರು.

೧೬. ಅಂಗಡಿ ಎಸ್.ಎಸ್, ೨೦೦೮, **ಜನಪದ ಸಾಹಿತ್ಯ ಭಾಷೆ,** ಪುಟ ೨೩೩–೨೩೪.

೧೭. ಅದೇ, ಪುಟ ೨೩೫.

೧೮. ವಿಶಾಲಾಕ್ಷಿ., **ಕರನೇ ನುಲ್ನುಡಿ(ಜುಲೈ-೨೦೧೨, ಪತ್ರಿಕೆ),** ಪುಟ ೬೮.

೧೯. ಅದೇ, ಪುಟ ೬೯.

೨೦. ಅದೇ, ಪುಟ ೭೦–೭೧.

೨೧. ಶ್ರೀದುರ್ಗಪ್ಪ ಸುಭಾಸ ದೊಡ್ಡಮನಿ, ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೫೮೮.

೨೨. ಅದೇ, ಪುಟ ೫೮೬.

೨೩. ಅದೇ, ಪುಟ ೫೯೦–೫೯೧.

೨೪. ವೀರೇಶ ಬಡಿಗೇರ, **ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು: ಒಂದು ಸಾಂಸ್ಕೃತಿಕ ಅಧ್ಯಯನ,** ಪುಟ ೧೭೫.

೨೫. ಅದೇ, ಪುಟ ೧೭೭.

೨೬. ಅದೇ, ಪುಟ ೧೮೦–೧೮೧.

೨೭. ಹನುಮಂತ ಬಡಗಿ, ಜಂಗಮರ ಕಲ್ಲುಗಡಿ.

೨೮. ರೇವಣ್ಣಸಿದ್ದಪ್ಪ ಕುರುಬರು, ಕುಕನೂರು.

೨೯. ಭೀಮಣ್ಣ, ಮಲ್ಲಾಪುರ.

೩೦. ಧರ್ಮಣ್ಣ, ನವಲಿ.

೩೧. ಚಂದ್ರಪ್ಪ, ೨೦೦೯, **ಡೊಳ್ಳಿನ ಹಾಡುಗಳು: ಒಂದು ಸಾಂಸ್ಕೃತಿಕ ಅಧ್ಯಯನ,** ಪುಟ ೩೭೧.

೩೨. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೨೪೫.

೩೩. ಅದೇ, ಪುಟ ೨೪೮–೨೪೯.

೩೪. ಅದೇ, ಪುಟ ೨೫೦.

೩೫. ಪುರುಷೋತ್ತಮ ಬಿಳಿಮಲೆ, ೧೯೯೭, **ಹಂಪಿ ಜಾನಪದ,** ಪುಟ ೩೮–೩೯.

೩೬. ಅದೇ, ಪುಟ ೪೦–೪೧.

೩೭. ನಾರಾಯಣ ಗಿರಿಯಪ್ಪ., ೨೦೦೭, **ಆನೆಗೊಂದಿ ಜಾನಪದ,** ಪುಟ ೩೫–೩೬.

೩೮. ಶ್ರೀ ಜಗದೀಶ ನಾ ಬ್ಯಾಲಹುಣಸಿ, ೨೦೦೬, **ಕೊಪ್ಪಳ ಗವಿಮಠ: ಸಾಂಸ್ಕೃತಿಕ ಅಧ್ಯಯನ,** ಪುಟ ೧೯೬–೧೯೮.

೩೯. ಶ್ರೀ ದುರ್ಗಪ್ಪ ಸುಭಾಷ ದೊಡ್ಡಮನಿ, ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೫೭೬–೫೭೭.

೪೦. ಅದೇ, ಪುಟ ೫೭೮.

೪೧. ಅದೇ, ಪುಟ ೫೭೯–೫೮೦.

೪೨. ಅದೇ, ಪುಟ ೫೮೨.

೪೩. ಅದೇ ಪುಟ, ೫೮೩–೫೮೪.

೪೪. ಪ್ರಕಾಶ ಬಳ್ಳಾರಿ, ೨೦೦೭, **ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು: ಒಂದು ಅಧ್ಯಯನ,** ಪುಟ ೪೫.

೪೫. ಅದೇ, ಪುಟ ೮೬–೮೭.

೪೬. ಅದೇ, ಪುಟ ೪೭.

೪೭. ಅದೇ, ಪುಟ ೮೮–೮೯.

೪೮. ಪ್ರಕಾಶ ಬಳ್ಳಾರಿ, ೨೦೦೭, **ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು: ಒಂದು ಅಧ್ಯಯನ,** ಪುಟ ೮೬.

೪೯. ಅದೇ, ಪುಟ ೬೬.

೫೦. ಲಾಲಾಸಬ, ಕುದುರಿಮೋತಿ.

೫೧. ಗೌಸಸಾಬ, ಕುದುರಿಮೋತಿ.

೫೨. ರಜಾಕಾಸಾಬ, ಬಿಸನಹಳ್ಳಿ.

೫೩. ಹುಸೇನ ಮಕಾನ್‌ದಾರ, ಕುದುರಿಮೋತಿ.

೫೪. ಅಕ್ಬರ್ ಸಿ. ಶಾಲಿಮಿರ್ಚಿ, ಮಂಗಳೂರು.

೫೫. ಇಬ್ರಾಹಿಂಸಾಬ, ಬಹದ್ದೂರಬಂಡಿ.

೫೬. ಗೀತ ಬಿ.ವಿ, ೨೦೦೯, **ತುಂಗೆ ಮಡಿಲ ಜನಪದ,** ಪುಟ ೧೦೭–೧೦೮.

೫೭. ಅದೇ, ಪುಟ ೧೦೯–೧೧೦.

೫೮. ದುರ್ಗಪ್ಪ ಸುಭಾಷ ದೊಡ್ಡಮನಿ, ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೯೦೧.

೫೯. ಅದೇ., ಪುಟ ೯೦೨–೯೦೩.

೬೦. ವೀರೇಶ ಬಡಿಗೇರ, ೧೯೯೯, **ಉತ್ತರ ಕರ್ನಾಟಕ ಜಾನಪದ ಗೀತ ಮೇಳಗಳು,** ಪುಟ ೧೨೫.

೬೧. ಅದೇ, ಪುಟ ೧೨೯–೧೩೦.

೬೨. ಅದೇ, ಪುಟ ೧೩೪–೧೩೬.

೬೩. ದುರ್ಗಪ್ಪ ಸುಭಾಷ ದೊಡ್ಡಮನಿ., ೨೦೦೭, ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ, ಪುಟ ೬೦೩–೬೦೪.

೬೪. ಈರಪ್ಪ, ಚಿಕ್ಕಸಿಂದೋಗಿ.

೬೫. ಈರಪ್ಪ, ಚಿಕ್ಕಸಿಂದೋಗಿ.

೬೬. ಹನುಮಂತಪ್ಪ, ತಾವರೆಗೆರೆ.

೬೭. ಈರಪ್ಪ, ಚಿಕ್ಕಸಿಂದೋಗಿ.

೬೮. ಹನುಮಂತಪ್ಪ, ತಾವರೆಗೆರೆ.

□□

ಅಧ್ಯಾಯ : ಐದು

# ಹೆಂಗಸರ ಹಾಡುಗಳು

---

ಅಧ್ಯಾಯ : ಐದು

# ಹೆಂಗಸರ ಹಾಡುಗಳು

## ೫.೧. ಬೀಸುವ, ಕುಟ್ಟುವ ಹಾಡುಗಳು

ಪ್ರಾಚೀನ ಕಾಲದಲ್ಲಿ ಪ್ರತಿಯೊಂದು ಧಾನ್ಯ, ದವಸಗಳನ್ನು ಕುಟ್ಟಿ ಪುಡಿ ಮಾಡುವ ಸಂದರ್ಭಗಳಲ್ಲಿ ಹಾಡುವ ಪದ್ಧತಿಯನ್ನು ನಮ್ಮ ಗ್ರಾಮೀಣ ಜನಪದರರು ಬೆಳೆಸಿಕೊಂಡು ಬಂದಿದ್ದಾರೆ. ಬೀಸುವಾಗ, ಕುಟ್ಟುವಾಗ, ರಾಶಿ ಮಾಡುವಾಗ, ಕಣ ಮಾಡುವಾಗ, ಉಳುವಾಗ, ಬಿತ್ತುವಾಗ, ಕಟಾವು ಮಾಡುವಾಗ ಹೀಗೆ ದೈನಂದಿನ ಜೀವನದಲ್ಲಿ ತಮ್ಮ ಆಯಾಸ, ಬೇಸರಕೆಗಳನ್ನು ಹಾಡಿನ ಮೂಲಕ ದೂರ ಮಾಡುತ್ತಿದ್ದ ಬುದ್ಧಿವಂತಿಕೆ ನಮ್ಮ ಜನಪದರದ್ದು. ಇಂದಿನ ಯುವಪೀಳಿಗೆಗೆ ಅವುಗಳೆಲ್ಲ ಮೇಲ್ನೋಟಕ್ಕೆ ಅಪ್ರಯೋಜಕ ಎಂದೆನಿಸಬಹುದು. ಆದರೆ ಅಂಥ ಹಾಡುಗಳು ಅವರ ಜೀವನಶೈಲಿಯಲ್ಲಿ, ಜೀವನ ಪದ್ಧತಿಯಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿವೆ. ಮಾನಸಿಕವಾಗಿ, ದೈಹಿಕವಾಗಿ ಸದೃಢತೆಯನ್ನು ಕಾಪಾಡಿಕೊಳ್ಳಲು ಅವು ಅತ್ಯವಶ್ಯಕವಾಗಿದ್ದವು ಎಂಬುದನ್ನು ಮರೆಯಲಾಗದು.

ದೈಹಿಕ ಶಕ್ತಿಯನ್ನೇ ಅವಲಂಬಿಸಿಕೊಂಡು ಪ್ರತಿಯೊಂದು ಕೆಲಸ ಕಾರ್ಯಗಳನ್ನು ಮಾಡಿದ ನಮ್ಮ ಪೂರ್ವಜರ ಯಾವುದೇ ರೋಗ-ರುಜಿನಿಗಳಿಲ್ಲದೇ ನೂರು ವರ್ಷ ಬಾಳಿ ಬದುಕಿದರು ಎನ್ನುವುದೇ ನಮ್ಮ ಯುವ ಪೀಳಿಗೆಗೆ ಆಶ್ಚರ್ಯದ ಸಂಗತಿ.

ಹೆಣ್ಣುಮಕ್ಕಳು ನಸುಕಿನಲ್ಲಿ ಕೋಳಿ ಕೂಗುವ ಮೊದಲೇ ಎದ್ದು, ಸೂರ್ಯ ಉದಯ ವಾಗುವವರಿಗೂ ಬೀಸುತ್ತಿದ್ದರು. ಬೀಸುವ ಸಮಯದಲ್ಲಿ ಹಾಡುಗಳನ್ನು ಹೇಳುತ್ತಿದ್ದರು. ಅವುಗಳನ್ನು ಬೀಸುವ ಹಾಡುಗಳೆಂದು ಕರೆಯಲಾಗಿದೆ. ಸ್ತ್ರೀ ಜನಪದ ಸಾಹಿತ್ಯವೆಂದರೆ ಬೀಸುವ, ಕುಟ್ಟುವ ಹಾಡು ಎನ್ನುವಷ್ಟರಮಟ್ಟಿಗೆ ಸುಪ್ರಸಿದ್ಧವಾದ ಗೀತೆಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಅವುಗಳನ್ನು ಕುರಿತು ಪ್ರಸ್ತುತ ಸಂದರ್ಭದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ರಾಗಿಯ ಕಲ್ಲಿಗೆ ರನ್ನದ ಕೈಗೂಟ  
ರಾಮದೇವರೆಂಬೊ ಹಿಡಿಗೂಟ-ಹಿಡಕೊಂಡು  
ರಾಜುಣ ದೇವನ ಕೊರಳಿಗೆ

ಕಲ್ಲ ಕೂಟ್ಟಮ್ಮಗೆ ಎಲ್ಲ ಭಾಗ್ಯವು ಬರಲಿ  
ಕಲ್ಲತಿ ಮೇಲೆ ಮಗ । ಬರಲಿ-ನಿಮ್ಮನಿಗೆ  
ಮಲ್ಲಿಗೆ ಮಡಿಯೊ ಸೊಸೆ ಬರಲಿ[೧]

ಇಲ್ಲಿ ಕಲ್ಲು ಜೀವನಾಧಾರ ವಸ್ತು. ಇದರಿಂದ ಸುಖ, ನೆಮ್ಮದಿ, ಸಂತೋಷ ಲಭಿಸುವುದು; ಬದುಕು ಹಸನಾಗುವುದು. ಕಲ್ಲು ಕೂಟಮ್ಮ ಅಂದರೆ ಕಲ್ಲಮ್ಮನಿಗೆ ಎಲ್ಲ ಭಾಗ್ಯವು ಬರಲಿ ಎಂದು ವರ್ಣಿಸುತ್ತದೆ.

ಬೀಸುವ, ಕುಟ್ಟುವ ಹಾಡುಗಳು ತ್ರಿಪದಿ ದಾಟಿಯಲ್ಲಿ ರಚಿಸಲ್ಪಟ್ಟಿವೆ. ಹೆಸರು ಸೂಚಿಸುವಂತೆ ಕುಟ್ಟುವ, ಬೀಸುವ ಕ್ರಿಯೆ ನಡೆದಾಗ ಅದರ ಜೊತೆಯಲ್ಲಿ ಶ್ರಮ ಪರಿಹಾರಕ್ಕೆ, ಆತ್ಮಸಂತೋಷಕ್ಕಾಗಿ ಹಾಡುಗಳನ್ನು ಗರತಿಯರು ಹಾಡಿಕೊಂಡಿದ್ದಾರೆ. ಜೀವನವೇ ದೇವತೆಯಾದ ತ್ರಿಪದಿ ಛಂದಸ್ಸಿನಲ್ಲಿ ಹೊರಹೊಮ್ಮಿದ ಗರತಿಯ ಹಾಡಿನ ಋಷಿಗಳು ಹೆಣ್ಣುಮಕ್ಕಳು. ಅವರದೇ ನಿಜವಾದ ಕಾವ್ಯ ಜನವಾಣಿ ಬೇರು ಕವಿವಾಣಿ ಹೂ ಎನ್ನುವ ಮಾತು ಗರತಿಯ ತ್ರಿಪದಿಕಾವ್ಯಕ್ಕೆ ತುಂಬ ಅನ್ವಯಿ ಸುವಂಥದ್ದು. ಇದರಿಂದಾಗಿ ಗರತಿಯ ಜೀವನದ ಮೌಲ್ಯಗಳು ಹಾಡಿನ ತುಂಬೆಲ್ಲ ತುಂಬಿಕೊಂಡಿವೆ. ಕಾಯಕವೇ ಕೈಲಾಸವೆಂದು ಸಾರಿದ ಬಸವಣ್ಣನವರು ತಮ್ಮ ಪತ್ನಿ ನೀಲಮ್ಮನಿಗಾಗಿ ಒಂದು ಒಳ್ಳೆಯ ಬೀಸುವ ಕಲ್ಲು ಹುಡುಕಿಕೊಂಡು ದೇಶವನ್ನೆಲ್ಲಾ ಸುತ್ತಿದರಂತೆ.

ಬೀಸೋ ಕಲ್ಲಿಗೆ ದೇಶವ ತಿರುಗ್ಯಾರೇ
ಸಕಲ ಸಂಪನ್ನ ಮಗಳಿಗೇ–ನೀಲಮ್ಮಗೆ
ದೇಶ ತಿರುಗ್ಯಾರೆ ಬಸವಯ್ಯಾ

(ಲಕ್ಷ್ಮವ್ವ, ಆಡೂರು, ಯಲಬುರ್ಗಾ)

ಹೀಗೆ ಬೀಸುವ ಕಾಯಕದ ಪರಂಪರೆ ಹಿರಿದೆನಿಸಿದೆ.

ಎದ್ದು ನಿಮಗ್ಯಾನ ಏಳುತಲೆ ನಿಮಗ್ಯಾನ
ಸಿದ್ಧರ ಗ್ಯಾನ ಶಿವಗ್ಯಾನ–ಮಾ ಶಿವನೇ
ನಿದ್ದೆ ಗಣ್ಣಾಗೆ ನಿಮಗ್ಯಾನ[3]

ಬೀಸುವಾಗ ದೇವರನ್ನು ಕುರಿತು ಹಾಡಿರುವ ಪ್ರಾರ್ಥನಾ ಗೀತೆಗಳಿಗೆ ಸರಿಸಾಟಿನೇ ಇಲ್ಲ. ಹೃದಯ ತುಂಬಿಬಂದ ಭಕ್ತಿ–ಭಾವವೇ ಸರಳ ಸುಂದರ ಭಾಷೆಯಲ್ಲಿ ಮೈವೆತ್ತು ಬಂದಿದೆ.

ಜನಪದ ದೈನಂದಿನ ಬದುಕು ಮೊದಲಾಗುವುದೇ ಬೀಸುವ ಕಾಯಕದಿಂದ. ಬೀಸುವ ಕ್ರಿಯೆ ನಡೆಯುತ್ತಿದ್ದರೆ, ಮನೆಯಲ್ಲಿ ಎಲ್ಲವೂ ಸರಿಯಾಗಿದೆ ಎಂದರ್ಥ. ಪ್ರತಿನಿತ್ಯವೂ ಅಕ್ಕಿ, ರಾಗಿ, ಜೋಳ ಮುಂತಾದ ಧಾನ್ಯಗಳನ್ನು ಬೀಸಿ ಅಣಿಗೊಳಿಸಿಕೊಂಡರೆ ಆ ದಿನದ ಅಗತ್ಯಗಳು ಪೂರೈಕೆ ಗೊಳ್ಳುತ್ತವೆ. ಈ ಬೀಸುವ ಕಾಯಕದಲ್ಲಿ ಏನಾದರೂ ಅಡ್ಡಿ ಆತಂಕಗಳು ಕಾಣಿಸಿಕೊಂಡರೆ ಬದುಕೇ ದುಸ್ತರವಾದಂತೆ. ಅದಕ್ಕಾಗಿಯೇ ಬೀಸುವ ಕಲ್ಲನ್ನು ಕುರಿತು ಹೀಗೆ ಹಾಡಿದ್ದಾರೆ.

ಕಂಡ ರಾಗಿ ಬೀಸೋನ ಮುತ್ತಿನ ರಾಗಿಯ ಕಲ್ಲೆ
ದಂಡ ತಂದಿವ್ನಿ ಕೊರಳಿಗೆ–ನಮ್ಮನಿಯ
ಕಂಬದ ಸಾಲಲ್ಲಿ ಇಡುಬಾರೋ

ರಾಗಿಯ ಕಲ್ಲಿಗೆ ರನ್ನನ ಕೈಗೂಟ
ರಾಮದೇವ ರೆಂಬೊ ಹಿಡಿಗೂಟ–ಹಿಡಿಕೊಂಡು
ರಾಜುಣ ದೇವನ ಕೊರಳಿಗೆ[4]

ಬೀಸುವ ಕಲ್ಲು ಜನಪದರಿಗೆ ಜೀವನಾಧಾರ ವಸ್ತು. ಕಲ್ಲಮ್ಮ ತಾಯಿಯ ಕರುಣೆಯಿಂದಲೇ ಕಲ್ಲು ಹಿಡಿದಾತೆಗೆ ಮಗ, ಸೊಸೆಯರು ಬರುತ್ತಾರೆ. ಸುಖ, ಸಂತೋಷ ಲಭಿಸುತ್ತದೆ. ಬದುಕು ಹಸನಾಗುವುದು, ಬೆಳಗುವುದು, ಅದಕ್ಕಾಗಿಯೇ ಬೀಸುವ ಕಲ್ಲನ್ನು 'ಕಲ್ಲಮ್ಮ ತಾಯಿ' ಎಂದು ಕರೆದಿದ್ದಾರೆ. ಬೀಸುವಾಗ, ಹೇಳುವಾಗ ಬಾಂಧವ್ಯ ಪರಗೀತೆಗಳೆಲ್ಲ ಹೆಣ್ಣಿನ ಬದುಕನ್ನು ಚಿತ್ರಿಸುತ್ತವೆ. ಬಾಲ್ಯದಲ್ಲಿ ತಾಯಿ-ತಂದೆಯರೊಂದಿಗೆ, ಯೌವನದಲ್ಲಿ ಗಂಡನೊಂದಿಗೆ, ಮುಪ್ಪಿನಲ್ಲಿ ಮಕ್ಕಳೊಂದಿಗೆ ಬಾಳುವೆ ನಡೆಸುವ ಹೆಣ್ಣಿನ ಬದುಕಿನ ವಿವಿಧ ಸ್ತರದ ಶೀಲವರ್ತನೆಯ ಚಿತ್ರಣ ಇಲ್ಲಿದೆ. ಒಟ್ಟಿನಲ್ಲಿ ಗರತಿಯ ಬದುಕಿನ ಹಿರಿಮೆಯನ್ನು ಸಾರುವ ಗೀತೆಗಳಿವು. ಇಂದಿನ ಮದುವೆ ದಿನಗಳಲ್ಲಿ ಹಾಡುತ್ತಾ, ಹಾಡು ಹೇಳಿಸುತ್ತಾ, ಹೆಣ್ಣಿಗೆ ಬೀಸುವ, ಕುಟ್ಟುವಶಾಸ್ತ್ರ ಮಾಡಿಸುವುದರಲ್ಲಿ ಹಿಂದೆ ಹೆಣ್ಣಿನ ಆಯ್ಕೆ ಮಾಡುತ್ತಿದ್ದ ರೀತಿಯ ಪರಿಚಯವಾಗುವುದರ ಜೊತೆಗೆ ಈ ಕಾಯಕಗಳ ಬಗೆಗೆ ಹಿಂದಿನವರಿಗೆ ಎಂಥ ಹೆಗ್ಗಳಿಕೆ ಮತ್ತು ಪವಿತ್ರ ಭಾವನೆ ಇದ್ದವೆಂದು ತಿಳಿದುಬರುತ್ತದೆ. ಹೆಂಗಸರ ಹಾಡುಗಳಲ್ಲಿ ಬೀಸುವ ಪದಗಳಿಗೆ ಮಹತ್ವದ ಸ್ಥಾನವಿದೆ. ಇಂದು ಅಕ್ಕಿ ಮಾಡುವ ಮತ್ತು ಹಿಟ್ಟು ಮಾಡುವ ಯಂತ್ರಗಳು ಹಳ್ಳಿಗಳನ್ನು ಪ್ರವೇಶಿಸಿರುವುದರಿಂದ ಈ ಕುಟ್ಟುವ ಮತ್ತು ಬೀಸುವ ಕೆಲಸಗಳು ಮಾಯವಾಗುತ್ತಿವೆ. ಅವುಗಳೊಂದಿಗೆ ಹಾಡುಗಳು ಕಣ್ಮರೆಯಾಗುತ್ತಿವೆ. ಆದರೆ ಈ ಪದಗಳು ಭತ್ತ ಕುಟ್ಟುವ ಕಾಯಕವಷ್ಟೇ ಸೀಮಿತವಾದವು. ಭತ್ತ ಕುಟ್ಟುವ ಕಾಯಕ ಶ್ರಮದಾಯಕ ವಾದದ್ದು, ಆ ಶ್ರಮವನ್ನು ನೀಗಿಸಿಕೊಳ್ಳಲು ಕುಟ್ಟುವವರು ಪದಗಳನ್ನು ಹಾಡುತ್ತಿದ್ದರು. ಒರಳಲ್ಲಿ ಭತ್ತವನ್ನು ಹಾಕಿ ಒನಕೆಗಳನ್ನು ಹಿಡಿದು ಕುಟ್ಟುತ್ತಾ ಹಾಡುತ್ತಿದ್ದರಿಂದ ಅದಕ್ಕೆ ಒನಕೆ, ವಂಡುಗಳೆಂಬ ಹೆಸರು ಬಂತು. ಈ ಹಾಡುಗಳಿಗೆ ತಮ್ಮದೇ ಆದ ಚರಿತ್ರೆ ಇದೆ.

ಈ ಪದ್ಯವು ತಂತ್ರಜ್ಞಾನದ ಪೂರ್ವದ ಸಂದರ್ಭದಲ್ಲಿ ಜನಜೀವನಕ್ಕೆ ಅಗತ್ಯವಾಗಿದ್ದ ಆಹಾರವನ್ನು ತಯಾರಿಸಬೇಕಾದರೆ ಶ್ರಮಪಡಬೇಕಾಗಿತ್ತು, ಅದು ಅನಿವಾರ್ಯವಾಗಿತ್ತು. ಆಧುನಿಕತೆಯ ಕಾಲಘಟ್ಟದಲ್ಲಿ ಹಿಟ್ಟು ಬೀಸುವ ಗಿರಣಿಗಳು ಹೆಚ್ಚು ಚಾಲನೆ ಪಡೆದವು. ಆದರೆ ಅದಕ್ಕೂ ಮುಂಚೆ ಬೀಸುವ ಕಲ್ಲು ಜನಜೀವನದಲ್ಲಿ ಮಹತ್ವದ ಸ್ಥಾನ ಪಡೆದಿತ್ತು. ಕೋಳಿ ಕೂಗುವ ಮುನ್ನ ಎದ್ದು ಬೀಸಬೇಕಿತ್ತು. ಆ ಬೀಸುವ ಪದಾರ್ಥಗಳು ಆ ಸಂದರ್ಭದ ಕೃಷಿಯನ್ನು ಆಧರಿಸಿರುತ್ತಿತ್ತು. ಈ ಪದ್ಯದಲ್ಲಿ ಕಂಡುಬರುವ ರಾಗಿಯು ಈ ಪ್ರದೇಶದ ಪ್ರಮುಖ ಬೆಳೆಯಾಗಿತ್ತೆಂದು ತಿಳಿದುಬರುತ್ತದೆ. ಗ್ರಾಮೀಣ ಭಾಗದ ಜನಜೀವನ ಸಹಕಾರ ಮನೋಭಾವನೆಯಿಂದ ಕೂಡಿತ್ತೆಂದು ತಿಳಿದುಬರುತ್ತದೆ. ಭಾವನಾತ್ಮಕವಾಗಿ ಸ್ಥಳೀಯ ಜನರು ಪರಸ್ಪರ ಭಾವಜೀವಿಗಳಾಗಿದ್ದರು. ಒಬ್ಬರಿಗೊಬ್ಬರು ನೆರವು ನೀಡುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಬಡತನದ ಕಾರಣದಿಂದಾಗಿ ಬೇರೆಯವರ ಮನೆಯ ಬೀಸುವ ಕಲ್ಲಿನಿಂದ ರಾಗಿ ಬೀಸಿಕೊಂಡು ಬಂದ ನಂತರ ಉಪಕಾರ ಮಾಡಿದವರನ್ನು ಸ್ಮರಣೆ ಮಾಡುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಪರಸ್ಪರ ಹೊಂದಾಣಿಕೆ ಸ್ವಭಾವ, ಪ್ರೀತಿ, ವಾತ್ಸಲ್ಯ, ಕರುಣೆ, ಕೃತಜ್ಞತೆ ಎಲ್ಲವುಗಳನ್ನು ಈ ಪದ್ಯಗಳಲ್ಲಿ ಕಾಣಬಹುದಾಗಿದೆ. ಹೆಂಗಸರ ಹಾಡುಗಳಲ್ಲಿ ಮಹತ್ವದ ಸ್ಥಾನವನ್ನು ಹೊಂದಿರುವ ಹಾಡುಗಳನ್ನು ಕೊಪ್ಪಳ ಜಿಲ್ಲೆಯಾದ್ಯಂತ ಕಾಣಬಹುದಾಗಿದೆ. ಇಂದು ಪ್ರತಿಯೊಂದು ದವಸ-ಧಾನ್ಯಗಳನ್ನು ಬೀಸುವ ಯಂತ್ರಗಳು ಬಂದಿದ್ದರಿಂದ ಕುಟ್ಟುವ ಮತ್ತು ಬೀಸುವ ಪದಗಳು ನಶಿಸುತ್ತಿವೆ.

### ೫.೧.೧. ಕುಟ್ಟುವ ಹಾಡುಗಳು

ಬೀಸುವ ಹಾಡುಗಳಷ್ಟೇ ಪ್ರಸಿದ್ಧವಾದ ಮತ್ತೊಂದು ಹೆಣ್ಣುಮಕ್ಕಳ ಹಾಡು ಕುಟ್ಟುವ ಹಾಡುಗಳು. ಗೋಧಿ, ಅಕ್ಕಿ, ಭತ್ತ, ಮೆಣಸಿನ ಖಾರ ಮುಂತಾದವುಗಳನ್ನು ಒರಳಿನಲ್ಲಿ ಹಾಕಿ ಕುಟ್ಟುವ ಸಂದರ್ಭದಲ್ಲಿ ಇಂಥ ಹಾಡುಗಳನ್ನು ಹಾಡುತ್ತಿದ್ದರು. ಸಾಮಾನ್ಯವಾಗಿ ಇಬ್ಬರು ಸ್ತ್ರೀಯರು ಕುಟ್ಟುವ ಕಾರ್ಯದಲ್ಲಿ ತೊಡಗಿರುತ್ತಾರೆ. ಒಬ್ಬಳು ಕೆಳಗೆ ಕುಳಿತುಕೊಂಡು ಕಾಳುಗಳನ್ನು ಸರಿಪಡಿಸುವ ಕೆಲಸವನ್ನು ಮಾಡುತ್ತಾಳೆ. ಇನ್ನೊಬ್ಬಳು ನಿಂತುಕೊಂಡು ಒನಕೆಯನ್ನು ಹಿಡಿದುಕೊಂಡು ಕೆಳಗಿನವರಿಗೆ ಸಾತ್ ನೀಡುತ್ತಾಳೆ. ಮೊದಲೊಬ್ಬಳು ಹಾಡಿದನಂತರ ಹಿಮ್ಮೇಳವಾಗಿ ಇನ್ನೊಬ್ಬಳು ಹಾಡುತ್ತಾಳೆ. ಕುಟ್ಟುವಾಗ, ಬೀಸುವಾಗ ಅಥವಾ ಇಂಥದೇ ಇತರ ಕಾರ್ಯಗಳನ್ನು ಮಾಡುವಾಗ ಜನಪದರು ಕೆಲವು ದೇಸಿ ಮಟ್ಟದ ಹಾಡುಗಳನ್ನು ಹೇಳುತ್ತಿರುವುದು ಸ್ಪಷ್ಟವಾಗಿದೆ. ಇನ್ನು ಜನಪದ ಕ್ರಿಯೆಗಳಿಗೂ ಮತ್ತು ಜನಪದ ಹಾಡುಗಳಿಗೂ ಇರುವ ಒಂದು ಸಂರಚನಾತ್ಮಕ ಸ್ವರೂಪವನ್ನು, ಅವುಗಳ ಪರಸ್ಪರ ಅಂತರಿಕ ಸಂಬಂಧದ ಸೂಕ್ಷ್ಮಾಂಶಗಳನ್ನು ಗುರುತಿಸುವುದು ಮುಖ್ಯ. ಆಗ ಕ್ರಿಯೆ ಮತ್ತು ಹಾಡುಗಳ ಒಂದು ಸಾವಯವ ಸೂತ್ರ ತಂತಾನೇ ರೂಪುಗೊಳ್ಳುತ್ತದೆ. ಅವರ ನಿತ್ಯದ ಜೀವನ ನಿರ್ವಹಣೆಗೆ ಸಂಬಂಧಿಸಿದ ಕೆಲವು ಮೂಲಕ್ರಿಯೆಗಳನ್ನು ಈ ನಿಟ್ಟಿನಲ್ಲಿ ವಿವೇಚನೆಗೆ ಎತ್ತಿಕೊಳ್ಳಬಹುದು.

### ೫.೧.೨. ಕುಟ್ಟುವ ಕ್ರಿಯೆ

ಯಾವುದೇ ದವಸ-ಧಾನ್ಯವನ್ನು ವಿಶೇಷ ಸಿಪ್ಪೆಯಿರುವ ಧಾನ್ಯ-ಭತ್ತ-'ಕಂಕಿ' ಅಥವಾ 'ಸೆರಗು' ಉಳಿದಿರಬಹುದಾದ ಜೋಳ ಒರಳಿಗೆ ಹಾಕಿ ಒನಕೆಯಿಂದ ಕುಟ್ಟಿ ಕಾಳನ್ನು ಬೇರ್ಪಡಿಸುವುದು, ಸ್ವಚ್ಛಗೊಳಿಸುವುದು ಈ ಕುಟ್ಟುವ ಕ್ರಿಯೆಯ ಉದ್ದೇಶ. ಅದರಲ್ಲೂ ಬೇಳೆ ಕಾಳುಗಳನ್ನು ಒರಳಿಗೆ ಹಾಕಿ ಕುಟ್ಟುವುದುಂಟು. ಆಗ ಅದಕ್ಕೆ 'ಥಳಿಸುವುದು' ಎನ್ನುತ್ತಾರೆ. ಕುಟ್ಟುವ ಕ್ರಿಯೆಯ ಬಾಹ್ಯ ಸ್ವರೂಪ ರಚನೆಯಲ್ಲಿ ಕಾಣುವ ಮುಖ್ಯ ವಸ್ತುಗಳು ಮನೆಯ ಒಂದು ಮೂಲೆ, ಅಂಕಣ, ಬಂಕ ಅಥವಾ ನಡುಮನೆಯ ಪಡಸಾಲೆಯ ಒಂದು ಭಾಗದಲ್ಲಿ ಹಾಕಿರುವ ಕಲ್ಲಿನ ಒರಳು. ಯಾವುದೇ ಆಕಾರದ ಸಾಮಾನ್ಯವಾಗಿ ಮೆತ್ತಗಿನ ಕರಿ-ಕಲ್ಲಿನಲ್ಲಿ ನಡುವೆ ಕೊರೆದು ಒಂದಷ್ಟು ಆಳಕ್ಕೆ ಇಳಿದ ವೃತ್ತಕಾರ ಈ ಕಲ್ಲಿನ ಹೊರಮೈ ಕೂಡ ಸಾಮಾನ್ಯವಾಗಿ ದುಂಡಗಿದ್ದು, ನಡುವಿನ ವೃತ್ತಕಾರಕ್ಕೆ ದುಂಡುಕಟ್ಟು ಕೊಡುತ್ತವೆ. ದವಸ ಧಾನ್ಯಗಳನ್ನು ಕುಟ್ಟಲು ಉಪಯೋಗಿಸಲಾಗುವ ಒನಕೆ ಅಥವಾ 'ಒನಿಕೆ' ಬದನೆ ಮರ(ಬಗನೆ ಮರ)ದ ಒಂದು ಒಳ್ಳೆ ಹಿಡಿಗಾತ್ರದ ಸುಮಾರು ನಾಲ್ಕು ಅಡಿ ಉದ್ದದ ಒಂದು ಕಟ್ಟಿಗೆ ತುಂಡು. ಅದನ್ನು ಕೆತ್ತಿ ನುಣುಪಾಗಿನ ಒಂದು ತುದಿ ಮುಖ್ಯವಾಗಿ ಕುಟ್ಟುವ ಮುಖ-ದುಂಡಗೆ, ಇನ್ನೊಂದು ತುದಿ ಸಪಾಟು. ಇದನ್ನು ತಳಿಸಲು ಬಳಸುವ ತುದಿ- ಒಮ್ಮೊಮ್ಮೆ ಈ ಸಪಾಟು ತುದಿಗೆ ಅಣಸು, ಕಟ್ಟು ಹಾಕಿರುವುದು ಉಂಟು. ಅಂದರೆ ಕುಟ್ಟುವಾಗ ಒನಕೆಯನ್ನು ಎತ್ತಿ ಎತ್ತಿ ಒರಳಿನಲ್ಲಿರುವ ಕಾಳಿಗೆ ಪೆಟ್ಟು ಹಾಕಬೇಕು. ಹಾಗೆ ಎತ್ತುವುದಕ್ಕೆ ಕೈಯಲ್ಲಿ ತೂಕ ಬರುವುದಕ್ಕೂ ಒರಳಿಗೆ ಹಾಕುವ ಪೆಟ್ಟುಗಳು ಒರಳನ್ನು ಬಿಟ್ಟು ಅದರ ಅಂಚಿಗೆ ಬೀಳದಂತೆ ಕೆಲಮಟ್ಟಿಗಾದರೂ ನಿಯಂತ್ರಿಸಲು ಒನಕೆಯ ಈ ಸಪಾಟು, ವೃತ್ತಾಕಾರದ ಅಣಸಿನ ತುದಿ ಕುಟ್ಟುವವರಿಗೆ ನೆರವಾಗುತ್ತದೆ ಅಥವಾ 'ಗಾವಾ'ಗುತ್ತದೆ. ಇದರಲ್ಲಿ ಒಂದು ಹಿಡಿಕೆಯ ತುದಿ,

ಇನ್ನೊಂದು ಕುಟ್ಟುವ ತುದಿ ಒರಳಿಗೆ ಸುತ್ತು ಇಬ್ಬರು ಸಾಮಾನ್ಯವಾಗಿ ಹೆಣ್ಣುಮಕ್ಕಳು ಎದುರುಬದುರಾಗಿ ಕುಳಿತು ಬದಿಯಲ್ಲಿ ಕಾಳಿನ ಒಬ್ಬೆಗಳನ್ನು ಇಟ್ಟು ಕಾಳನ್ನು ಒರಳಿಗೆ ದಬ್ಬುತ್ತಿರುತ್ತಾರೆ. ಇನ್ನಿಬ್ಬರು ಎದ್ದುನಿಂತು ಒನಕೆ ಹಿಡಿದಿರುತ್ತಾರೆ. ಒಬ್ಬರೇ ಕುಟ್ಟುವುದಿದ್ದಾಗ ಕಾಳಿನ ಬುಟ್ಟಿ ಬದಿಯಲ್ಲಿ-ಕಾಳನ್ನು ಒರಳಿಗೆ ಕುಟ್ಟುವ ಒನಕೆಗಳ ಪೆಟ್ಟು ಒಂದು ನಿಯತಗತಿಯಲ್ಲಿರುತ್ತದೆ. ಒರಳು-ಒನಕೆ, ಕಾಳುಕುಟ್ಟುವ ಮಹಿಳೆ ಒಬ್ಬರು-ಇಬ್ಬರು ಅಥವಾ ನಾಲ್ಕು ಜನ ಕುಟ್ಟುವ ಕಾರ್ಯ ಮುಂದೆ ಸಾಗಿದಂತೆ ಮೊದಲು ಕೇಳುವ ಸದ್ದು 'ಸುಯ್... ಸುಯ್... ಸುಯ್... ಕ್ರಿಯೆ ಮುಂದುವರಿದಂತೆ ಪೆಟ್ಟುಗಳ ಗತಿಗನುಗುಣವಾಗಿ ಸುಯ್... ಸುಯ್... ಉಶ್... ತವ್ವಾ... ಉಶ್... ತವ್ವಾ... ಉಶ್... ತವ್ವಾ... ಹೀಗೆ ನಡುನಡುವೆ ಉಸಿರಿನ ತಾಣ ಮತ್ತು ಪೆಟ್ಟಿನ ನಿಯತಗತಿಗಳು ಏರ್ಪಡುತ್ತವೆ. ಕುಟ್ಟುವ ಕ್ರಿಯೆಯ ಪೆಟ್ಟುಗಳು ಮತ್ತು ಆ 'ಪೆಟ್ಟು'ಗಳ ನಿಯತಗತಿಯಲ್ಲಿ ಲಯ ರೂಪುಗೊಳ್ಳುತ್ತವೆ. ಕೆಲವು ಕಾಲ ಕ್ರಿಯೆ ಲಯಗಳು ಒಡನೊಡನೆ ಮುಂದುವರೆದು ಆಶಾ... ಬೀಶ್... ಆಶ್... ಬೀಸ್... ಆಶ್... ಬೀಶ್.. 'ಹೀಗೆ ಕ್ರಿಯೆ' 'ಲಯ'ದಲ್ಲಿ ಏಕರೂಪವಾಗುತ್ತದೆ. ಆಗ ಕುಟ್ಟುವ ಕ್ರಿಯೆ ಮುಂದುವರೆದರೂ ಅದರಲ್ಲಿ 'ಲಯ' ಪ್ರಧಾನವಾಗುತ್ತದೆ. ನಿಯಮ ವಲಯದಲ್ಲಿ ಸ್ವಲ್ಪ ಅಂತರದ ದಿಕ್ಕಿನಲ್ಲಿ ಒನಕೆ ಚಲಿಸುತ್ತ ಅದರ ಕ್ರಿಯೆಯಿಂದ ಲಯದಿಂದ ಲಂಬ ವೃತ್ತಗಳು ರೂಪುಗೊಳ್ಳುತ್ತವೆ.[೪]

ಅಕ್ಕಿ ಗಿರಣಿ, ಹಿಟ್ಟಿನ ಗಿರಣಿಗಳು ಎಲ್ಲೆಲ್ಲೂ ತಲೆಯೆತ್ತಿರುವ ಈಗಿನ ಕಾಲದಲ್ಲಿ ರಾಗಿ ಅಥವಾ ಜೋಳ ಬೀಸುವುದನ್ನಾಗಲಿ, ಭತ್ತ, ಗೋಧಿ ಕುಟ್ಟುವುದನ್ನಾಗಲಿ ಹಳ್ಳಿಗಳಲ್ಲಿ ಕಾಣುವುದು ಅಪರೂಪ. ಇತ್ತೀಚಿನವರೆಗೂ ಬೀಸುವ ಹಾಗೂ ಕುಟ್ಟುವ ಕಾಯಕ ಒಂದು ಭವ್ಯ ಪರಂಪರೆಯಾಗಿ ನಡೆದುಕೊಂಡು ಬಂದಿತು. ಮನೆಯಲ್ಲಿಯೂ ಒಂದು ಒನಕೆವಿಯಿದ್ದು ಅವರವರಿಗೆ ಬೇಕಾದಷ್ಟು ಕುಟ್ಟಿ, ಕೇರಿ ಸಿದ್ಧ ಮಾಡಿಕೊಳ್ಳುತ್ತಿದ್ದರು. ಈ ಕೃಷಿ ಕಾರ್ಯದ ಹೊಣೆಯ ಸಂಕೇತವಾಗಿ ಮದುವೆಯ ಸಮಯದಲ್ಲಿ ವಧುವಿನ ಕೈಯಿಂದ ಕುಟ್ಟಿಸುವುದರ, ಬೀಸಿಸುವುದರ ಜೊತೆಗೆ ಆಕೆಯ ತಲೆಯ ಮೇಲೆ ನೆಣಗ ಇಡುವ ಶಾಸ್ತ್ರವೊಂದು ಹಲವು ಮನೆತನಗಳಲ್ಲಿ ಇಂದಿಗೂ ನಡೆಯುತ್ತವೆ. ಬಿಡುವಿಲ್ಲದ ಈ ಕೆಲಸಗಳ ಜೊತೆಗೆ ಮನೆಯವರಿಗೆಲ್ಲ ಹೊತ್ತು ಹೊತ್ತಿಗೆ ಊಟಕ್ಕೆ ಸಿದ್ಧಪಡಿಸುವ ಜವಾಬ್ದಾರಿಯೂ ಸ್ತ್ರೀಯರದ್ದೆ. ಕೋಳಿ ಕೂಗುವ ಮೊದಲೇ ಎದ್ದು ಹಾಡು ಹೇಳಿಕೊಂಡು ರಾಗಿ ಬೀಸುವುದು ಹಿಂದಿನ ಕಾಲದಲ್ಲಿ ಹಳ್ಳಿಯ ಹೆಂಗಸರ ದಿನದ ಕಾಯಕದ ಪ್ರಮುಖ ಅಂಗವಾಗಿತ್ತು. ಹಿಟ್ಟೊಂದೇ ಅಲ್ಲದೆ, ಅರಿಶಿಣ, ಮೆಣಸಿನ ಪುಡಿ, ಸೀಗೆಪುಡಿ, ಅರಳು ಹಿಟ್ಟು, ಅವಲಕ್ಕಿ ಮಾಡಿಕೊಳ್ಳುತ್ತಿದ್ದು ಹೂ, ತುಳಸಿ ಕೊಯ್ಯುಲು ಹೋದಾಗ, ಕಾಯಿ ಪಲ್ಯ ತರುವಾಗ ಹಾಡಿಕೊಳ್ಳುತ್ತಿದ್ದುಂಟು. ಈ ಹಿನ್ನೆಲೆಯಲ್ಲಿ ಬೀಸುವ ಕಲ್ಲೇ ಹಳ್ಳಿಯ ಹೆಣ್ಣಿನ ಆಪ್ತಸಂಗಾತಿ. ಬೀಸುವ ಕಲ್ಲಿನ ಮುಂದೆ ಕುಳಿತು ಅವಳು ತನ್ನೆಲ್ಲ ಸುಖ-ದುಃಖಗಳನ್ನೂ ತೋಡಿಕೊಂಡಿದ್ದಾಳೆ. ಬೀಸುವ ಪದಗಳಲ್ಲಿ ಹೆಣ್ಣಿನ ಬಾಳಿನ ನೋವು ನಲಿವು, ಹಿರಿಮೆ ಗರಿಮೆಗಳು ಚಿತ್ರಣಗೊಂಡಿವೆ. ತಾಯಾಗಿ, ಸೋದರಿಯಾಗಿ, ಪತ್ನಿಯಾಗಿ ಹೆಣ್ಣು ಹಲವು ಕಷ್ಟಕಾರ್ಪಣ್ಯಗಳನ್ನು ನುಂಗಿಕೊಂಡು ತನ್ನ ಅನುಪಮ ತ್ಯಾಗ ಜೀವನದಿಂದ ಲೋಕವನ್ನು ಕಾಪಾಡಿಕೊಂಡು ಬಂದಿರುವಳೆಂಬುದು ಜನಪದ ಸಾಹಿತ್ಯದಲ್ಲಿ ಉತ್ಕೃಷ್ಟ ರೀತಿಯಲ್ಲಿ ವರ್ಣಿತವಾಗುತ್ತದೆ.[೫]

ಹಳ್ಳಿಯಲ್ಲಿ ಬೇಸಿಗೆ-ಬೆಳದಿಂಗಳ ಕಾಲದ ವಿರಾಮದ ಉಳಿದ ಸಮಯಗಳಲ್ಲಿ ಮನೆಗಳ ಹಜಾರದಲ್ಲಿ ನಾಲ್ಕಾರು ಜನ ಜೊತೆ ಜೊತೆಯಾಗಿ ಬೀಸುವ ಕಲ್ಲುಗಳನ್ನು ಗೆರಸಿಗಳಲ್ಲಿ ಹೂಡಿಕೊಂಡು ರಾಗಿಯನ್ನು, ಜೋಳವನ್ನು ಬೀಸುವುದು ಹಿಂದಿನ ವಾಡಿಕೆ. ಬೀಸುವಾಗ ಬೀಸುವ ಕಲ್ಲಿನ ಶಬ್ದವೇ ಶೃತಿ; ಕೈತುಂಬ ತೊಟ್ಟ ಕರಿಯ ಬಳೆಗಳ ಸದ್ದೇ ತಾಳ, ಮುಮ್ಮೇಳವಾಗಿ ಹಿಮ್ಮೇಳಗಳಿಂದ ಹಾಡಿಗೆ ಒಂದು ಅವರ್ಣನಿಯ ಸೌಂದರ್ಯದ ಆವರಣವುಂಟಾಗಿ ಆ ಹಾಡುಗಳ ಧ್ವನಿಮಾಧುರ್ಯ ಹಳ್ಳಿಯನ್ನು ಆವರಿಸಿ ಕೇಳಿದವರ ಚಿತ್ತದಲ್ಲಿ ಬೇರೊಂದು ಕನಸಿನ ಲೋಕವನ್ನೇ ಸೃಷ್ಟಿಸುತ್ತಿತ್ತು.

ತಾಯಿ-ತಂದೆಯರ ಮಮತೆ, ಅಕ್ಕ-ತಂಗಿ, ಅಣ್ಣ-ತಮ್ಮಂದಿರ ಮೇಲಿನ ವಿಶ್ವಾಸ, ಗಂಡ-ಹೆಂಡಿರ ಒಲವು, ಮಕ್ಕಳ ಮೇಲಿನ ವಾತ್ಸಲ್ಯ ಮೊದಲಾದ ಹೆಣ್ಣಿನ ಬದುಕಿಗೆ ಸಂಬಂಧಿಸಿದ ಸಮಸ್ತ ವಿಷಯಗಳೂ ಮಹಿಳೆಯರೇ ಕಟ್ಟಿರುವ ಈ ಹಾಡುಗಳಲ್ಲಿ ವರ್ಣಿತವಾಗಿದೆ. ದೈವದ ಕರುಣೆಯಲ್ಲಿ ಅಚಲ ನಂಬುಗೆಯಿಟ್ಟು, ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಿ ಹಿರಿದಾದ ಧ್ಯೇಯದಿಂದ ಉತ್ತಮ ಬಾಳ ನಡೆಸಿದ ಗ್ರಾಮೀಣ ಮಹಿಳೆಯರ ಸತ್ವ ಹಾಗೂ ಸಾತ್ವಿಕತೆ ಈ ಹಾಡುಗಳಲ್ಲಿ ತುಂಬಿಬಂದಿದೆ. ಕುಟ್ಟುವ, ಬೀಸುವ ಹಾಡುಗಳು ಶ್ರಮ ಸಂಸ್ಕೃತಿಯ ಪ್ರತೀಕಗಳಾಗಿವೆ. ಹೆಣ್ಣುಮಕ್ಕಳು ಕುಟ್ಟುವಾಗ, ಬೀಸುವಾಗ, ತೊಟ್ಟಿಲು ತೂಗುವಾಗ ಹಾಡುವ ಹಾಡುಗಳು ಜನಪದರ ವಿಶಿಷ್ಟ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತವೆ. 'ಪಟ್ಟ ಪಾಡೆಲ್ಲವೂ ಹುಟ್ಟು ಹಾಡಾಗಿ, ಜಾನಪದ ತನಿ ಕೆನೆಯಾಗಿ' ಕಂಗೊಳಿಸುತ್ತವೆ. ಇಬ್ಬರು ನಾರಿಯರು ಕುಟ್ಟುವಾಗ ಒನಕೆಯ ಗತ್ತಿಗೆ ತಕ್ಕಂತೆ ಉಸಿರು ಬಿಡುವ ಎಳೆಯುವ ಹಾಡನ್ನು ಅಳವಡಿಸಿಕೊಳ್ಳುತ್ತಾರೆ. ನಗರೀಕರಣದ ಕರಿನೆರಳು ಬೀಳುವುದಕ್ಕಿಂತ ಮುಂಚೆ ಈ ಬಗೆಯ ಕೆಲಸ ಕಾರ್ಯಗಳು ಹಳ್ಳಿಯ ಹೆಣ್ಣುಮಕ್ಕಳ ಸೇರುವಿಕೆ ಹಾಗೂ ಹಾಡುವಿಕೆಗೆ ಸಂದರ್ಭವನ್ನು ಒದಗಿಸುತ್ತಿದ್ದವು ಎಂಬುದು ಮಹತ್ವದ್ದಾಗಿದೆ.

ಕುಟ್ಟುವ ಬೀಸುವ ಹಾಡು ಯಾವಾಕಿ ಕಲಿಸ್ಯಾಳ ।
ಕೃಷ್ಣನ ತಂಗಿ ಸುಭದ್ರಿ । ಕಲಿಸ್ಯಾಳ
ಕೃಷ್ಣನ ಮ್ಯಾಲ ಪದಗೋಳ॥[೬]

ಎಂಬ ಗರತಿಯ ಹಾಡು ಕುಟ್ಟುವ, ಬೀಸುವ ಪದಗಳ ಪ್ರಾಚೀನತೆಗೆ ಸುಳಿವು ನೀಡುತ್ತದೆ. ಈ ಪದಗಳ ಅವಿರ್ಭಾವ ಮಹಾಭಾರತದ ಕಾಲದಿಂದಲೂ ಇದೆ ಎಂಬುದು ಸ್ಪಷ್ಟವಾಗುತ್ತದೆ. ದಶಾವತಾರಗಳಲ್ಲಿ ಕೃಷ್ಣನೂ ಒಬ್ಬ ಅವತಾರಿ ಪುರುಷನಾಗಿದ್ದಾನೆ. ದುಷ್ಟರ ಸಂಹಾರಕ್ಕೆ, ಶಿಷ್ಟರ ರಕ್ಷಣೆಗೆ ಹೆಸರಾಗಿದ್ದಾನೆ. ಕೃಷ್ಣನ ರಸಿಕತೆಯನ್ನು ಸಮಾಜ ಗಮನಿಸಿದಂತೆ ಆತನ ರಾಜಕೀಯವನ್ನು ಬುದ್ಧಿಜೀವಿಗಳು ಗಮನಿಸಿದ್ದಾರೆ. ಜನಪದರು ಒತ್ತಿಒತ್ತಿ ಹೇಳುವ 'ಕೃಷ್ಣ'ನೆಂಬ ಪದಭಕ್ತಿ ಪ್ರೇರಣಾದಾಯಕವೂ ಹೌದು, ಮುಕ್ತಿಗೆ ಸಾಧನವೂ ಹೌದು. ಆದ್ದರಿಂದ ಚರಿತ್ರೆಯ ಜೊತೆಗೆ ಸಮಕಾಲೀನ ತುಡಿತಗಳು ಗ್ರಾಮೀಣ ಜನತೆಯ ಹಾಡುಗಳಲ್ಲಿ ಕಾಣಿಸಿಕೊಳ್ಳುತ್ತವೆಂಬುದಕ್ಕೆ ಇಂಥ ಪದಗಳು ಸಾಕ್ಷಿಯಾಗುತ್ತವೆ.

ಎಲ್ಲೆಲ್ಲಿ ನೋಡಿದರ ತೆಳ್ಳಾನ ಕಲ್ಲಿಲ್ಲ ।
ಜಳ್ಳಾನೆ ಹರಿವ ಜಲವಿಲ್ಲ । ಲಿಂಗಯ್ಯನ
ವಸ್ತ್ರ ನಾನೆಲ್ಲಿ ಒಗೆಯಲಿ ॥[೭]

ಎಂಬ ತ್ರಿಪದಿಯಲ್ಲಿ ಕೆಲಸ ಮಾಡುವುದು ಶ್ರದ್ಧೆಯ ಪ್ರತೀಕವಾಗಿ ಬರುತ್ತದೆ. ಹೇಗೋ ಒಗೆದು ಹೇಗೋ ಹೋಗುವುದು ಗ್ರಾಮೀಣ ಗರತಿಯ ಜಾಯಮಾನವಲ್ಲ. ತಿಳಿನೀರಲ್ಲಿ ತೆಳ್ಳನೆಯ ಕಲ್ಲಿನಲ್ಲಿ ಲಿಂಗಯ್ಯನ ವಸ್ತ್ರ ಒಗೆಯುವ ಕಾಯಕನಿಷ್ಠೆ ಅವಳದ್ದಾಗಿದೆ. ಶ್ರಮ ಸಂಸ್ಕೃತಿಯ ಭಾಗವಾಗಿ ಅವರು ಮಾಡುವ ಪ್ರತಿ ಕಾಯಕದಲ್ಲೂ ಅವರು ದೇವರನ್ನು ಕಾಣುತ್ತಾರೆ. 'ನೀರು, ನೆಲ, ನೇಸರ, ಮಳೆ-ಗಾಳಿಗಳ ಜೊತೆಗೆ ದನ, ಕರು, ಮರ, ಬೀಸುವ ಕಲ್ಲು, ಒಳ್ಳು, ಒನಿಕೆ, ಕಸಬರಿಗೆ ಸಹಿತ' ದೇವರಾಗಿಯೇ ಕಾಣಿಸಿಕೊಳ್ಳುತ್ತವೆ. ಹೀಗಾಗಿ ಹರಿವ ಜಲದಲ್ಲಿ ಒಗೆಯುವ ಸಾಮಾನ್ಯ ವಸ್ತ್ರವೂ ಅವಳಿಗೆ ಲಿಂಗಯ್ಯನ ವಸ್ತ್ರವಾಗಿ ಕಾಣಿಸಿಕೊಂಡಿದೆ. ಜನಸಮುದಾಯ ಒಂದೆಡೆ ಸೇರಿದಲ್ಲಿ ಅವರಿಗೆ ಪ್ರಧಾನವಾಗಿ ಕಾಡುವುದು ತಮ್ಮ ಸ್ಥಿತಿಗಿಂತ ಸಮುದಾಯದ ಅಸ್ಮಿತೆ, ಸಮುದಾಯ ಸರಿದಾರಿಯಲ್ಲಿದ್ದರೆ, ಕುಟುಂಬವೂ ಸರಿಯಾದ ದಾರಿಲ್ಲಿದ್ದ ಹಾಗೆಂದೇ ಅವರ ಪರಿಕಲ್ಪನೆ. ಇದಕ್ಕಾಗಿ ಅವಳು ತನಗರ್ಥವಾಗುವ ವಿಷಯ ಹಾಗೂ ಕುಟುಂಬದ ಜನರ ಬಗ್ಗೆ ಮಾತನಾಡುವುದೇ ಗಮನಾರ್ಹ ಸಂಗತಿಯಾಗುತ್ತದೆ.

ಕಲ್ಲೀಗಿ ಮುಕ್ಹಾಕಿ ಎಲ್ಲಾ ದೇವರ ನೆನೆದೆ
ಅಕ್ಕಮಹಾದೇವಿ ಅರಸರ ಮಲ್ಲಯ್ಯನ
ಮುಕ್ಹಾಳು ಮೊದಲೆ ನೆನದೇನ

(ಶಂಕ್ರಮ್ಮ ಸೌಲಳ್ಳಿ, ಕುಕನೂರು)

ಎಂಬ ಹಾಡಿನಲ್ಲಿ ಜನಪದರು ಹೆಜ್ಜೆ ಹೆಜ್ಜೆಗೂ ದೇವರನ್ನು ನೆನೆಯುವ ರೀತಿ ಸ್ಪಷ್ಟವಾಗುತ್ತದೆ. ಬೀಸುವ ಕಲ್ಲಿನ ಹಾಡುಗಳ ವೈಶಿಷ್ಟ್ಯವೆಂದರೆ ನಿರಂತರವಾಗಿ ಪದಗಳನ್ನು ಕಟ್ಟುತ್ತ ಹೋಗುವುದು. ಕೆಲಸ ಮುಂದುವರೆಯಬೇಕಾದರೆ ಹಾಡುಗಳು ಬೇಕು. ಅವು ಮನೋರಂಜನೆಗೂ, ದೈವಭಕ್ತಿಗೂ ದಾರಿಯನ್ನು ತೋರುವಂತಿರಬೇಕು. ಹೀಗಾಗಿ ಮೌನವಾಗಿ ಬೀಸಿ ಬೇಸರ ಪಟ್ಟುಕೊಳ್ಳುವುದಕ್ಕಿಂತ ಹಮ್ಮು-ಬಿಮ್ಮು ಬಿಟ್ಟು, ಭಕ್ತಿಯಿಂದ, ಪ್ರೀತಿ ಹಾಗೂ ವಿಶ್ವಾಸದಿಂದ ತಮ್ಮ ಸುತ್ತಲಿನ ವಿಷಯಗಳ ಕುರಿತು ಹಾಡಿಕೊಂಡು ಕೆಲಸ ಮಾಡುವುದನ್ನೇ ಅವರು ಇಷ್ಟಪಡುತ್ತಾರೆ.

ಸುಮ್ಮನೆ ಬೀಸಿದರ ಬೀಳದ ಈ ಕಲ್ಲ
ನಾಗ ಸೊರದಂತೆ ದನಿಯೆತ್ತಿ ಹಾಡಿದರ
ಬೀಳುವದು ಈ ಕಲ್ಲು

ಎಂಬ ಹಾಡಿನ ಹಿಂದೆ ನಮ್ಮ ಮನಸ್ಸಿನ ಸೂಕ್ಷ್ಮ ವ್ಯಾಪಾರಗಳೆಲ್ಲವೂ ಬಯಲಿಗೆ ಬರುತ್ತದೆ. ಹಾಡಿನಿಂದಾಗಿಯೇ ಕೆಲಸ-ಕಾರ್ಯಗಳಿಗೆ ಪ್ರೇರಣೆ ಒದಗುತ್ತದೆಂಬುದು ಸತ್ಯಸಂಗತಿಯಾಗಿದೆ. ಹಾಡು ನಮ್ಮ ದುಡಿಮೆಯ ನೋವನ್ನು ಮರೆಸಬಲ್ಲ ಸಂಜೀವಿನಿಯಾಗಿದೆ.

ಪದ ಬಂದರ್ಹೇಳು ಬಾರದಿದ್ದರೆ ಶರಣಾಗು
ಪದವುಂಟು ನನ್ನ ಎದೆಯಲ್ಲಿ ತಾಮ್ರದ
ತಾಯ್ತುಂಟು ನನ್ನ ತೋಳಲ್ಲಿ

(ಸುಟ್ಟವ್ವ ಹರಿಜನ, ಮಸಬಹಂಚಿನಾಳ, ಯಲಬುರ್ಗಾ)

ಎಂದು ಅವರು ಹಾಡು ಬರದಿದ್ದವರಿಗೆ ಸವಾಲನ್ನು ಕೂಡ ಹಾಕಬಲ್ಲವರಾಗಿದ್ದಾರೆ. ಇದರಿಂದ ಸ್ಪರ್ಧೆ ತಾನೇ ತಾನಾಗಿ ಕಾಣಿಸಿಕೊಳ್ಳುತ್ತದೆ. ಕಲ್ಪನೆಗಿಂತ ಕಂಡುಂಡ ಬದುಕಿನ ನೈಜಾನುಭವಗಳಿಗೆ ತಾನೇ ತಾನಾಗಿ ಮೂರ್ತರೂಪ ಬರುತ್ತದೆ. ಪದವುಂಟು ನನ್ನ ಎದೆಯಲ್ಲಿ ಎನ್ನುವುದು ಅಭಿಮಾನದ ಮಾತಾದರೆ, ತಾಮ್ರದ ತಾಯ್ತುಂಟು ನನ್ನ ತೋಳಲ್ಲಿ ಎನ್ನುವುದು ದೈವಿಶಕ್ತಿಯ ಸಂಕೇತವಾಗಿದೆ. ಈ ರೀತಿ ಅಪಾರ ಅನುಭವ ಹಾಗೂ ದೈವಿಶ್ರದ್ಧೆಯ ಫಲಸ್ವರೂಪವಾಗಿ ಜನಪದರು ಪದ ಕಟ್ಟಿ ಹಾಡುತ್ತಾರೆ. ಉದಾಹರಣೆಗೆ:

ಅಂದೊಳ್ಳ ಅಡಿಗಳ್ಳೊ ಚಂದುಳ್ಳಿ ಮೇಲುಗ್ಲು
ಚಂದ್ರಮತಿಯಯೆಂಬ ಹಿಡಿಗೂಟ ಹಿಡಿಕೊಡ
ತಂದೆ-ತಾಯಿಗಳ ನೆನದೇನ

ಬೀಸುವ ಪದ ಚಂದ ಕೋಣನ ಧನಿ ಚಂದ
ನವಿಲಾಡುವ ನಮ್ಮ ವನ ಚಂದ । ಚನ್ನಿಗರ
ತವರಿನ ಗಂರ್ಧವ ಚಂದ

ಬೀಸ್ಯಾಕ ಕುಂತರ ಬ್ಯಾಸರಕಿ ನನ್ನಗಿಲ್ಲ
ಸೂಸಿಹರಿದಾವ ನಮ ಪದ । ಆ
ಕೂಸಿಗೆ ಬಂತ ಸವಿನಿದ್ದಿ

ಆವಾವ ನಮಜೋಳ ಉಳಿದಾವ ನಮ್ಮ ಹಾಡು
ಈಗ ಸಾಕವ್ವ ನೀನಕಲ್ಲ । ಕೈಯಾನ
ಹಾಕಿದುಂಗರ ಸವೆದಾವ

ಕಲ್ಲು ಕೊಟ್ಟಮ ಎಲ್ಲಾ ಭಾಗ್ಯವ ಬರಲಿ
ಮಲ್ಲಿಗೆ ಏರು ಪಲ್ಲಕಿಮ್ಯಾಲೆ ಮಗ ಬರಲಿ । ಆ ಮನಿಗೆ
ಮಲ್ಲಿಗೆ ಮುಡಿವ ಸೊಸೆ ಬರಲಿ

**ಮುಂಜಾನೆ ಏಳುವ ಸಂದರ್ಭದಲ್ಲಿ ಹಾಡುವಂಥ ಹಾಡು**

ಬೆಳಗಾಗಿ ನಾ ಎದ್ದು
ಯಾರ ಯಾರ ನೆನೆಯಲಿ
ಎಳ್ಳು ಜೀರಿಗಿ ಬೆಳೆಯುವಳೆ
ಭೂಮಿ ತಾಯಿ ಎದ್ದೊದು ಗಳಿಗೆ ನೆನೆವೊದೇನೆ

ಏಳು ಕೊಟ್ಟುವಳಿಗೆ ಎಲ್ಲಾ ಭಾಗ್ಯವ ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ
ಮಲ್ಲಿಗೆ ಮುಡಿಯ ಸೊಸೆ ಬರಲಿ

ಕಲ್ಲಮ್ಮ ಮಹಾತಾಯಿ
ಮಲ್ಲಮ್ಮ ರಾಗಿಯ
ಜಲಜಲನೇ ಉದುರಮ್ಮ ನಾ ನೀನಿಗೆ
ತುಪ್ಪದರಾತಿ ಬೆಳಸೋದೆನು

ಬೆಳಗಾಗಿ ನಾ ಎದ್ದು ಯಾರ ಯಾರ ನೆನಯಲಿ
ಕಲ್ಲು-ಕಾವೇರಿ ಕಂಪನಿಯ ನನದರ
ಹೊತ್ತಿದ ಪಾಪ ಪರಿಹಾರ

ತಿಳಿಗೇಡಿ ಎನತಮ್ಮ ತಾಯವ್ವ ಭಯಬ್ಯಾಡ
ಬಹಳ ದಿನದಾಕಿ ಹಡದಾಕಿ ಭಯರಾರ
ಬಿಟ್ಟೆತೆ ನಿನಗ ವನವಾಸ

ತಂದಯ ನನದರ ತಂಗಳ ಬಿಸಿಯೊ
ಗಂಗದೇವಿ ನಿನ್ನ ಹಡದೇವ ನೆನದರ
ಹೊತ್ತಿದ ಪಾಪ ಪರಿಹಾರ[೧೦]

ಜನಪದರು ಬೆಳಗಿನ ಜಾವದಿಂದ ರಾತ್ರಿ ಮಲಗುವವರೆಗೂ ತಮ್ಮ ಅನುಭವಾಮೃತಗಳನ್ನು ನುಡಿದವರು. ಓರ್ವ ಜಾನಪದ ಮಹಿಳೆ ಅನ್ನ ಆಶ್ರಯ ಕೊಟ್ಟಂತಹ ಭೂಮಿ ತಾಯಿಯನ್ನು ಸ್ಮರಿಸಿಕೊಳ್ಳುವುದನ್ನು ಈ ಗೀತೆಯಲ್ಲಿ ಕಾಣಬಹುದು. ಹಳ್ಳಿಗರ ಸಂಸ್ಕೃತಿ ವಿಶೇಷವಾಗಿ ಹೆಣ್ಣುಮಕ್ಕಳ ನಂಬಿಕೆ, ಆಚರಣೆಗಳು ಬೀಸುವ ಮತ್ತು ಕುಟ್ಟುವ ಹಾಡುಗಳೇ ದೊರೆಯುತ್ತದೆ.

### ೫.೨. ಜೋಗುಳ ಹಾಡುಗಳು

**ಹಿನ್ನೆಲೆ:** ಜಗತ್ತಿನಾದ್ಯಂತವಾಗಿ ಎಲ್ಲ ಜನಾಂಗಗಳಲ್ಲೂ, ಸಮುದಾಯಗಳಲ್ಲೂ ಕೂಸುಗಳನ್ನು ರಮಿಸಿ ಮಲಗಿಸುವ ಸಲುವಾಗಿ ತಾಯಂದಿರಾಗಲಿ, ಕೂಸಿಗೆ ಸಂಬಂಧಿಸಿದ ಇತರ ಹೆಣ್ಣುಮಕ್ಕಳಾಗಲಿ ಅವರವರ ಭಾಷೆಗಳಲ್ಲಿ ಹಾಡುವ ಪರಿಪಾಠವಿದೆ. ಕನ್ನಡದಲ್ಲೂ ಮಕ್ಕಳನ್ನು ತೊಟ್ಟಿಲಲ್ಲಾಗಲಿ, ತೊಡೆಯ ಮೇಲಾಗಲಿ, ಎದೆಗವಚಿಕೊಂಡಾಗಲಿ ಆಡಿಸುತ್ತ ಹಾಡುವ ಹಾಡುಗಳಿಗೆ 'ತೊಟ್ಟಿಲ ಹಾಡು', 'ಲಾಲಿಹಾಡು', ಜೋಗುಳ ಪದ'ಗಳೆಂದು ಕರೆಯುತ್ತಾರೆ. ಡಾ. ಎಂ.ಎಂ. ಕಲಬುರ್ಗಿಯವರ ಅಭಿಪ್ರಾಯದಂತೆ ಇದರ ರೂಪ ಜೋ+ಕುಳ್. ಇದಕ್ಕೆ ಮಕ್ಕಳು ಎಂದು ಅರ್ಥ. ಮಕ್ಕಳ ಹಾಡು ಎಂಬರ್ಥದಲ್ಲಿ ಇರಬಹುದಾದ ಜೋ+ಕುಳ್+ಹಾಡು= ಜೋಗುಳ ಹಾಡು ಎಂಬುದು ಕಾಲಕ್ರಮದಲ್ಲಿ ಜೋಗುಳ ಎಂಬ ಸಂಕ್ಷಿಪ್ತ ರೂಪದಲ್ಲಿ ನಿಂತುಕೊಂಡಿತು. ದೇವೇಂದ್ರಕುಮಾರ ಹಕಾರಿಯವರ ಪ್ರಕಾರ ತೊಟ್ಟಿಲು ತೂಗುವಾಗ ಕ್ರಿಯೆಯನ್ನು ಅನುಸರಿಸಿ ಜಂತಿಗೆ ಅಥವಾ ನಾಗಂದಿಗೆ ಕಟ್ಟಿದ ಹಗ್ಗ ಜಿಂಯ್ ಜಿಂಯ್ ಸೊಲ್ಲು ಕೂಡುತ್ತದೆ. ಆಗ ಇದರಲ್ಲಿಯೇ ಲಯ ರೂಪುಗೊಳ್ಳುತ್ತದೆ. ಕ್ರಿಯೆ-ಲಯಗಳು ಬೆರೆತಾಗ ಜಿಂಯ್ ಜಿಂಯ್ ಲಯ ಜೋಜೋ ನಾದವಾಗುತ್ತದೆ. ಅಂದರೆ ಈ ಜೋಗುಳ ಪದಗಳು ಕ್ರಿಯೆ, ಲಯ, ನಾದ ಲೇಪಿತ ಶಾಬ್ದಿಕ ರೂಪದ ಹಾಡುಗಳು ಎಂಬುದೊಂದು ಅಭಿಪ್ರಾಯ. ಒಟ್ಟಿನಲ್ಲಿ ತಾಯಿಯಾದವಳು ತನ್ನ ಮಗುವಿನೊಂದಿಗೆ ಆನಂದಿಸು ವಳೆಂಬುದು ಸ್ಪಷ್ಟವಾಗಿದೆ. ಮಗುವನ್ನು ತೋಳುಗಳಲ್ಲಿ ಅಥವಾ ಹಾಸಿಗೆ ಇಲ್ಲವೆ ತೊಟ್ಟಿಲಲ್ಲಿ ಸಾವಕಾಶವಾಗಿ ತೂಗುತ್ತ ಹೇಳುವ ಈ ಪ್ರಕಾರ ಹಾಡು ಯಾವುದೇ ಧಾಟಿ ಅಥವಾ ಭಾಷೆಯಲ್ಲಿದ್ದರೂ ಆ ಜೋಗುಳಗಳೆಲ್ಲೆಲ್ಲಾ ತಾಯಿ ಇದ್ದಾಳೆ. ನೀನು ಮಲಗು ಎಲ್ಲವೂ ಸರಿಯಾಗಿದೆ. ನೀನು ಸುರಕ್ಷಿತವಾಗಿದ್ದೀಯ ಎಂಬ ಮಾತುಗಳು ಇರುತ್ತವೆ.[೧೧] ಹಡೆದ ಕೂಸಿನ ಮೇಲಿನ ಮಮತೆಯಿಂದ

ಹೆತ್ತವಳ ಹೃದಯದಾಳದಿಂದ ಹೊರಹೊಮ್ಮಿದ ಈ ಜೋಗುಳ ಪದಗಳು ಉತ್ಸಾಹದ ಚಿಲುಮೆಗಳಾಗಿದ್ದು ಮಕ್ಕಳ ಬಾಲ್ಯಾವಸ್ಥೆಯ ಬೆಳವಣಿಗೆ ಸಂಬಂಧಿಸಿವೆ.

ಲೋಕದಲ್ಲಿ ಮಾನವರಾಗಿ ಹುಟ್ಟಿದ ಎಲ್ಲರಿಗೂ ಹೆಸರುಗಳನ್ನಿಟ್ಟಿರುತ್ತಾರೆ. ಆ ಹೆಸರಿನಿಂದಲೇ ಅವರನ್ನು ಗುರುತಿಸುತ್ತೇವೆ. ಹುಟ್ಟಿದ ನಂತರ ಕೂಸಿದ್ದಾಗಲೇ ಮೊದಲ ಕಾರ್ಯವೆಂದರೆ ನಾಮಕರಣ ಮಾಡುವುದು. ಕೆಲವೆಡೆ ಧಾರ್ಮಿಕ-ಸಾಂಪ್ರದಾಯಿಕ ವಿಧಿ-ವಿಧಾನಗಳು ಭಿನ್ನವಾಗಿದ್ದರೂ ನಾಮಕರಣ ಕಾರ್ಯ ಮಾತ್ರ ಇದ್ದೇ ಇರುತ್ತದೆ. ನಮ್ಮಲ್ಲಿ ಕೂಸು ಹುಟ್ಟಿದ ಹನ್ನೆರಡು ಅಥವಾ ಹದಿಮೂರು ದಿನಗಳಲ್ಲಿ ಕೆಲವೆಡೆ ಇನ್ನೂ ಹೆಚ್ಚಿನ ದಿನಗಳಲ್ಲಿ ಕೂಸಿಗೆ ಹೆಸರಿಡುವ ಕಾರ್ಯ ನಡೆಸುವರು. ಮನೆಯ ಗುರುಗಳನ್ನೋ, ಊರಿನ ಅಯ್ಯನವರನ್ನೋ ಕಂಡು ಪಂಚಾಂಗ ಕೇಳಿ ಹುಟ್ಟಿದ ನಕ್ಷತ್ರ ರಾಶಿಗಳನ್ನಾಧರಿಸಿ ಅವರು ಹೇಳುವ ಹೆಸರನ್ನು ಹಾಗೂ ತಾವು ಇಡಬೇಕಾದ ಹೆಸರನ್ನು ಜೊತೆಗೆ ಮತ್ತೆ ನಾಲ್ಕಾರು ಹೆಸರುಗಳನ್ನು ನಾಮಕರಣ ಸಂದರ್ಭದಲ್ಲಿ ಕರೆಯುತ್ತಾರೆ. ಮನೆಯವರು ನಿರ್ಧರಿಸಿ ಇಟ್ಟ ಹೆಸರೊಂದು ಗಟ್ಟಿಯಾಗಿ ದಾಖಲೆಯಲ್ಲುಳಿದರೆ ಪ್ರೀತಿಯಿಂದ ಕರೆಯುವ ಹೆಸರು ಇನ್ನೊಂದಾಗಿರುತ್ತದೆ. ಹುಟ್ಟಿದ ಕೂಸಿನ ಹೆಸರಿಡುವ ಸಂದರ್ಭದಲ್ಲಿ ಊರಗೌಡ-ರಾಯ-ಹಿರಿಯರ ಸಲಹೆ ಕೇಳುವ ಹಾಡೊಂದಿದೆ.

ಪಟ್ಟಸಾಲ್ಯಾಗ ಕುಂತಿರುವ ಕೊತ್ತಲರಾಯ
ಪುತ್ರನ ಹೆಸರೊಂದು ಏನಿಡಬೇಕು ಜೋ ಜೋ
ಮರತೇಕ ಸಾವುಂಟು ಮರತೇಕ ಕೇಡುಂಟು
ಕಾಳಿಂಗನೆಂದು ಕರಿ ಹೋಗಿರವ್ವಾ, ಜೋ ಜೋ

(ದುರಗಮ್ಮ ಹರಿಜನ, ವಿದ್ಯಾನಗರ, ಗಂಗಾವತಿ)

ಹೀಗೆ ಕೇಳಿದ ಮೇಲೆ ಅವರ ಅಭಿಪ್ರಾಯ ಪಡೆದು ಹೆಸರಿಡುವ ಕಾರ್ಯ ಪ್ರಾರಂಭಿಸುತ್ತಾರೆ. ತೊಟ್ಟಿಲನ್ನು ವಿವಿಧ ಗೊಂಬೆ, ಕಸೂತಿ ಹಾಕಿದ ಅರಿವೆಗಳಿಂದ ಅಲಂಕಾರಗೊಳಿಸುವರು. ಸಿಹಿ ಅಡುಗೆ ಮಾಡುವರು. ಮನೆಯನ್ನು ಸ್ವಚ್ಛಗೊಳಿಸಿ ಸ್ನಾನಾದಿಗಳನ್ನು ಪೂರೈಸಿಕೊಂಡು ಮನೆ ಸ್ವಾಮಿಯನ್ನು ಕರೆದುಕೊಂಡು ಬರುತ್ತಾರೆ. ಓಣಿಯ ಮುತ್ತೈದೆಯರನ್ನು ಜೊತೆಗೆ ಕೂಸಿನ ಸೋದರತ್ತೆಯನ್ನು ಕರೆಸಿಕೊಂಡಿರುತ್ತಾರೆ. ಸ್ವಾಮಿಯ ಊಟ ಉಪಚಾರಗೊಂದಿಗೆ ತೊಟ್ಟಿಲ ಪೂಜೆಯೂ ನಡೆಯುತ್ತದೆ. ಧಾರ್ಮಿಕ ವಿಧಿ-ವಿಧಾನ ಮುಗಿಸಿ ಕೂಸಿಗೆ ನಾಮಕರಣ ಮಾಡುವರು.

ಬಿಡಿ ಮುಕ್ತಕಗಳನ್ನು, ದೀರ್ಘ ಹಾಡುಗಳನ್ನು ಜೋಗುಳ ಪದಗಳಲ್ಲಿ ಕಾಣುವೆವು. ದ್ವಿಪದಿ, ತ್ರಿಪತಿ, ಚೌಪದಿಗಳೂ ಜೋಗುಳದಲ್ಲಿವೆ. ನಮ್ಮ ಶಿಷ್ಟ ಸಾಹಿತ್ಯದಲ್ಲಿ ಜೋಗುಳ ಪದಗಳಿವೆ. ಪುರಂದರದಾಸರಾದಿಯಾಗಿ ಅನೇಕ ದಾಸರು ಜೋಗುಳ ರೂಪದ ಕೀರ್ತನೆಗಳನ್ನು ರಚಿಸಿದ್ದಾರೆ. ತನ್ನ ಪಾತಿವ್ರತ್ಯವನ್ನು ಪರೀಕ್ಷಿಸಲು ಬಂದ ತ್ರಿಮೂರ್ತಿಗಳನ್ನು ಮಹಾಸತಿ ಅನಸೂಯ ಅವರನ್ನು ಕೂಸುಗಳನ್ನಾಗಿ ಮಾಡಿ ತೊಟ್ಟಿಲಲ್ಲಿ ಹಾಕಿ ಜೋಗುಳ ಹಾಡಿದ ಪುರಾಣ ಪ್ರಸಂಗವೂ ನಮ್ಮಲ್ಲಿದೆ. ಜೋಗುಳದಲ್ಲಿರುವ ಗೇಯತೆಯಿಂದಲೇ ಅದೊಂದು ವಿಶಿಷ್ಟ ಪ್ರಕಾರವಾಗಿದೆ. ಅದರ ಹಾಡುಗಾರಿಕೆಯಿಂದ ಇಡೀ ವಾತಾವರಣ ಪ್ರಸನ್ನವಾಗುವ ಪರಿಣಾಮಕಾರಿ ಶಕ್ತಿ ಕೈಬಿಡುವಂತಿಲ್ಲ. ಗೇಯ

ನಾದದ ಗುಂಗಿನಲ್ಲಿ ಜೋಂಪು ಬರುವ ಶಕ್ತಿ ಇದರಲ್ಲಿದ್ದಂತೆ ಸಾಹಿತ್ಯದ ಸೌಕುಮಾರತೆಯೂ ಇದರಲ್ಲಡಗಿದೆ. ಆ ಬಗೆಗೆ ನಾವು ಗಮನಹರಿಸಬೇಕಾಗಿದೆ. ಮೊದಲಿಗೆ ಈ ಜೋಗುಳ ಪದಗಳನ್ನೆಲ್ಲಾ ಹೆಕ್ಕಿ ಸಂಗ್ರಹಿಸಬೇಕಾಗಿದೆ.[೧೨]

ಜೋಗುಳ ಹಾಡುಗಳಲ್ಲಿ ಎರಡು ಪ್ರಕಾರಗಳಿವೆ. ನಾಮಕರಣ ಸಂದರ್ಭದಲ್ಲಿ ಹಿಮ್ಮೇಳ-ಮುಮ್ಮೇಳ ಸಹಿತವಾದ ಹಾಡುಗಳು. ಇವುಗಳನ್ನು 'ಲೋಕಾಂತ ಜೋಗುಳ'ಗಳೆಂದು ಕರೆಯಬಹುದು. ಇನ್ನುಳಿದ ಪ್ರಸಂಗಗಳಲ್ಲಿ ಕೂಸಿನೊಂದಿಗೆ ಅದರ ತಾಯಿಯಾಗಲಿ ಅಥವಾ ಸಂಬಂಧಿಕರಾಗಲಿ ಒಬ್ಬಂಟಿಗರಾಗಿ ಹಾಡುವುದು ಎರಡನೆಯದಾಗಿದೆ. ಇವುಗಳನ್ನು 'ಏಕಾಂತ ಜೋಗುಳ'ವೆಂದು ಕರೆಯಬಹುದಾಗಿದೆ. ಈ ಹಾಡಿನ ವಸ್ತು ಮಕ್ಕಳನ್ನು ಕುರಿತಾಗಿದ್ದರೂ ಹಿರಿಯರು ಮಕ್ಕಳ ವಿಷಯದಲ್ಲಿ ತಮ್ಮ ಆಸೆ-ಅನಿಸಿಕೆಗಳನ್ನು ಎರಕ ಹೊಯ್ದಿರುವುದರಿಂದ ಈ ಹಾಡಿನ ಭಾವಾರ್ಥದ ಆಳ ಅಗಲಗಳ ಕಲ್ಪನೆ, ರಸ ಪ್ರತೀತಿ ಮಕ್ಕಳಿಗಾಗುವುದು ಕಡಿಮೆ. ಆದ್ದರಿಂದ ಕೆಲವು ವಿದ್ವಾಂಸರು ಲಾಲಿಯ ಹಾಡುಗಳನ್ನು ಮಕ್ಕಳ ಸಾಹಿತ್ಯದಲ್ಲಿ ಸೇರಿಸುವುದಿಲ್ಲ. ಲಾಲಿಗಳು ಮಕ್ಕಳ ಸಮಾಧಾನಕ್ಕಾಗಿ, ಆನಂದಕ್ಕಾಗಿ ರಚಿತವಾಗಿರುವುದರಿಂದ ಇವನ್ನು ಮಕ್ಕಳ ಸಾಹಿತ್ಯದಲ್ಲಿ ಸೇರಿಸಬಹುದೆಂದು ಡಾ. ಎನ್.ಆರ್. ನಾಯಕ ಅಭಿಪ್ರಾಯಪಡುತ್ತಾರೆ. ಪಡಸಾಲೆಯಲ್ಲಿ ಕಟ್ಟಿರುವ ತೊಟ್ಟಿಲಲ್ಲಿರುವ ಕೂಸು ಅತ್ತರೆ ಅಡುಗೆ ಮನೆಯಲ್ಲೋ, ಅಂಗಳದಲ್ಲಿಯೋ ಇದ್ದ ತಾಯಿ ಅಳುವನ್ನು ಕೇಳಿ ಓಡೋಡಿ ಬರುತ್ತಾಳೆ. ತೊಟ್ಟಿಲ ತೂಗುತ್ತಾಳೆ. ಅದರ ಜೀಕಿನ ಶಬ್ದ ಅವಳ ಹಾಡುವ ಜೋಗುಳ ಪದದ ನಾದದಿಂದಾಗಿ ಲಯ ಪ್ರಾಪ್ತವಾಗುವುದು. ಇಡೀ ವಾತಾವರಣ ಅದೇ ನಾದಮಯ ಗುಂಗಿನಲ್ಲಿರುವಾಗಲೇ ಕೂಸು ಅಳುವುದನ್ನು ನಿಲ್ಲಿಸಿ ನಗುತ್ತ ನಗುತ್ತ ನಿದ್ರಾವಶವಾಗುವುದು. ಜೋಗುಳ ಪದವು ಕೂಸಿನ ನಿದ್ರೆಯೊಂದಿಗೆ ಕರಗಿ ಹೋಗುವುದು.

ಜೋಗುಳ ಹಾಡಿದರೆ ಆಗಳೇ ಕೇಳ್ಯಾನ
ತಾಯಿ ಹಂಬಲ ಮರತಾನ ಕಂದಯ್ಯ
ಜೋಗುಳದಾಗ ಅತಿಮುದ್ದ

ಲಾಲಿಯೆಂದರ ಬಾಲ ಆಲಿಸಿ ಕೇಳುವನು
ಹಾಲ ಹಂಬಲ ಮರತಾನ ಕಂದಯ್ಯ
ಆಡುತ ನಿದ್ದೆ ಹೋಗ್ಯನ[೧೩]

ತಾಯಿ ಹಂಬಲ, ಹಾಲ ಹಂಬಲ ಮರೆಯುವಷ್ಟು ಪರಿಣಾಮಕಾರಿಯಾದುದು ಈ ಜೋಗುಳ. ಪದ್ಯದಿಂದ ಪದ್ಯಕ್ಕೆ ಜೋ ಜೋ ಎಂಬ ಸೊಲ್ಲಿನ ಪುನರುಕ್ತಿ ಉಲ್ಲಾಸಕರ ವಾತಾವರಣವನ್ನುಂಟು ಮಾಡುತ್ತದೆ. ಈ ಹಾಡುಗಳು ಮಕ್ಕಳ ಹೆಸರಿಸುವಿಕೆಗೂ ಕಾರಣವಾಗಿದೆ. ನಿದ್ದೆ ಮಾಡದಿರುವ ಕೂಸುಗಳನ್ನು ಮಲಗಿಸುವುದಕ್ಕಾಗಿ ಈ ಹಾಡುಗಳನ್ನು ಹಾಡುತ್ತಾರೆ. ವಸ್ತುವಿನ ದೃಷ್ಟಿಯಿಂದಲೂ ಜೋಗುಳ ಪದಗಳಲ್ಲಿ ವೈವಿಧ್ಯತೆಯಿದೆ. ಕೇವಲ ಕೂಸಿನ ಚೆಲುವು-ಒಲವು, ನಗು-ಅಳು, ಆಟ-ನೋಟ, ಆಲಾಪಗಳಿಗೆ ಮಾತ್ರ ಸೀಮಿತವಾಗಿಲ್ಲ. ಆಧ್ಯಾತ್ಮ, ತತ್ವ, ನೀತಿ, ದೇವರು, ಪುಣ್ಯಪುರುಷರನ್ನು ಕುರಿತು ಅವರ ಗುಣಾವಳಿಗಳನ್ನು ಹೊಗಳುವ ಚರಿತ್ರೆಯನ್ನು ಸಾರುವ ಜೋಗುಳಗಳು ಶಿಷ್ಟಸಾಹಿತ್ಯ ಸೇರಿದಂತೆ ಜಾನಪದದಲ್ಲೂ ಸಾಕಷ್ಟಿವೆ. ಜೀವನಾನುಭ, ಕಷ್ಟ, ಬಡತನ, ನೋವು ಮುಂತಾದ

ವಿಷಯಗಳು ಸಹ ಜೋಗುಳಗಳಲ್ಲಿ ವ್ಯಕ್ತವಾಗಿವೆ. ಅವನ್ನೆಲ್ಲಾ ಕೂಸಿನ ಮುಂದೆ ಹಾಕಿಕೊಂಡು ಮನಸ್ಸನ್ನು ಹಗುರ ಮಾಡಿಕೊಂಡಿದ್ದಾರೆ. ಆ ಹಾಡು ಕೂಸುಗಳಿಗೆ ಅರ್ಥವಾಗುವಂತೆ ಇಲ್ಲ. ಆದರೆ ನಾದವನ್ನು ಕೂಸು ಗ್ರಹಿಸುತ್ತದೆ.

ಯಾವುದೇ ರೀತಿಯ ಜನಪದ ಹಾಡುಗಳಿಗಿಂತ ಜೋಗುಳ ಹಾಡುಗಳು ಬಹುಕಾಲ ಉಳಿಯುವಂತೆ ಕಂಡುಬರುತ್ತವೆ. ಯಾಕೆಂದರೆ ಎಲ್ಲಿಯವರೆಗೆ ಮಕ್ಕಳು ಅಳುತ್ತಾರೋ ಅವರ ತಾಯಂದಿರ ಧ್ವನಿ ಅವುಗಳನ್ನು ಸಮಾಧಾನಗೊಳಿಸುತ್ತದೆಯೋ ಅಲ್ಲಿಯವರೆಗೆ ಅವು ಬದುಕಿರುತ್ತವೆ. ತಲೆಮಾರಿನಿಂದ ತಲೆಮಾರಿಗೆ ವರ್ಗವಾಗುತ್ತ ರೂಪಾಂತರ ಪಡೆಯುತ್ತಲಿರುತ್ತವೆ. ಜೋಗುಳ ಪದಗಳ ಬಗೆಗೆ ನಮ್ಮಲ್ಲಿ ಹೆಚ್ಚಿನ ಅಧ್ಯಯನ ಮಾಡಬೇಕಾದದ್ದು ಅಗತ್ಯವಾಗಿದೆ.

ಲಾಲೀಯ ಹಾಡಿದರ ಲಾಲೀಸಿ ಕೇಳ್ಯಾನ
ತಾಯಿ ಹಂಬಲ ಮರೆತಾನ ಕಂದಯ್ಯ
ತೋಳ ಬೇಡ್ಯಾನ ತಲೆಗಿಂಬ॥

ತಾಯಿ ಮೊಲೆಹಾಲು ಮಾತ್ರ ಶಿಶುವನ್ನು ಪೋಷಿಸುವುದೆಂದು ತೋರಿದರೂ, ಅಷ್ಟರಿಂದಲೇ ಶಿಶು ಬೆಳೆಯಲಾರದು. ಪೋಷಣೆಯೊಂದಿಗೆ ಅದಕ್ಕೆ ಲಾಲನೆಯೂ ಬೇಕು. ಆ ಲಾಲನೆ ಇರುವುದೆಂದೇ ಶಿಶು ತನ್ನ ಭಾವಲೋಕವನ್ನು ಮರೆತು ನಿದ್ರಿಸುವುದು. ಹಿಂಡನಗಲಿದ ಗಜವು ವಿಂಧ್ಯವನ್ನು ನೆನೆಯದೆ ತಾಯಿ ಮಡಿಲೇ ತವರೆಂದು ಭಾವಿಸುವುದು. ಮುಗಿಲ ನಾಡಿಗಿಂತ ತೊಟ್ಟಿಲ ಬೀಡೆ ವಾಸಿಯೆಂದು ಬಗೆಯುವುದು.

ಜೋಗುಳ ಹಾಡಿದರ ಆಗಲೇ ಕೇಳ್ಯಾನ
ಹಾಲ ಹಂಬಲ ಮರೆತಾನ ಕಂದಯ್ಯಗ
ಜೋಗುಳದಾಗ ಅತಿಮುದ್ದ

(ಮಾಳಮ್ಮ, ಜಂಗಮರಕಲ್ಗುಡಿ, ಗಂಗಾವತಿ)

ಹಾಲು, ಹಸಿವೆಯನ್ನು ಮಾತ್ರ ಹಿಂಗಿಸಬಹುದು. ಆದರೆ ಕಸವಿಸಿ ಇಂಗಿಸುವುದಕ್ಕೆ ಸವಿಲಾಲಿಯೇ ಬೇಕು.

ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಾಲಿ ।
ಎಳ್ಳು ಜೀರಿಗೆ ಬೆಳೆವಂತಾ । ಭೂಮಿತಾಯ್ನ
ಎದ್ದೊಂದರ ಗಳಿಗೆ ನೆನುದೇನೂ ॥

(ಮಾಳಮ್ಮ, ಜಂಗಮರಕಲ್ಗುಡಿ, ಗಂಗಾವತಿ)

ಹೆಂಗಸರ ಹಾಡುಗಳಲ್ಲಿ ಬೀಸೋ ಕಲ್ಲಿನ ಪದಗಳು ಅಗ್ರಸ್ಥಾನ ಪಡೆದಿವೆಯೆನ್ನಬಹುದು. ಮೊದಲು ಭೂತಾಯಿಯನ್ನು ನೆನೆಯುವುದು ಎಂಬ ಭೂಸ್ತುತಿ ಗೀತೆಯಿಂದ ಪ್ರಾರಂಭಿಸುತ್ತಾಳೆ ಜನಪದ ಗಾಯಕಿ. ಸುಂಯ್‌ಂಯ್ ಎಂದು ತಿರುಗುವ ಬೀಸುವ ಕಲ್ಲಿನ ಲಯಕ್ಕೆ ಸರಿಯಾಗಿ ಹೊಂದಿಸಿಕೊಂಡು

ಕಲ್ಲಮ್ಮ ಮಾತಾಯಿ ಮೆಲ್ಲಮ ರಾಜುಣುವ
ಜಲ್ಲಾ ಜಲ್ಲಾನೆ ಉದುರಮ್ಮ । ನಮ್ಮನೆಯ ।
ಬೆಲ್ಲದಾರುತಿಯ ಬೆಳುಗೇನೂ ॥

ತಾಯಿ ಸರಸೋತಿ ಮೆಲ್ಲವ್ವ ರಾಜುಣುವ
ಜಕ್ಕಜಕ್ಕನೆ ಉದುರವ್ವ । ನಾನಿನಗೆ
ತೆಂಗಿನೆಳಗಾಯಿ ಹೊಡುದೇನೂ ॥[೧೫]

ಈ ತ್ರಿಪದಿಗಳಲ್ಲಿ ಕನ್ನಡದ ಗರತಿ ಬೇಗ ಬೀಸುವ ಕೆಲಸ ಮುಗಿಸಿ ಬೇರೆ ಕೆಲಸಗಳಿಗೆ ಅವಕಾಶವಾಗಲಿ ಎಂದು ಕಲ್ಲಮ್ಮನನ್ನು ಪ್ರಾರ್ಥಿಸುತ್ತಾಳೆ. ಇಲ್ಲಿಂದಲೇ ಗರತಿಯ ಸಾಹಿತ್ಯ ಉದಯ ವಾಗಿರಬಹುದೆನ್ನಿಸುತ್ತದೆ. ತನ್ನ ಕಾಯಕದ ಜೊತೆಗೆ ತಾನು ಬೀಸುವ ಕಲ್ಲು ಕಲ್ಲಮ್ಮ ತಾಯಿಯಾಗುತ್ತಾಳೆ. ಭಗತಿಯಾಗುತ್ತಾಳೆ. ಆ ಭಗವತಿ ತೃಪ್ತಳಾದರೆ ಎಲ್ಲವೂ ಸುಗುಮವಾಗಿರುತ್ತದೆ ಎಂಬುದು ಇಲ್ಲಿನ ಆಶಯ. ತೆಂಗಿನೆಳಗಾಯಿ, ತುಪ್ಪದಾರುತಿಗಳ ಲಂಚದ ಆಸೆಯನ್ನು ಆ ಕಲ್ಲಮ್ಮ ತಾಯಿಗೆ ತೋರಿಸುತ್ತ ತನ್ನ ಕೆಲಸ ಬೇಗ ಮುಗಿಯಲಿ ಎಂದು ಕೋರುತ್ತಾಳೆ.

ಅಳುವ ಕಂದನ ತುಟಿಯು ಹವಳದ ಕುಡಿಹಂಗ
ಕುಡಿಹುಬ್ಬು ಬೇವಿನೆಸಳಂಗ । ಕಣ್ನೋಟ ।
ಶಿವನ ಕೈಯಲಗು ಹೊಳೆದ್ಹಂಗ[೧೬]

ಮಗುವು ನಿದ್ರಿಸತೊಡಗಿದಾಗ ತಾಯಿಗೆ ಬಲು ಹಿಗ್ಗಾಯಿತು. ಹಿಗ್ಗಿನಲ್ಲಿ ಹಾಗೆಯೇ ಗುನುಗುನುಗುತ್ತಾಳೆ.

ಅತ್ತರೆ ಅಳಲೆವ್ವ ಈ ಕೂಸು ನನಗಿರಲಿ ।
ಕೆಟ್ಟರೆ ಕೆಡಲಿ ಮನೆಗೆಲಸ । ಕಂದನಂಥ ।
ಮಕ್ಕಳಿರಲೆವ್ವ ಮನೆ ತುಂಬ ।

(ಗಂಗಮ್ಮ ಹರಿಜನ, ವಿದ್ಯಾನಗರ, ಗಂಗಾವತಿ)

ತಾಯಿಯು ತನ್ನ ಮಗುವು ಎಷ್ಟು ಅತ್ತರೂ ತಾಯಿಯ ಕರುಣೆ ಮುಗಿಲು ಮುಟ್ಟುವಂತೆ ಆಗಿರುವುದು. ತನ್ನ ಕೆಲಸ ಮಾಡುವಾಗ ಮಗ ಅದನ್ನು ಕೆಡಿಸಲು ಬಂದರು ಸಹ, ಮನೆಯ ತುಂಬ ಮಕ್ಕಳು ಇದ್ದರೆ ಸಾಕು ಎಂದು ಹೇಳುತ್ತಾಳೆ.

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲ್ಲಿ ಚುಂಡಾ ಮಣಿಯಾಗು ಕಂದಯ್ಯ
ಜೋತಿಯೇ ಆಗು ಜಗಕೆಲ್ಲ ॥[೧೭]

ಮಗೂ ನಿನ್ನ ಮಾತು ನನಗೆ ಮುತ್ತಿನ ಸರದಂತೆ ಅನ್ನಿಸುತ್ತದೆ. ನೀನು ನೀತಿವಂತನಾಗಬೇಕು.

ಮುರುಕು ತೊಟ್ಟಿಲಿಗೊಂದು ಹರಕು ಚಾಪಿಯ ಹಾಸಿ
ಅರಚು ಪಾಪ ಮಲಗಿಸಿ ಅವರಕ್ಕ
ಕಲಕೇತ ಹುಡಿ ಹಿಗ್ಯಾಳ ॥

(ರತ್ನಮ್ಮ ಹರಿಜನ, ವಿದ್ಯಾನಗರ, ಗಂಗಾವತಿ)

ಕಲೆಯುತ್ತ ಹಾದಿ ಹಿಗ್ಗುವುದಕ್ಕೆ ಮುರುಕು ತೊಟ್ಟಲು ತಡೆಯಾಗದು, ಹರಕು ಚಾಪೆ ಅಡ್ಡೈಸದು ಪಾಪನ ಅರಚು ಸಹ ಹಾಡಿನ ಹಿಗ್ಗಿನಲ್ಲಿ ಕೊಚ್ಚಿ ಹೋಗಿ, ನಿದ್ರೆಯಲ್ಲಿ ತಣಿಯಿತು. ಉದಾಹರಣೆಗೆ:

ತೂಗಿರೆ ಚಿನ್ನವ ತೂಗಿರೆ ರನ್ನನ
ಗುಡಿಯಯ್ಯನ ತೂಗಿರೆ
ಚಿನ್ನದ ಗುಡಿಯಯ್ಯನ ತೂಗರೆ
ಸಣ್ಣ ಮಲಕೋಜಿನ ಹರಿಯೆಂದು ತೂಗಿರೆ
ಹರನೆಂದು ತೂಗಿರೆ ಹರಿದಿ ಹರಹರದಯ್ಯನ
ಮಾನ್ಯರು ಬಂದು ತೂಗಿರೆ ॥

ದುಂಡು ಬಟ್ಟಲದಾಗ ಗೊಂಡೇವದ ಹಾಸಿಗೆ
ಗಂಗಾಧರನೆಂದು ತೊಗಿರೆ
ಗಂಗಾಧರನೆಂದು ನಂದಿಕೇಶ್ವರನೆಂದು
ಜಂಬುಲಿಂಗನೆಂದು ತೂಗಿರೆ
ಜಂಬುಲಿಂಗನೆಂದು ತೂಗಿರೆ ॥

ಕಬ್ಬುಣದ ತೊಟ್ಟಿಲಕ ಜಗಮಿಣಿಗಳಾರೆ
ಇಬ್ಬರು ತೊಗಿದರೆ ಮಲಗವನೆ
ಇಬ್ಬರು ತೊಗಿದರೆ ಮಲಗವನೆ
ಹಂಪಿಯ ವಿರೂಪಾಕ್ಷನೆಂದು ತೂಗಿರೆ||

ಹಂಪಿಯ ವಿರೂಪಾಕ್ಷನೆಂದು ತೂಗಿರೆ
ಹರಳಿಗೊನ್ನುಂಗುರ ಬೆರಳಿಗೊನ್ನುಂಗರ
ಬೆರಳ ಚೀಪ್ಸಿ ಚೀಪ್ಸಿ ಪಾಡಿರೆ
ಬೆರಳ ಚೀಪ್ಸಿ ಚೀಪ್ಸಿ ಪಾಡಕಂದಮ್ಮನ
ಸರಳ ಬೈತಲೇರು ತೂಗಿರೆ
ಸರಳ ಬೈತಲೇರು ತೂಗಿರೆ ॥[೧೮]

ಈ ಹಾಡಿನಲ್ಲಿ ಪ್ರಸ್ತಾಪಿಸಲಾದ ಹರಿಕೃಷ್ಣರಾಯ ಹರಿಹರದಯ್ಯನ ಎಂಬ ಹೆಸರುಗಳು ಆನೆಗೊಂದಿ ಹಂಪೆ ಅರಸನನ್ನು ನೆನಪಿಸುತ್ತದೆ. ವಿರೂಪಾಕ್ಷನು ಸೇರಿದಂತೆ ಪಂಚಲಿಂಗಗಳನ್ನು ನೆನೆಯಲಾಗಿದೆ. ಅರಸರು ಈ ಭಾಗದ ದೈವ. ಜನತೆಗೆ ಅಪಾರ ಅಚ್ಚುಮೆಚ್ಚಾಗಿದ್ದವೆಂದು ಈ ಹಾಡಿನಿಂದ ತಿಳಿಯಬಹುದಾಗಿದೆ.

ಅಳದಿರೊ ಕಂದಯ್ಯ ನಿನ್ನ ಕಾಲ ತೊಳದೇನು
ತೆಂಗೀನ ಬಟ್ಟಲಾಗೆ ತಿಳಿನೀರ ತಕ್ಕೊಂಡು
ನಿನ್ನ ಬಂಗಾರದ ಮ್ಕಕವ ತೊಳದೇನು ॥

ತೆಂಗಿನಕಾಯಿ ತಿಳಿನೀರ ತಕ್ಕೊಂಡು
ಬಂಗಾರದ ಪಾದ ತೊಳದೇನೆ
ಬಳ್ಳೊಳೆ ಮುದ್ದು ಬೆಳ್ಳಿ ತಾನೀ ಮುದ್ದು

ಹಣ್ಣಿನ ಮರಕ್ಕೆ ಗಿಣಿ ಮುದ್ದು–ಕಂದಯ್ಯ
ನೀ ಮುದ್ದು ನಮ್ಮ ಮನಿಗೆಲ್ಲ

ಬಂಗಾರ ಮುದ್ದು ಬೆಳ್ಳಿ ತಾವೀಜ ಮುದ್ದು
ಹಣ್ಣು ಇದ್ದ ಮರಕ ಗಿಳಿ ಮುದ್ದು ರಾಜಣ್ಣ
ನೀ ಮುದ್ದು ನನ್ನ ಬಳಗಕ್ಕೆ[೧೯]

## ಮಳೆಯನ್ನು ಕುರಿತು

ಬಾರೊಪ್ಪ ಮಳೆರಾಯ ಬಂದೊಯ್ಯೋ ಶಿವರಾಯ
ನೂರಾರು ಗೋವಿನೊಳಗೆ ಎಜಮಾನ । ಗೋವೊಂದು
ಅದು ಏನೆಂದು ಹೇಳುತಾದೆ

ನಾವು ಕುಡಿಯೋಕೆ ನೀರಿಲ್ಲ ನಾವು ಮೇಯಾಕೆ ಮೇವಿಲ್ಲ
ನೂರಾರು ಕೆಪಿಯೊಳಗೆ ಒಂದೇ ಜಮಾನ ಕಪಿಯೊಂದು
ಅದು ಏನೆಂದು ಹೇಳುತ್ತದೆ.

ನಾವು ತಿನ್ಕೊಕೆ ಹಣ್ಣಿಲ್ಲ ನಾವ ಕುಡಿಯೋಕೆ ನೀರಿಲ್ಲ
ನೂರಾರು ಗಿಣಿಯೊಳಗೆ ಒಂದೇ ಜಮಾನ ಗಿಣಿಯೊಂದು
ಅದು ಏನೆಂದು ಹೇಳುತ್ತದೆ.

ನಮಗೆ ತಿನ್ನೋಕೆ ಹಣ್ಣಿಲ್ಲ ನಾವು ನಿಲ್ಲೋಕೆ ನೆರಳಿಲ್ಲ
ಬಾರಪ್ಪ ಮಳೆರಾಯ ಬಂದೊಯ್ಯೊ ಶಿವರಾಯ[೨೦]

ಮಕ್ಕಳ ಆಟವಾಡುವ ಸಂದರ್ಭದಲ್ಲಿ ಮತ್ತು ಮಳೆ ಬಾರದೆ ಇದ್ದಾಗ ಆ ಸಂದರ್ಭದಲ್ಲಿ ಮಕ್ಕಳು ಕುಡಿಯೋಕೆ ನೀರಿಲ್ಲ, ಮೇಯೋಕೆ ಮೇವಿಲ್ಲ, ತಿನ್ನೋಕೆ ಹಣ್ಣಿಲ್ಲ, ನಿಲ್ಲೋಕೆ ನೆರಳಿಲ್ಲ ಶಿವರಾಯ ನೆನೆಯುತ್ತಾ ಹಾಡುವರು.

ಕೂಸು ಇದ್ದ ಮುಗಿ ಬೀಸಣಕಿ ಯಾತಕ
ಕೂಸ ರಾಜಣ್ಣ ಒಳ ಹೊರಗೆ ತಿರುಗ್ಯಾಡಿದರ
ಬೀಸಣಿಕಿ ಹೊಳತಾ ಹೊಳದಾವ
ಹಣ್ಣ ಇದ್ದ ಮುರಕ ಗಿಣಿಮುದ್ದು
ರಾಜಣ್ಣ ನೀ ಮುದ್ದು ನನ್ನ ಬಳಗಕ್ಕ[೨೧]

ಎಂದು ತಾಯಿಯು ತನ್ನ ಮಗ ಒಳ ಹೊರಗೆ ಓಡಾಡಿದರೂ ಅದು ಸಂತಸ ತನಗಷ್ಟೇ ಅಲ್ಲ, ತನ್ನ ಎಲ್ಲ ಬಳಗಕ್ಕೂ ಹರ್ಷ ಹೆಚ್ಚುವುದು ಎಂದಿರುವಳು. ಹಣ್ಣುಗಳಿದ್ದ ಮರಕ್ಕೆ ಗಿಳಿಗಳು ಬರುವುದು ಸಹಜ. ಹಣ್ಣಿನ ಆಕರ್ಷಣೆಯಿಂದ ಪಕ್ಷಿಗಳಲ್ಲದೆ ಮನುಷ್ಯರೂ ಒಂದು ಕ್ಷಣ ತಲೆ ಎತ್ತಿ ಮರದತ್ತ ನೋಡಿ ಹಣ್ಣಿನ ಮಾಟಕ್ಕೆ, ಚೆಲುವಿಕೆಗೆ, ಹಸಿರು ಎಲೆ ಚಿಗುರುಗಳಿಗೆ ಆಕರ್ಷಿತ ರಾಗುವರು. ಅದರಂತೆ ಮಗುವಿದ್ದ ಮನೆಯಲ್ಲಿ ಎಲ್ಲರ ನೋಟ ಮಗುವಿನತ್ತಲೇ. ಚಿಕ್ಕ ಮಗ ಎಲ್ಲರನ್ನು ತನ್ನತ್ತ ಆಕರ್ಷಿಸಿ ಬಂಧು ಬಳಗಕ್ಕೆಲ್ಲ ಸಂತಸವನ್ನುಂಟು ಮಾಡುತ್ತಿದ್ದಾನೆಂದು ತಾಯಿಯು ಹೆಮ್ಮೆಯಿಂದ ಹೇಳುತ್ತಾರೆ. ಚಿಕ್ಕ ಮಗು ದೊಡ್ಡದಾದಂತೆ ಅದು ಹಠ ಮಾಡತೊಡಗಿದಾಗ ತಾಯಿಗೆ ಆತಂಕ.

## ಹುಯ್ಯೋ ಹುಯ್ಯೋ ಮಳೆರಾಯ

ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತ್ವಾಟಕೆ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳೆ ತ್ವಾಟಕ ನೀರಿಲ್ಲ

ಚುಚ್ಚೊ ಚುಚ್ಚೊ ಮಳೆರಾಯ
ಪಚ್ಚೆ ಪಯಿರಿಗೆ ನೀರಿಲ್ಲ
ಕೊಚ್ಚೊ ಕೊಚ್ಚೊ ಮಳೆರಾಯ
ಕುಡಿಯೋ ಬಾವಿಗೆ ನೀರಿಲ್ಲ

(ದೇವರಾಜ ವಿದ್ಯಾನಗರ, ಗಂಗಾವತಿ)

ಮಕ್ಕಳು ಆಟವಾಡುವ ಸಂದರ್ಭದಲ್ಲಿ ಮತ್ತು ಮಳೆ ಬಾರದೆ ಇದ್ದಾಗ ಆ ಸಂದರ್ಭದಲ್ಲಿ ಮಕ್ಕಳ ಈ ಹಾಡನ್ನು ಹೇಳುವದು ಕಂಡುಬರುತ್ತದೆ.

ಈ ಹಾಡಿನಲ್ಲಿ ಪ್ರಾಸ್ತಾಪಿಸಲಾಗದ ಹರಿಕೃಷ್ಣರಾಯ ಹರಿಹರದಯ್ಯನ ಎಂಬ ಹೆಸರುಗಳು ಆನೆಗೊಂದಿ ಹಂಪೆ ಅರಸನ ನೆನಪಿಸುತ್ತದೆ. ವಿರೂಪಾಕ್ಷನು ಸೇರಿದಂತೆ ಪಂಚಲಿಂಗಗಳನ್ನು ನೆನೆಯಲಾಗಿದೆ. ಅರಸರು ಈ ಭಾಗದ ದೈವಗಳು ಜನತೆಗೆ ಅಪಾರ ಅಚ್ಚುಮೆಚ್ಚಾಗಿದ್ದವೆಂದು ಈ ಹಾಡಿನಿಂದ ತಿಳಿಯಬಹುದಾಗಿದೆ.

ಆಡಿ ಬಾ ಎನಕಂದ ಅಂಗಾಲ ತೊಳೆದೇನ
ತೆಂಗಿನ ಕಾಯಿ ತಿಳಿನೀರು ತಕ್ಕೊಂಡು
ಬಂಗಾರದ ಮಾರೀ ತೊಳೆದೇನ

ಅತ್ತರೆ ಅಳಲೆವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನೆ ಗೆಲಸ। ಕಂದನಂಥ
ಮಕ್ಕಳೆರಲೆವ್ವ ಮನೆ ತುಂಬ

ಮುದ್ದಿನ ನನ್ನ ಕಂದಯ್ಯನ ಗೆಜ್ಜೆ ಸಪ್ಪಳ ಕೇಳಿ
ನಿಬಣ್ಣ ಎತ್ತು ಬೆದೆರವಾ ಬೆಟ್ಟ ಸೆರಿ
ಮಧ್ಯಾಹ್ನದ ಮೇಲು ಮಾರೆತವು
ಬಾಲ ಹನ್ಮುಂತನಂತೆ ಬಾಕಿ ಚಂಡಿ ಹಾಡುತನ
ಬಾಹುಲಿಯ ಗಿರಿಯ ನನ್ನ ಕಂದ ಕಂಡರ
ಬಾಲಿ ಬಾಸಿರು ಬಯಸರೋ

ನನ್ಯೆ ನೀನು ಇನ್ನ ಸಾವಿರ ಕಾಲ
ಬನ್ಯೆಯ್ಯ ಬುಡದ ಗರಿಕೆಯ ಬೇರುಂತೆ
ಮಕ್ಕಳ ಎತ್ತಿ ಸುಖಿಯಾಗು
ನನ್ಯೆಯ ನಂತವರು ಹನ್ನೆರಡು ಮಕ್ಕಳ
ಒನ್ಯೆಯ್ಯ ಮರದ ನಾರಳಗ
ಒನ್ಯೆಯ್ಯನಾರಗ ಹಳುವಾಗ ಸನ್ಯೆಸಿ ಜಾಪವಾ ಮರೆತನೊ[೨೨]

ಜನಪದ ಸಾಹಿತ್ಯವು ಪರಿಸರದಿಂದ ಪ್ರೇರಿತವಾದದ್ದು. ಸಂಸಾರದ ಕಷ್ಟ-ಸುಖ, ಸ್ನೇಹ ಬಾಂಧವ್ಯಗಳು, ಸಿಟ್ಟು ಸೆಡವು, ಉದ್ಯೋಗ, ಸುಖ-ಸಂತೋಷ, ರಸಿಕತೆ ಮುಂತಾದವುಗಳನ್ನು ಕಥೆ ಗೀತೆಗಳಲ್ಲಿ ಕಾಣುತ್ತೇವೆ. ಹೆಂಗಸರ ಹಾಡುಗಳೂ ಇದಕ್ಕೆ ಹೊರತಾಗಿಲ್ಲ. ಅವರ ಸೀಮಿತ ಬದುಕಿನ ವಲಯದಲ್ಲಿ ಬರುವ ನೂರಾರು ಅನುಭವಗಳು ಕಾವ್ಯಕ್ಕೆ ಪ್ರೇರಣೆಯನ್ನಿತ್ತು ವಸ್ತುವಾಗಿದೆ. ಮದುವೆಯ ವಿವಿಧ ಸಂದರ್ಭಗಳಲ್ಲಿ ಹಾಡುಗಳಲ್ಲಿ ಜೋಗುಳದ ಹಾಡುಗಳಲ್ಲಿ, ಸೋಬಾನದ ಹಾಡುಗಳಲ್ಲಿ ಸೀಗಿ, ಗೌರಿ, ಗುಳ್ಳವ್ವ ಮುಂತಾದ ಸಂದರ್ಭದಲ್ಲಿ ಹಾಡುವ ಹಾಡುಗಳಲ್ಲಿ ದೈವಭಕ್ತಿ, ರಾಮಾಯಣ, ಮಹಾಭಾರತದ ಘಟನೆಗಳು, ಶರಣರ ಜೀವನದ ಆದರ್ಶ, ತವರಿನ ಹಂಬಲ, ದಾಂಪತ್ಯ ಜೀವನ, ಕೌಟುಂಬಿಕ ಸ್ನೇಹ ಬಾಂಧವ್ಯಗಳು ವರದಕ್ಷಿಣೆಯ ಸಮಸ್ಯೆ, ಹಾಸ್ಯ, ಮೂದಲಿಕೆ, ವ್ಯಂಗ್ಯ, ಐತಿಹಾಸಿಕ ರಾಜಕೀಯ ಘಟನೆಗಳು ಎಡೆಪಡೆದಿವೆ. ಆಡು ಮುಟ್ಟದ ಸೊಪ್ಪಿಲ್ಲವೆಂಬಂತೆ ಸಂಪ್ರದಾಯದ ಹಾಡುಗಳಲ್ಲಿ ಬಾರದ ವಿಷಯವೇ ಇಲ್ಲ. ಸಂಪ್ರದಾಯದ ಹಾಡುಗಳು ಪರಂಪರಾಗತ ವಾಗಿ ಬಂದಿರುವ ಹಾಡುಗಳೆಂದು ಮೇಲ್ನೋಟಕ್ಕೆ ಎನಿಸಿದರೂ ಅವುಗಳಲ್ಲೂ ನಾವೀನ್ಯತೆ, ಆಧುನಿಕತೆಗಳಿವೆ. ಹಲವಾರು ಸಂದರ್ಭದಲ್ಲಿ ಹಾಡುವ ಹಾಡುಗಳನ್ನು ಕೌಂಟುಬಿಕ ಸ್ನೇಹ ವಾತ್ಸಲ್ಯಗಳು, ನೀತಿ, ಹಾಸ್ಯ ಇತರ ವಿಷಯಗಳೆಂಬ ದೃಷ್ಟಿಯಿಂದ ನೋಡಲಾಗಿದೆ.

**೫.೩. ಸಂಪ್ರದಾಯದ ಹಾಡುಗಳು**

ಆದಿಮಾನವ ತನ್ನ ಭಾವನೆಗಳನ್ನು ರಾಗಬದ್ಧವಾಗಿ ಉದ್ಗಾರ ತೆಗೆದಾಗಲೇ ಜನಪದ ಕಾವ್ಯ ಹುಟ್ಟಿತು. ತನ್ನ ಅನಿಸಿಕೆಗಳಿಗೆ ಒಂದು ವ್ಯವಸ್ಥಿತ ರೂಪ ಕೊಡಲು ಲಿಪಿ ಕಂಡುಹಿಡಿದು, ಗ್ರಂಥಸ್ಥಗೊಳಿಸಲು ಎಷ್ಟೋ ಕಾಲ ಗತಿಸಿರಬೇಕು. ಪ್ರೌಢಗ್ರಂಥ ಸಾಹಿತ್ಯಕ್ಕೆ ಜನಪದ ಸಾಹಿತ್ಯವೇ ಮೂಲ ಆಕರ ಮೊದಲು ಹುಟ್ಟಿದ್ದು, ಜನವಾಣಿ ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದದ್ದು ಕವಿವಾಣಿ, ಜನವಾಣಿ ಬೇರು ಕವಿವಾಣಿ ಹೂವು ಬೇರಿನಂತೆ ನೆಲದಾಳದಲ್ಲಿದ್ದು ಮೇಲಿನ ಕೊಂಬೆ, ರೆಂಬೆ, ಚಿಗುರು, ಹೂ, ಹಣ್ಣುಗಳಿಗೆ ಜೀವರಸ ಜೀವನದಿಂದ ಪ್ರಭಾವಿತವಾದರೂ ಪರಿಷ್ಕೃತಗೊಂಡ ಪಂಡಿತ ಮಂಡಲಿಯಲ್ಲಿ ಮಾನ್ಯತೆ ಗಳಿಸಿ ಸಾಮಾನ್ಯ ಜನರಿಗೆ ಕೈ ಎಟುಕ ದಂತಾಯಿತು.

ಜನಪದ ಸಾಹಿತ್ಯವನ್ನು ಪ್ರೌಢ ಸಾಹಿತ್ಯದ ಮಧುರ "ಕೆಂಡರ್ ಕೇಳ್ವೊಡೆ ಗೊರವರ ದುಂಡಚಿಯೆ ಬೀದಿವರಿಯೆ ಬೀರನ ಕತೆಯೇ" ಎಂದು ಇದರ ಜೊತೆಗೆ ದೇಸಿಯ ಚೆಲುವು ಪ್ರೌಢ ಕಾವ್ಯಕ್ಕೆ ಮೆರಗನ್ನಿಯುತ್ತ ಪಂಪನಂಥ ಮಹಾಕವಿಯೇ "ಕಾವ್ಯಬಂಧವು ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳ್ ತಳ್ಪುದು" ಎಂದಿರುವನು. ಹೀಗೆ ಪ್ರೌಢ ಸಾಹಿತ್ಯದ ಕವಿಗಳ ಆದರ ಅನಾದರಗಳಿಗೆ ಗುರಿಯಾದ ಜನಪದ ಸಾಹಿತ್ಯವು ಜನ ಸಾಮಾನ್ಯರ ಸಾಹಿತ್ಯವಾಗಿ ಗುರಿಯಾದ ಜನಪದ ಸಾಹಿತ್ಯವು ಅವರ ನೋವು–ನಲಿವು, ಸುಖ–ದುಃಖ, ಹರ್ಷ, ಉಲ್ಲಾಸಗಳಿಗೆ ಮಾಧ್ಯಮವಾಗಿದೆ. ಜನಪದ ಸಾಹಿತ್ಯ ತನ್ನ ವೈವಿಧ್ಯತೆಯಿಂದಾಗಿ ವಯೋಮಾನದ ಮಿತಿಯಿಲ್ಲದೆ, ಲಿಂಗಭೇದವಿಲ್ಲದೆ ಎಲ್ಲರನ್ನು ಆಕರ್ಷಿಸುತ್ತದೆ. ಕಥೆ, ಗಾದೆ, ಒಗಟು, ಹಾಡುಗಳು, ಹೆಂಗಸರು ಮತ್ತು ಗಂಡಸರು ಮಕ್ಕಳೊಂದಿಗೆ ಎಲ್ಲರೂ ಮನಸೋಲುವರು.

ಪುರುಷ ಪ್ರಧಾನವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷರಿಗೆ ಅಗ್ರಪಟ್ಟ. ಆದರೆ ಜನಪದ ಸಾಹಿತ್ಯದಲ್ಲಿ(ಕಾವ್ಯದಲ್ಲಿ) ಈ ಮಾತು ನಡೆಯದು. ಗಂಡಸರ ಹಾಡುಗಳಿಗಿಂತ ಹೆಂಗಸರ ಹಾಡುಗಳಲ್ಲಿ ವೈವಿಧ್ಯತೆ ಹೆಚ್ಚು. ಬೆಳಗ್ಗೆ ಎಂದು ಬೀಸುವುದರಿಂದ ಪ್ರಾರಂಭವಾಗುವ ದೈನಂದಿನ ಕೆಲಸವಿರಲಿ, ಹಬ್ಬ-ಹರಿದಿನ, ಮದುವೆ, ಪೂಜೆ, ವ್ರತ, ತೊಟ್ಟಿಲು, ಸೀಮಂತ ಮುಂತಾದ ವಿಶೇಷ ಭತ್ತ ಕುಟ್ಟುವ, ರಾಗಿ ಬೀಸುವ ಮುಂತಾದ ಶ್ರಮದ ಕೆಲಸವಿರಲಿ, ಅಲ್ಲಿ ಕೆಲಸಕ್ಕೆ ಮುಂಚೆ ಹೆಂಗಸರ ಹಾಡು ಕೇಳಿ ಬರುತ್ತದೆ. ಈ ಹಾಡುಗಳಿಗೆ ಪ್ರೌಢವಾದ ಕಥಾವಸ್ತುವಿರಬೇಕೆಂಬುದಿಲ್ಲ. ಅಷ್ಟಾದಶ ವರ್ಣನೆಯ ತೊಡಕಿಲ್ಲ ಉದಾತ್ತ ಕಥಾನಾಯಕ ನಾಯಕಿಯ ಇರಬೇಕೆಂಬುದೂ ಇಲ್ಲ, ಪಾಂಡಿತ್ಯದ ಬಲ ಮೊದಲೇ ಇಲ್ಲ. ತಮ್ಮ ನಿತ್ಯದ ಸಾಮಾನ್ಯ ಜೀವನದಿಂದ ಸ್ಫೂರ್ತಿಗೊಂಡು ಪಟ್ಟಪಾಡು, ಉಂಡ ನೋವು ನಲಿವಿನ ಮುಖವಾಣಿಯಾದ, ಜೀವನದ ಉಸಿರೇ ಜನಪದ ಹಾಡುಗಳಿವು.

**ಹಾಡಿನ ಸ್ವರೂಪ**

ಹೆಂಗಸರ ಹಾಡುಗಳನ್ನು ಸಂಪ್ರದಾಯದ ಮತ್ತು ಇತರ ಹಾಡುಗಳೆಂದು ಪ್ರಮುಖವಾಗಿ ಎರಡು ರೀತಿಗಳಲ್ಲಿ ಗುರುತಿಸಿಕೊಳ್ಳಬಹುದಾಗಿದೆ. ಸಂಪ್ರದಾಯದ ಹಾಡುಗಳು ಜೀವನ ಪ್ರಮುಖ ಸಂದರ್ಭಗಳಲ್ಲಿ ಆಚರಿಸುವ ಧಾರ್ಮಿಕ, ಸಾಮಾಜಿಕ ಆಚರಣೆಗಳ ಜೊತೆಗೆ ಹಾಡುವ ಹಾಡುಗಳು ಜೋಗುಳದ ಹಾಡನ್ನು ಮದುವೆಯಲ್ಲಾಗಲಿ, ಬೀಗರನ್ನು ಎದುರುಗೊಳ್ಳುವ ಹಾಡನ್ನು ಸೀಮಂತದಲ್ಲಾಗಲಿ, ಹಾಡಲಾಗುವುದಿಲ್ಲ. ಒಂದೊಂದು ಸಂದರ್ಭದಲ್ಲೂ ಅತ್ತ ಆಚರಣೆಗಳು ಮಾಡುತ್ತಿರುವಂತೆಯೇ ಆಚಾರ್ಯ ಮಾಡುವವರೇ ಆಗಲಿ ಇತರರಾಗಲಿ ಹಾಡುವರು.[೨೩]

ಉದಾಹರಣೆ: ಎಣ್ಣೆ, ಅರಿಶಿಣ ಹಚ್ಚುವ ಹಾಡು ಇತ್ತ ಮದುಮಕ್ಕಳಿಗೆ ಜೋಳದ ದಂಟಿನಿಂದ ಬಟ್ಟಲಲ್ಲಿ ಅದ್ದಿ ಎಣ್ಣೆ ಇಡುತ್ತಿರುವಂತೆ ಸುರಗಿಯಲ್ಲಿ ಇರುವ ಸುಮಂಗಲೆಯರಾಗಲಿ, ಹೊರಗೆ ಇರುವ ಇತರರೇ ಆಗಲಿ ಹಾಡುವರು. ಹಾಡು ಮುಗಿಯುತ್ತಿರುವಂತೆ ಎಣ್ಣೆ ಇಡುವ ಕಾರ್ಯ ಮುಗಿಸುವರು. ಅದರಂತೆ ಹಾಡುವಾಗ, ಆರತಿ ಮಾಡುವಾಗ, ಕುಂಕುಮ ಹಚ್ಚುವಾಗ ಇದೇ ರೀತಿಯಾಗಿ ಅತ್ತ ಕ್ರಿಯೆಗಳು ಜರುಗುತ್ತಿರುವಂತೆ ಹಾಡು ಮುಂದುವರಿಯುತ್ತದೆ. ಈ ರೀತಿ ಆಯಾ ಸನ್ನಿವೇಶ ಸಂದರ್ಭಗಳಿಗೆ ಮೀಸಲಾದ ಕಾರ್ಯಕ್ರಮಗಳು ಬದಲಾಗುತ್ತ ಹೋದಂತೆ ಹಾಡುಗಳೂ ಬದಲಾಗುತ್ತವೆ. ಆದುದರಿಂದ ಹಾಡುಗಳು ದೀರ್ಘವಾಗಿರದೆ ಬೇಗ ಮುಗಿಯುವಂಥ ನಾಲ್ಕೈದು ನುಡಿಯ ಹಾಡುಗಳಿರುತ್ತವೆ. ಕೆಲವು ಸೋಬಾನದ ಹಾಡುಗಳು, ನಾಟಿ ಹಚ್ಚುವ ಹಾಡುಗಳು, ಕೋಲಾಟದ ಹಾಡುಗಳು ದೀರ್ಘವಾಗಿದ್ದ ಕಥಾನಕಗಳಾಗಿರುತ್ತವೆ.

**೫.೩.೧. ಮದುವೆ ಹಾಡುಗಳು**

**ಹಿನ್ನೆಲೆ:** ವಿವಾಹ, ಪರಿಣಯ, ಕಲ್ಯಾಣ ಮುಂತಾದ ಹೆಸರುಗಳಿಂದ ಕರೆಯುವ 'ಮದುವೆ' ಎಂಬುದು ಎಂದಿನಿಂದ ರೂಢಿಯಲ್ಲಿ ಬಂದಿತು ಎಂದು ಖಚಿತವಾಗಿ ಹೇಳಲು ಆಧಾರಗಳಿಲ್ಲ. ಮದುವೆಯ ಆಚಾರಗಳು, ಪದ್ಧತಿಗಳು ಇಂದು ಈ ಸ್ಥಿತಿಗೆ ಬರುವ ಮುಂಚೆ ಅನೇಕ ಬದಲಾವಣೆ, ಪರಿಷ್ಕರಣೆ, ಹೊಂದಾಣಿಕೆಗಳು ಆಗಿರಬೇಕು. ಸ್ತ್ರೀಯರ ಇಂತಹ ಪರಿಸ್ಥಿತಿಯಲ್ಲಿ ಹೆಣ್ಣಿಗೆ ಒಂದು ಸುರಕ್ಷತೆ ಒದಗಿಸಲು ಸಂತಾನ ರಕ್ಷಣೆಗೆ ಪೋಷಣೆಗೆ ಮದುವೆ ರೂಢಿಯಲ್ಲಿ ಬಂದಿರಬೇಕು.

ಹೆಣ್ಣು ಗಂಡು ಒಂದುಗೂಡಿ ವ್ಯವಸ್ಥಿತವಾಗಿ ಜೀವನ ಸಾಗಿಸಲು ಸಮಾಜದಲ್ಲಿ ಎಲ್ಲರೂ ಒಪ್ಪಿಗೆ ಸೂಚಿಸುವ ವ್ಯವಸ್ಥೆಯೇ ಮದುವೆ. ಮುಂದೆ ಬರುಬರುತ್ತ ಕಟ್ಟು ಪಾಡು ನಿಷೇಧ ನಿರ್ಬಂಧ, ಸಪ್ತಪದಿ, ಮಂತ್ರ, ಪುರೋಹಿತ ಸೇರಿಕೊಂಡು ಮದುವೆಗೆ ಒಂದು ಧಾರ್ಮಿಕ ಚೌಕಟ್ಟು ಹಾಕಿದರು. ಮದುವೆಯ ಮುಖ್ಯ ಉದ್ದೇಶ ಗಂಡು ಹೆಣ್ಣು ಒಂದುಗೂಡಿ ಲೈಂಗಿಕ ತೃಪ್ತಿ ಹೊಂದುವುದು ಮತ್ತು ಸಂತಾನೋತ್ಪತ್ತಿ ಮಾಡುವುದು, ಸಂತಾನದ ರಕ್ಷಣೆಯ ಜವಾಬ್ದಾರಿ ಹೊರುವುದು ಆಗಿದೆ ಎಂಬುದು ಬಹುಜನರ ಅಭಿಪ್ರಾಯವಾಗಿದೆ. "Marriage has two main functions it the means adopted by human society for regulating the relations between the sexes and it furnishes the mechanism by means of which the Relation of chield to the community is determind" ಆದರೆ ವಿವಾಹದ ಉದ್ದೇಶ ಇಷ್ಟೇ ಆಗಿಲ್ಲ. ಸ್ವಚ್ಛಂದತೆಗೆ ಸಮಾಜದಲ್ಲಿ ಆಧಾರವಿಲ್ಲ. ಹೀಗಾಗಿ ಲೈಂಗಿಕ ತೃಪ್ತಿ ಮರ್ಯಾದಿತವಾಗಿರಬೇಕು. ತನ್ನ ಆಶೆ ಆಕಾಂಕ್ಷೆಗಳಿಗೆ ಕಡಿವಾಣ ಹಾಕಿ ಸಮಷ್ಟಿ ಹಿತಕ್ಕಾಗಿ ಸಂಯಮದಿಂದ ಜೀವನ ಸಾಗಿಸಿ ತಾವು ಪಡೆದ ಸಂತಾನದ ರಕ್ಷಣೆ, ಪೋಷಣೆ ಮಾಡಿ ಜೊತೆಗೆ ಸಮಾಜದಲ್ಲೊಂದು ಉತ್ತಮ ಸ್ಥಾನ ಒದಗಿಸಿ ಕೊಡಬೇಕು. ಅದಕ್ಕೆ ಮದುವೆ ಒಂದು ಅತ್ಯಂತ ಒಳ್ಳೆಯ ವ್ಯವಸ್ಥೆ ಎಂದು ಜಾರಿಯಲ್ಲಿ ತಂದಿದ್ದಲ್ಲದೇ ಕುಟುಂಬ ಜೀವನಕ್ಕೆ ಭದ್ರ ಬುನಾದಿ ಹಾಕಿದರು. ಪಾವಿತ್ರ್ಯದ ಚೌಕಟ್ಟು ತೊಡಿಸಿದರು. ಕುಟುಂಬವೆಂಬ ಕಟ್ಟಡಕ್ಕೆ ಮದುವೆ ಮಹಾದ್ವಾರ. "ಕುಟುಂಬದಲ್ಲಿ ಕಾಣಬರುವ ಎಲ್ಲ ಸಂಬಂಧಗಳನ್ನು ನಿರ್ದೇಶಿಸುವುದು ಮದುವೆ" ಎನ್ನಲಾಗಿದೆ.[೨೪] ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ ಅವರ ಸುತ್ತಲೂ ಸಾಮಾಜಿಕ, ಧಾರ್ಮಿಕ ಬಲೆಯನ್ನು ಹೆಣೆದು ಅವರ ಬಾಳಿಗೊಂದು ಅರ್ಥವನ್ನು, ಸಾರ್ಥಕತೆಯನ್ನು ಮದುವೆ ಒದಗಿಸಿಕೊಡುತ್ತದೆ ಎಂದು ಒಂದು ಸಾಮಾಜಿಕ ರೂಪಕೊಟ್ಟರು.

### ವಿವಿಧ ವಿಧಾನಗಳು

ಮದುವೆ ಹೆಣ್ಣಿನ ಮನೆಯ ಮುಂದೆ ಇಲ್ಲವೆ ಗಂಡಿನ ಮನೆಯ ಮುಂದೆ ನಡೆಯಬಹುದು. ಅಥವಾ ಇನ್ನೆಲ್ಲಿಯೋ ನಡೆಯಬಹುದು. ಸಾಮಾನ್ಯವಾಗಿ ಮದುವೆ ಮೂರು ದಿವಸ ನಡೆಯಬಹುದು. ಸಾಮಾನ್ಯವಾಗಿ ಮದುವೆ ಮೂರು ದಿವಸ ನಡೆಯಬೇಕೆಂದು ಇಟ್ಟುಕೊಂಡಿದ್ದಾರೆ. ಮೊದಲನೆಯ ದಿವಸ ಮದುಮಕ್ಕಳಿಗೆ ಅರಿಶಿಣ ಹಚ್ಚುವದು; ಇನ್ನೊಂದು ದಿವಸ ದೇವತಾಕಾರ್ಯ; ಮೂರನೆಯ ದಿವಸ ಅಕ್ಷತೆ ಅಂದರೆ ಅಕ್ಕಿಕಾಳು ಹಾಕುವುದು. ಇದಕ್ಕೂ ಮೊದಲಿಗೆ ನಿಶ್ಚಯ, ಭಾಟಿಗೆ ಮೊದಲಾದ ಸಂಪ್ರದಾಯ ನಡೆಯುತ್ತವೆ. ಮದುವೆಯ ಕಾಲದಲ್ಲಿ ನಡೆಯುವ ಎಲ್ಲ ವಿಧಾನಗಳಲ್ಲಿಯೂ ಹಾಡು ಹೇಳಲಾಗುತ್ತದೆ. ಆ ಹಾಡುಗಳು ಆ ವಿಧಾನಗಳನ್ನು ಹೇಳುವಂತಿದೆ. ಆದ್ದರಿಂದ ಅವು ಕೇವಲ ರಂಜನೆಯ ಹಾಡುಗಳಾಗಲಾರವು. ಆದರೆ ಇನ್ನೊಂದು ದೃಷ್ಟಿಯಿಂದ ಆ ಹಾಡುಗಳನ್ನು ಕೇಳಿ ನೋಡಿದರೆ ಅವುಗಳಲ್ಲಿ ರಸವು ಕಂಡುಬರುವುದು.[೨೫]

### ನಿಶ್ಚಯ ಕಾರಣ

ಇದ್ದಕ್ಕೆ "ಸಕ್ಕರಿ ಇಡುವ ಕಾರಣ"ವೆಂತಲೂ ಕರೆಯುತ್ತಾರೆ. ಹೆಣ್ಣಿನವರು ಗಂಡಿನವರು ಪರಸ್ಪರ ಒಪ್ಪಿದ ಮೇಲೆ ಶುಭದಿನ ಶುಭಮುಹೂರ್ತ ನೋಡಿ ಗಂಡಿನವರು ನಿಶ್ಚಯ ಕಾರಣಕ್ಕಾಗಿ ಹೆಣ್ಣಿನ ಮನೆಗೆ ಬರುವರು(ಐದು, ಒಂಬತ್ತು, ಹನ್ನೊಂದು ಅದಕ್ಕೂ ಹೆಚ್ಚಿಗೆ ಗಂಡಸರು, ಹೆಂಗಸರು,

ಮಕ್ಕಳು ಕೂಡಿ ಬರುವರು). ಹೆಣ್ಣಿನ ಮನೆಯಲ್ಲಿ ಅವರಿಗೆ ಸ್ವಾಗತ ಕೋರಿ ಕೂಡಿಸಲಾಗುವುದು. ನಿಶ್ಚಯ ಕಾರಣ ಸಾಯಂಕಾಲವೇ ಹೆಚ್ಚಾಗಿರುವುದರಿಂದ ಬೀಗರಿಗೆ ಊಟ ಮಾಡಿಸಿ ವಿಶ್ರಾಂತಿ ತೆಗೆದುಕೊಳ್ಳುವಂತೆ ಹೇಳುವರು. ಆನಂತರ ಊರ ಹಿರಿಯರಿಗೆ, ಕೇರಿಯ ಸುಮಂಗಲಿಯರನ್ನು ಅಕ್ಕ ಪಕ್ಕದ ಮನೆಯವರನ್ನು ಕರೆಯುವರು. ಒಂದು ಕಂಬಳಿ ಇಲ್ಲವೆ, ಜಮಖಾನ ಹಾಸಿ ಅದರ ಮೇಲೆ ಹಸೆ ಬರೆದು ಎದುರಿಗೆ ಕಂಚಕಳಸ(ಒಂದು ತಟ್ಟೆಯಲ್ಲಿ ಎರಡು ಆರತಿ, ಒಂದುಕುತ್ತಿಗೆ ತುಂಬಿಗೆ ಕುಂಕುಮದ ಭರಣಿಗೆ ಕಂಚಕಳಸ ಎನ್ನುತ್ತಾರೆ. ಅಡ್ಡಣಿಗೆಯ ಮೇಲೆ ಇಡುವರು. ಹೆಣ್ಣು ಒಳಗಿನಿಂದ ಬರುವವರೆಗೆ ಹಸೆಯ ಮೇಲೆ ಇಡುವರು. ಹೆಣ್ಣು ಒಳಗಿನಿಂದ ಬರುವವರೆಗೆ ಹಸೆಯ ಮೇಲೆ ಒಬ್ಬರನ್ನು ಕೂಡಿಸುವರು. ಮುಂದಿನ ಕಾರ್ಯಕ್ರಮ ಆರಂಭವಾಗುವುದು. ಹೆಣ್ಣನ್ನು ಬೇಗ ಕರೆತಂದು ಹಸೆಯ ಮೇಲೆ ಕೂಡಿಸುವರು. ಆಗ ಹಸೆಗೆ ಕರೆಯುವ ಹಾಡು ಹೇಳುತ್ತಾರೆ. ಉದಾಹರಣೆ–

ಮುಮ್ಮೇಳ : ಅಕ್ಕಿಯ ಹಸಿಗೋಳು ಎತ್ತಹೊಯ್ಯಲಿ ತಾಯಿ ಇಪ್ಪತ್ತು
ಅಂಕಣದ ಪಡಸಾಲಿ ಸೋಬಾನವ
ಹಿಮ್ಮೇಳ : ಇಪ್ಪತ್ತು ಅಂಕಣದ ಪಡಸಾಲಿ ಸೋಬಾನವ
ಮುಮ್ಮೇಳ : ಇಪ್ಪತ ಅಂಕಣದ ಪಡಸಾಲಿಯಾಗ ದಿಗ್ಗನ
ಹೊಯ್ಯ ಹಸಿಗೋಳು ಸೋಬಾನವ

ಎಂದು ಮುಂತಾಗಿ ಹಾಡುತ್ತ ಅವಳನ್ನು ಕೂಡಿಸಿ, ಕುಂಕುಮವಿಟ್ಟು, ಬಂಗಾರದ ಉಂಗುರ ಇನ್ನಿತರ ಒಡವೆ ತಂದಿದ್ದರೆ ಅವನ್ನೆಲ್ಲ ಹಾಕಿ, ಸೀರೆಗೆ ಕುಂಕುಮ ಹಚ್ಚಿ ಉಡಿಸುವವಳೇ ಮೊದಲು ತನ್ನ ತಲೆಯ ಮೇಲೆ ಸೀರೆಯ ಸೆರಗು ಹೊದ್ದುಕೊಂಡು ಆನಂತರ ಅವಳಿಗೆ ಉಡಿಸುವಳು(ಸೀರೆಯ ಸೆರಗು ತನ್ನ ತಲೆಯ ಮೇಲೆ ಹೊದ್ದುಕೊಳ್ಳುವ ಉದ್ದೇಶ ಸೀರೆಯ ಸೆರಗು ನೋಡುತ್ತಾ ಬೆರಗಾದ ಜನ ಹೆಣ್ಣಿನ ಸೌಂದರ್ಯ ನೋಡಿ ಅವಳಿಗೆ ದೃಷ್ಟಿ ಮಾಡದಿರಲಿ ಎಂಬುದಾಗಿರಬೇಕು.

**ಒಳಕಲ್ಲು ಪೂಜೆ**

ಒರಳ ಒನಕೆ ಮತ್ತು ಬೀಸುವ ಕಲ್ಲುಗಳು ಜನಪದರಿಗೆ ಅವಶ್ಯವಾಗಿ ಬೇಕಾಗುವ ಸಾಮಗ್ರಿಗಳ. ದಿನಬೆಳಗಾದರೆ ಬೀಸಲು ಬೀಸುವ ಕಲ್ಲು ಬೇಕು, ಕುಟ್ಟಲು ಒರಳು ಒನಕೆಗಳು ಬೇಕಾಗುವವು. ಅವುಗಳನ್ನು ಜನಪದರು ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಕುಟ್ಟುವ ಒರಳು ಬೀಸುವ ಕಲ್ಲುಗಳು ಆಹಾರ ತಯಾರಿಸುವ ಸಾಧನಗಳು. ಅವುಗಳೂ ಕೂಡ ಪ್ರಾಚೀನರಿಗೆ ಪೂಜ್ಯವೆಂದು ಕಂಡಿರಬೇಕು. ಬೆಳೆಯುವ ಭೂಮಿಯಂತೆ ಆಹಾರ ತಯಾರಿಕೆಯ ಸಾಧನಗಳೂ ಪವಿತ್ರವಾದಗಳೆಂದು ಕಂಡಿರಬೇಕು. ದೈನಂದಿನ ಕಾರ್ಯ ಚಟುವಟಿಕೆಯಲ್ಲಿ ಸಮಯ ಸಿಗದೆ ಮದುವೆಯ ಸಿದ್ಧತೆಯ ಕಾಲದಲ್ಲಿ ಅವುಗಳಿಂದಾಗುವ ಬಹು ಉಪಯೋಗವನ್ನು ಲಕ್ಷಿಸಿ ಪೂಜಿಸಿರಬೇಕು. ಅದೇ ರೀತಿ ಆಡುಗೆ ಮಾಡುವ ಒಲೆಯನ್ನು ಕೂಡ ಪೂಜಿಸುತ್ತಾರೆ.

ಒಳಕಲ್ಲು ಪೂಜೆಯ ದಿನದಂದು, ಒರಳು, ಒನಕೆಗಳನ್ನು ಚೆನ್ನಾಗಿ ತೊಳೆದು, ಸುಣ್ಣ ಮತ್ತು ಜಾಜಗಳಿಂದ ಕೆಂಪು ಬಿಳಿಸಾಲುಗಳನ್ನು ಒಂದರ ಬದಿಗೆ ಇನ್ನೊಂದು ಬರುವಂತೆ ಬರೆಯುತ್ತಾರೆ. ಒಂದರ ಬಿಳಿವಸ್ತ್ರದಲ್ಲಿ ಅರಿಶಿಣದ ತುಂಡು ಕಟ್ಟಿ ಅದನ್ನು ಒನಕೆ ಕಟ್ಟುವರು. ಅದರಂತೆ ಬೀಸುವ

ಕಲ್ಲು ಸ್ವಚ್ಛವಾಗಿ ತೊಳೆದು ಕೆಂಪು ಬಿಳಿ ಎಲೆಗಳು ಬರುವಂತೆ ಸುಣ್ಣ ಜಾಜದಿಂದ ಗೆರೆ ಎಳೆಯುವರು.

ಒಂದು ಬಿಳಿ ವಸ್ತ್ರದಲ್ಲಿ ಅರಿಶಿಣದ ತುಂಡು ಕಟ್ಟಿ ಬೀಸುವ ಕಲ್ಲಿನ ಬಾಯಿಗೆ ಕಟ್ಟುವರು. ಇದಾದ ಮೇಲೆ ಕುಟ್ಟಲು ಐವರು ಮುತ್ತೈದೆಯರು, ಬೀಸಲು ಐವರು ಮುತ್ತೈದೆಯರು ಒರಳು ಕಲ್ಲಿಗೆ ಕುಂಕುಮ ವಿಭೂತಿಗಳಿಂದ ಪೂಜಿಸಿ, ಹೂ ಏರಿಸಿ ಊದಿನಕಡ್ಡಿ ಬೆಳಗಿ ತಾವು ಹೂವಿನ ದಂಡಿಯನ್ನು ತಲೆಗೆ ಮುಡಿದುಕೊಂಡು ವೀಳ್ಯಲೆಯ ಮೇಲೆ ನೆನೆಯಿಸಿದ ಕಡಲೆ ಬೇಳೆಗಳನ್ನು ಇಟ್ಟು ಪೂಜಿಸಿ ಹಾಡುತ್ತ ಕುಟ್ಟುವರು. ಒರಳಲ್ಲಿ ಅಕ್ಕಿ ಕಾಳಿ ಒನಕೆಯಿಂದ ಕುಟ್ಟಿದರೆ ಬೀಸುವವರು, ಗೋಧಿ ಬೀಸುವರು. ಆಗ ಈ ರೀತಿ ಹಾಡು ಹೇಳುತ್ತಾರೆ.

ಕಲ್ಲ ಪೂಜಿಗಿ ಯಾರನು ಕರಸ್ಯಾರ
ಮೇಲ್ ಮಾಳಿಗಿಯವರಿಗಿ ಸುಯ್ ಸುಯ್ ಸುವ್ವಾಲೆ
ಒರಳ ಪೂಜಿಗಿ ಯಾರನ್ನು ಕರಸ್ಯಾರ
ಸಾಲ ಮಾಳಿಗಿ ಮನೆಯವರ ಸುಯ್ ಸುಯ್ ಸುವ್ವಾಲೆ

ಗೋಧಿಯ ಕಲ್ಲಿಕ ನಾ ಯಾರನು ಕರಸಲೆ
ಗೋದಮನಿ ಮಾಳಿಗಿಯವಳ
ಲಕ್ಷ್ಮೀನ ಗೋಧಿ ಕಲ್ಲಿಗಿ ಕರಸ್ಯಾರ ಸುಯ್ ಸುಯ್ ಸುವ್ವಾಲೆ
(ಯಮನಮ್ಮ ಮಲ್ಲೇಶಪ್ಪ, ತಾವರೆಗೆರೆ)

ವರನ ಅಕ್ಕ ತಂಗಿಯವರಿಗೆ ಅಣ್ಣ ತಮ್ಮನ ಮದುವೆಯಲ್ಲಿ ಹೆಚ್ಚಿನ ಗೌರವ. ಅವರನ್ನು ಅತಿ ಪ್ರೀತಿಯಿಂದ ಕರೆದುಕೊಂಡು ಬಂದಿದ್ದಾರೆಂದು ಈ ಪದ್ಯದಲ್ಲಿದೆ.

ಕಲ್ಲೋಳ್ಳ ಪೂಜಿಗಿ ನೀನ್ಯಾರು ಕರಸ್ಯಾರ
ಪಿಲ್ಲೇದ ಕಾಲ ಮಗಳೀಗಿ ರಾಜಮ್ಮನ
ಪಲ್ಲಕ್ಕಿ ಕೊಟ್ಟು ಕರಸ್ಯಾರ[೨೭]

ಈ ರೀತಿಯಾಗಿ ಹಾಡುತ್ತ ಒರಳು ಕಲ್ಲಿನ ಪೂಜೆ ಮಾಡುವರು. ಪೂಜೆಯಾದ ಮೇಲೆ ಅವುಗಳನ್ನು ಹೊಸ ಸೀರೆಯಿಂದ ಹೊದಿಸಿ ಮುಚ್ಚಿಡುವರು.

ಹಿಂದಿನ ಕಾಲದಲ್ಲಿ ಕುಟ್ಟುವ ಬೀಸುವ ಗಿರಣಿಗಳು ಇದ್ದಿರಲಿಲ್ಲ. ಆದ್ದರಿಂದ ಭತ್ತ, ಗೋಧಿ ಮೊದಲಾದ ಧಾನ್ಯಗಳು ಕುಟ್ಟುವ ಸಂದರ್ಭದಲ್ಲಿ ಬೇಸರ ಕಳೆಯಲು ಹಾಸ್ಯ, ವಿನೋದಗಳನ್ನು ಮಾಡುತ್ತ ಕೆಲಸ ಮಾಡಬೇಕಾಗುತ್ತಿತ್ತು. ಆ ಕಾರಣದಿಂದ ನೆರೆಹೊರೆಯವರನ್ನು ಬಂಧುಗಳನ್ನು ಕರೆಯುತ್ತಾರೆ. ಬಡವರು ಶ್ರೀಮಂತರೆನ್ನದೆ ಸಾಮಾಜದ ಕೆಲಸ ಕಾರ್ಯಗಳೆಂಬಂತೆ ಒಂದು ಮನೆಯ ಸಮಾರಂಭವಿದ್ದರೂ ಸಂಘಟನೆಯಂತೆ ಎಲ್ಲರೂ ಭಾಗವಹಿಸಿ ಕೆಲಸ ಮಾಡುವ ರೀತಿ ಇಲ್ಲಿ ವ್ಯಕ್ತವಾಗುತ್ತದೆ. ಆದರೆ ಈಗ ಕುಟ್ಟುವ ಬೀಸುವ ಶ್ರಮವಿಲ್ಲದೆ ಗಿರಣಿಗಳಲ್ಲಿ ಬೀಸಿಕೊಂಡು ಬರುವರು. ಆದರೂ ಶಾಸ್ತ್ರಕ್ಕೆ ಈ ಸಂಪ್ರದಾಯವಿದೆ. ನೆರೆಹೊರೆಯವರನ್ನು ಕರೆದು, ಬಂಧು

ಬಳಗದವರ ಜೊತೆಗೂಡಿ ಹೆಂಗಸರೆಲ್ಲ ಕೆಲಸಕಾರ್ಯ ಮಾಡಲು, ಇದೊಂದು ಮದುವೆ ಸಿದ್ಧತೆಯ ಸಂಪ್ರದಾಯವಾಗಿ ಉಳಿದಿದೆ.

**ಮದುಮಕ್ಕಳಿಗೆ ಅರಿಶಿಣ ಹಚ್ಚುವದು**

ಅರಿಶಿಣ ಹಚ್ಚುವುದು ಲಗ್ನ ಕಾಲದ ಪ್ರಥಮ ದೀಕ್ಷೆ. ಮುತ್ತೈದೆಯರು ನೆರೆದು ಹಾಡು ಹೇಳುತ್ತ ವೀಳ್ಯದೆಲೆಯಿಂದ ಎಣ್ಣೆಯನ್ನು ಹಚ್ಚಿ, ಮೈಗೆ ಅರಿಶಿಣವನ್ನು ಬಳಿದು ಸ್ನಾನ ಮಾಡಿಸುವರು. ಈ ವಿಧಾನವು ವಧುವರರಿಗೆ ಬೇರೆ ಬೇರೆ ಸ್ಥಳಗಳಲ್ಲಿ ನೆರವೇರಿಸುವರು. ಆಗ ಮಂಗಲವಾದ್ಯಗಳು ಮೊಳಗುವವು. ಮೊದಲು ವರನಿಗೆ, ಹಿಂದುಗಡೆ ವಧುವಿಗೆ ಅರಿಶಿಣ ಹಚ್ಚುವರು. ವಧು–ವರರು ಪಾರ್ವತಿ–ಶಿವ ಸ್ವರೂಪವೆಂದು ಭಾವಿಸುವರು. ನೇಯ್ಗೆಣ್ಣೆ ಶಿವ-ಪಾರ್ವತಿಯರಿಗೇ ಎಣ್ಣೆ ಪೂಜಿಸುವರೇನೋ ಎನ್ನುವಂತೆ ಆಸ್ಥೆ ವಹಿಸುವರು. ಇದೆಲ್ಲ ವರನ ಸಡಗರವಾದ ಬಳಿಕ "ಹಂಚಗೂಣಿ, ಬೆಂಚಗೂಣಿ ಮುತ್ತಿನ ನಾಗುರಣಿ ಕುಸುಮಲ್ಲಿಯಾದ ಭೂದೇವಿಗೆ, ಮುತ್ತಿನ ಬಚ್ಚಿಟ್ಟ ಮುತ್ತೈದೆಯರೆಲ್ಲ" ಎಣ್ಣೆ ಹಚ್ಚುವುದಕ್ಕೆ ಸಜ್ಜಾಗುವರು. ಗಂಜಿಯ ಸೀರೆಯುಟ್ಟ, ಗಂಧದ ಬಟ್ಟೆಟ್ಟ, ಪಲ್ಲೆ ಕಾಲುಂಗರಿಟ್ಟ, ಮುಡಿಸಣ್ಣ ಮುತ್ತಿನ ನತ್ತನಿಟ್ಟ ನಲ್ಲೆಯರೈವರು ಕಂಚಿನ ಬಟ್ಟಲಲ್ಲಿ ಮಿಂಚೆಣ್ಣೆ ತಕ್ಕೊಂಡು, ಬೆಳ್ಳಿಯ ಬಟ್ಟಲಲ್ಲಿ ಎಳ್ಳೆಣ್ಣೀ ತಕ್ಕೊಂಡು ಹವಳಸರ, ಬವಳಸರ ಮ್ಯಾಲ ಮುತ್ತಿನಸರ ತಾಯಿತಲ್ಲಾವಳ ತಾಳಿ ಕಟ್ಟಿಕೊಂಡು ವಧುವಿಗೆ ಎಣ್ಣೆ ಅರಿಶಿಣ ಹಚ್ಚುವರು.

**ದೇವರಕಾರ್ಯ ವಿಧಾನ**

ಐವರು ಮುತ್ತೈದೆಯರು ಕುಂಬಾರನ ಮನೆಯಿಂದ ಹೊಸ ಕೊಡಗಳನ್ನು ತಂದು ನೀರು ತುಂಬಿಕೊಂಡು ಬರುವರು. ಆ ಕೊಡಗಳು ಎಂಥವು. ಎಡಬಲದಲ್ಲಿ ಕಪ್ಪುರದ ತಿಪ್ಪೆಯುಳ್ಳ ಮನೆಯ ಕುಂಬಾರಣ್ಣ ಮೊಸರು ಬೋನವುಂದು ಹಾರಿ ಹಾರಿ ಕೆಸರು ತುಳಿದು ಸಿದ್ದಮಾಡಿದ ಐರಾಣಿ ಕೊಡಗಳಿಗೆ, ಕಡಗದ ಕೈಯುಳ್ಳ ಕುಂಬಾರವ್ವನು ಬಾಳಿ ಬನದ ಅರಗಿಳಿಯನ್ನು ಬರೆದಿದ್ದಾಳೆ. ಅಂಥ ಐರಾಣಿ ತಂದ ಬಳಿಕ ಮುತ್ತೈದೆಯರು ಒಂದು ಮಡಿ ಬಟ್ಟೆಯ ಮೇಲೆ ನಂದಿಯ ಮೂರ್ತಿಯಿಟ್ಟು ಕಡಲೆ ಹಿಟ್ಟಿನ ಮುದ್ದೆಯನ್ನು ಕೈಯಲ್ಲಿ ಹಿಡಿದು ದುಂಡುಗಿನ ಗುಳಿಗೆ ಮಾಡಿ ಆ ಮೂರ್ತಿಯ ಮೇಲೆ ಮಳೆಗೆರೆದಂತೆ ಎಸೆಯುವರು. ಅದಕ್ಕೆ "ನಂದಮಾಕ" ವಿಧಾನವೆನ್ನುವರು.[೨೮] ಮದುವೆ ಹಾಡುಗಳಿಂದ ವಿವಾಹದ ಸಂದರ್ಭ, ಸಂಸ್ಕೃತಿ ಅರ್ಥವಾಗುತ್ತದೆ.

**ಹಂದರ ಹಾಕುವುದು**

ಮದುವೆ ಮನೆಯ ಅಂಗಳದಲ್ಲಿ ಹಂದರ ಹಾಕುತ್ತಾರೆ. ತಲಬಾಗಿಲ ಬಲಭಾಗದಲ್ಲಿ ಪೂರ್ವದಿಕ್ಕಿಗೆ ಮುಖವಾಗಿರುವಂತೆ ಹಂದರದ ವ್ಯವಸ್ಥೆ ಮಾಡುವರು. ಒಂದು ಚಚ್ಚಾಕಾಕಾರದ ಸ್ಥಳದಲ್ಲಿ ನೆಲವನ್ನು ಸಮಗೊಳಿಸಿ ಬಸರಿಯ, ಆಲದ ಮರದ ಉದ್ದನೆ ಮೇಲೆ ಚಪ್ಪರವಾಗುವಂತೆ ಅಡ್ಡಾದಿಡ್ಡಿಯಾಗಿ ಪುಂಡಿಕಟ್ಟಿಗೆ ಟೊಂಗೆಗಳು ಕಟ್ಟುವುದರಿಂದ ಹಸಿರು ಚಪ್ಪರವಾಗಿ ಕಾಣುತ್ತದೆ. ಈ ಕಂಬಗಳ ಮಧ್ಯದಲ್ಲಿರುವ ಸ್ಥಳದಲ್ಲಿ ನೆಲಮಟ್ಟದಿಂದ ಸ್ವಲ್ಪ ಎತ್ತರವಾಗಿ ಮಾಡಿ ಕಟ್ಟೆಯಂತೆ ಕಟ್ಟುವರು. ಇದಕ್ಕೆ 'ಹಸಿಗಟ್ಟಿ', 'ಹಸೆಯಕಟ್ಟಿ', 'ಹಂದರಕಟ್ಟಿ' ಎಂದು ಕರೆಯುವರು. ಹಿಂದಿನ ಗೋಡೆಗೆ ಸುಣ್ಣ ಬಳಿದು ಜಾಜದಿಂದ ಸೂರ್ಯಚಂದ್ರ ಬಳ್ಳಿ ಮೊದಲಾದ ಚಿತ್ರ ಬಿಡಿಸುವರು.

ಹಂದರ ಹಾಕಿದವರಿಗೆ ಸಿಹಿಯೂಟ ಬಡಿಸುವರು. ಮುಂಭಾಗದ ಮಧ್ಯದಲ್ಲಿ ನೊಗ ನೆಡುತ್ತಾರೆ. ಈ ಕಂಬದ ಹತ್ತಿರ ಮುಂದೆ ಹಾಲಗಂಬ ತಂದಾಗ ನೆಡುವರು, ನೊಗಕ್ಕೆ ಒಂದು ಮಗಿಯ ಮೇಲೆ ಮುಚ್ಚಳವಿಟ್ಟು ಕಟ್ಟಲಾಗಿರುತ್ತದೆ. ಅದರಲ್ಲಿ ದೀಪ ಹಚ್ಚಿರುತ್ತಾರೆ. ಮದುವೆಯ ಎಲ್ಲ ಕಾರ್ಯಕಲಾಪ ಮುಗಿಯುವವರೆಗೆ ದೀಪ ಉರಿಯುತ್ತ ಇರುತ್ತದೆ. ಹಂದರ ಹಾಕುವುದು ಮದುವೆಯ ಮುಖ್ಯ ಕಾರ್ಯದಲ್ಲಿ ಒಂದಾದರೂ ಇದಕ್ಕೆ ಹಾಡುಗಳಿಲ್ಲ. ಬಹುಶಃ ಹೆಣ್ಣುಮಕ್ಕಳ ಓಡಾಟ ಇದರಲ್ಲಿ ಇರುವುದಿಲ್ಲವಾದ ಕಾರಣ ಹಾಡುಗಳು ಇರಲಿಕ್ಕಿಲ್ಲ. ಇಷ್ಟೆಲ್ಲ ಪೂರ್ವ ತಯಾರಿಗಳಾದ ಮೇಲೆ ವಧು(ಹೆಣ್ಣನ್ನು) ಕರೆತರುವ ಪ್ರಸ್ತುತ ಸಂದರ್ಭ ಕಂಡುಬರುತ್ತವೆ.[೨೯]

### ೫.೩.೧. ಸೋಬಾನ ಪದಗಳು

ಮದುವೆಗೆ ಸಂಬಂಧಿಸಿದಂತೆ ಎಲ್ಲಾ ಕಾರ್ಯಕ್ರಮಗಳಲ್ಲಿ ಗುಂಪು ಗುಂಪಾಗಿ ಸೇರಿದ ಹೆಂಗಸರು ಪದ ಹೇಳುತ್ತಾರೆ. ಈ ಪದಗಳನ್ನು ಸೋಬಾನದ ಪದಗಳೆಂದು ಕರೆಯುತ್ತಾರೆ. ಒಂದು ವಾರದ ಮದುವೆಯೂ ಇದ್ದಕಾಲ ಇತ್ತು. ಇಂತಹ ಸಂದರ್ಭದಲ್ಲಿ ಇಡೀ ಊರಿಗೆ ಊರೇ ಭಾಗವಹಿಸುತ್ತಿತ್ತು. ಬಂಧುಗಳು, ರಕ್ತ ಸಂಬಂಧಿಗಳು, ಹೆಣ್ಣು, ಗಂಡಿನ ಕಡೆಯವರು, ಬೇಕಾದವರು ಒಂದು ಕಡೆಗೆ ಸೇರಿ ಎಲ್ಲರೂ ಒಟ್ಟಾಗಿ ಸಂತೋಷ ಪಡುವುದು ಇಲ್ಲಿನ ಮುಖ್ಯವಾದ ಧ್ಯೇಯವಾಗಿತ್ತು. ಶಿವ-ಪಾರ್ವತಿಯ ಮದುವೆಗೆ ಸಂಬಂಧಿಸಿದ ಪದಗಳನ್ನು ಹೇಳುವ ಹೆಂಗಸರು ಇಲ್ಲಿನ ಹೆಣ್ಣು–ಗಂಡು ಕೂಡ ಅಷ್ಟೇ ಪ್ರಮಾಣದಲ್ಲಿ ಮುಖ್ಯರು ಎನ್ನುವ ಭಾವನೆಯನ್ನು ಉಂಟುಮಾಡುತ್ತಿದ್ದರು. ಶಾಸ್ತ್ರದ ನೀರು ತರುವುದು, ಗಂಗೆಯ ಬಳಿ ಕಳಸ ಪೂಜಿಸುವುದು, ಶಾಸ್ತ್ರದ ಭತ್ತ ಕುಟ್ಟುವುದು, ವೀಳ್ಯೆಶಾಸ್ತ್ರ ಮಾಡುವುದು. ಹಿರಿಯರನ್ನು ಕರೆದು ವೀಳ್ಯ ನೀಡುವುದು, ಹಸೆ ಬರೆಯುವಿಕೆ, ಹಸೆಗೆ ಕರೆಯುವುದು, ಅರಿಶಿಣದ ಸಿದ್ಧತೆಯಲ್ಲಿರುವುದು, ಅರಿಶಿಣದ ಎಣ್ಣೆ ಇಟ್ಟು ಹೆಣ್ಣು ಗಂಡುಗಳಿಗೆ ಮಜ್ಜನ ಮಾಡಿಸುವುದು, ಗಂಡು ಹೆಣ್ಣುಗಳ ಆಗಮನ ಹಾಗೂ ನಾನಾ ಸಂದರ್ಭಗಳಲ್ಲಿ ಹೆಣ್ಣು ಗಂಡುಗಳಿಗೆ ಸೇಸೆ ಇಡುವುದು, ಬಾಗಿಲು ತಡೆಯುವುದು, ಹಣ್ಣು ಒಪ್ಪಿಸುವುದು, ತವರು ಬಿಡುವ ಹೆಣ್ಣು ಕಂಡು ಅಪ್ಪ-ಅಣ್ಣಂದಿರು ಅಳುವುದು, ಓಕಳಿ ಆಡುವುದು, ಸೊಸೆ ಮರಕ್ಕೆ ನೀರು ಹೊಯ್ಯುವುದು. ಹೀಗೆ ಈ ಎಲ್ಲಾ ಸಂಬಂಧದ ವಿವರಗಳುಳ್ಳ ಸೋಬಾನೆ ಪದಗಳನ್ನು ಬಿಡಿ ಬಿಡಿಯಾಗಿ ಸರಳವಾಗಿ ಹಾಡುತ್ತಾರೆ.

### ಸೋಬಾನ ಪದ ಹಿನ್ನೆಲೆ

ಶುಭವನ್ನು ಕೋರುವುದು ಶೋಬನ. ಸೋಬನವೆಂತಲೂ ಕರೆಯುತ್ತಾರೆ. ಸಂತಾನಫಲ ಬದಲಿಗೆ ಎಂಬ ಶುಭ ಹಾರೈಕೆಯೇ ಸೋಬನವಾಗಿದೆ. ಬಾಲ್ಯ ವಿವಾಹ ಪದ್ಧತಿ ಇರುವಾಗ ಮದುವೆಯಾದ ಮೇಲೆ ತವರಿನಲ್ಲಿಯೇ ಹೆಣ್ಣು ಇರುತ್ತಿದ್ದಳು. ಅವಳು ಮೈನೆರೆದ ವಿಷಯವನ್ನು ಗಂಡನ ಮನೆಯವರಿಗೆ ಹೇಳಿ ಕಳುಹಿಸುತ್ತಿದ್ದರು. ಹದಿನಾರನೆಯ ದಿನ ಅಥವಾ ಎರಡು ಮೂರು ತಿಂಗಳ ನಂತರ ಈ ಕಾರ್ಯ ಇಟ್ಟುಕೊಳ್ಳತ್ತಿದ್ದರು. ಈಗ ವಯಸ್ಕರಾದ ಮೇಲೆಯೇ ಮದುವೆಗಳು ಜರುಗುತ್ತವೆ. ಆದಕಾರಣ ಮದುವೆಯ ದಿನದಂದು ಅಥವಾ ಎರಡು ಮೂರು ದಿನಗಳೊಳಗಾಗಿ ಸೋಬಾನ ಇಟ್ಟುಕೊಳ್ಳುವುದುಂಟು. ಹಳ್ಳಿಯಲ್ಲಿ ಸೋಬಾನ ಮಾಡುವ ಐದಾರು

ದಿನ ಮೊದಲು ಗಂಡ ಹೆಂಡತಿಯರನ್ನು ಸಿಂಗರಿಸಿದ ಮಂಟಪದಲ್ಲಿ ಕೂಡಿಸಿ ಹಾಡಿಸುವರು. ಕೊನೆಯ ದಿನ ತಮ್ಮ ಆಪ್ತ ಬಂಧುಗಳನ್ನು ಊಟಕ್ಕೆ ಕರೆಯುವರು. ಅಳಿಯನಿಗೆ, ಮಗಳಿಗೆ ಒಂದು ಜೊತೆ ಬಟ್ಟೆಯನ್ನು ಹೆಣ್ಣಿನ ತಂದೆಯೇ ತರಬೇಕು. ಹಾಸಿಗೆ ಮಂಚ ಕೂಡ ಕೊಡುವರು. ಹೆಣ್ಣಿಗೆ ಗಂಡನ ಮನೆಯವರು ಸೀರೆ, ಕುಪ್ಪಸ ತರುವರು. ಗೋಧಿ ಉಡಿಯಕ್ಕಿ ಹಾಕಿ ತೆಂಗಿನ ಫಲಗಳನ್ನು ಉಡಿಯಲ್ಲಿ ಹಾಕುವರು. ಅವಳು ಮೈನೆರೆದಾಗ ಯಾರು ನೀರು ಹಾಕಿರುತ್ತಾರೋ, ಅವಳಿಗೆ ಗಂಡನ ಮನೆಯವರು ಒಂದು ಸೀರೆ ಕೊಡಬೇಕು(ಅದನ್ನು ಮುಟ್ಟೆರದ ಸೀರೆ ಎನ್ನುತ್ತಾರೆ). ಅಂದು ಕೂಡಿಸಿ ಸೋಬಾನೆ ಹಾಡುಗಳೊಂದಿಗೆ ಆರತಿ ಮಾಡಿ ಗಂಡ ಹೆಂಡತಿಯರ ಹೆಸರು ಕೇಳುವರು. ಆನಂತರ ದೇವರ ಮನೆಯಲ್ಲಿ ದೇವರಿಗೆ ನಮಸ್ಕರಿಸಿ ದಂಪತಿಗಳು ಕೋಣೆ ಪ್ರವೇಶಿಸುತ್ತಾರೆ. ಈಗೀಗ ಹಳ್ಳಿಗಳಲ್ಲೂ ಮದುಮಕ್ಕಳನ್ನು ಕೂಡಿಸಿ ಹಾಡುವುದು ತುಂಬ ಕಡಿಮೆಯಾಗಿದೆ. ಕೆಲವರ ಮನೆತನದಲ್ಲಿ 'ಸೋಬಾನ' ಮಾಡುವ ಸಂಪ್ರದಾಯವೇ ಇರುವುದಿಲ್ಲ. ಮದುವೆಯಾದ ಮೇಲೆ ಶುಭದಿನದಂದು ದೇವರಿಗೆ ಹೋಗಿ ಬಂದ ಮೇಲೆ ದಂಪತಿಗಳನ್ನು ಒಂದುಗೂಡಿಸುತ್ತಾರೆ. ಸೋಬಾನದ ಉದ್ದೇಶ ಮದುವೆಯಾದ ದಂಪತಿಗಳು ಒಂದುಗೂಡುವುದು, ಸಂತಾನವನ್ನು ಪಡೆಯುವುದು ಮತ್ತು ಒಳ್ಳೆಯ ಗೃಹಸ್ಥರಾಗುವುದಕ್ಕೆ ಅಡಿಪಾಯ ಹಾಕುವುದಾಗಿದೆ. ಸೋಬಾನೆ ಹಾಡುಗಳು ತುಂಬಾ ವೈವಿಧ್ಯಮಯವಾಗಿರುತ್ತವೆ. ಮದುವೆಯ ಇತರ ಯಾವುದೇ ಹಾಡುಗಳಿಗಿಂತ ಸೋಬಾನೆ ಹಾಡುಗಳನ್ನು ಹಾಡುವ ರೀತಿ ಧಾಟಿಗಳಲ್ಲಿ ವೈವಿಧ್ಯತೆ ಇದೆ. ಈ ಸಂದರ್ಭದಲ್ಲಿ ಹಾಡುವ ಹಾಡುಗಳು ಕಥನ, ಕವನ, ನೀತಿ ಪದಗಳು, ಹಾಸ್ಯದ ಹಾಡುಗಳು, ಮಹಾಭಾರತದ, ರಾಮಾಯಣದ ಪ್ರಸಂಗಗಳು, ಶರಣರ ಮಹಾತ್ಮೆಯನ್ನು ಎತ್ತಿ ತೋರುವ ಹಾಡುಗಳು, ಹೆಣ್ಣು ಶೀಲ ರಕ್ಷಿಸಿಕೊಂಡ ಪತಿವ್ರತೆಯರ ಕಥೆಗಳು ಇರುತ್ತವೆ.[೨೦]

### ಸೋಬಾನೆ ಪದ

ಅಕ್ಕತಂಗಿರ ನಾವು ಒಂದು ಹೊತ್ತಿಗೆ ಎದ್ದು
ಹೂವಿನ ಸರ ಉದಿನ ಕಡ್ಡಿ ಸೋಬಾನವ ।
ಹೂವಿನ ಸರ ಊದಿನ ಕಡ್ಡಿ ಗವಿಸಿದ್ದನ
ಪೂಜೆದಿತ್ತಿಗೆ ಒಯ್ದೇವ, ಸೋಬಾನವ ॥

ತಾಯಿ ಮಕ್ಕಳು ನಾವು ಒಂದೊತ್ತಿಗೆ ಎದ್ದು
ಒಡೆಯಕಾಯಿ ಸುಡುವ ಗುಗ್ಗಳ ಸೋಬಾನವ ।
ಪಡೆಯಕಾಯಿ ಸುಡುವ ಗುಗ್ಗಳ ಗವಿಸಿದ್ದನ
ಪೂಜೆದೊತ್ತಿಗೆ ಒಯ್ದೇವ ಸೋಬಾನವ ॥

ಅಕ್ಕ ತಂಗ್ಯಾರ ನಾವು ಜೊತಿಲಿ ಬರುವಾಗ
ಉತ್ತತಿ–ಹಣ್ಣು ಉಡುಲಾಗ ಸೋಬಾನವ ।
ಉತ್ತತಿ ಹಣ್ಣು ಉಡುಲಾಗ ಕಟಗೆಂದು
ಉಚ್ಚಾಯದ ಮೇಲೆ ಒಗೆದೇವ ಸೋಬಾನವ ॥

ತಾಯಿ ಮಕ್ಕಳ ನಾವು ಜೊತಿಲಿ ಬರುವಾಗ
ಬಾಳೆಹಣ್ಣು ಉಡುಲಾಗ ಸೋಬಾನವ ।
ಬಾಳೆಹಣ್ಣು ಉಡುಲಾಗ ಗವಿಸಿದ್ದನ ತೇರಿನ
ಮ್ಯಾಲೆ ಒಗದೇವ ಸೋಬಾನವ ॥

ಅಪ್ಪ ಗವಿಸಿದ್ದನ ನಿನ ತೇರ್‍ಯಾರ ಕಟ್ಯಾರ
ಇಲಕಲ್ಲ ಬಡಿಗಿ ಲಕ್ಷಣ ಸೋಬಾನವ ।
ಇಲಕಲ್ಲ ಬಡಗಿ ಲಕ್ಷಣ ಕಟ್ಟಿದ ತೇರ
ಬೇಗಿನ ವೆಳ್ಯಾಕ ಎಳೆದಾವ ಸೋಬಾನವ ॥

ಮಠನೋಡ ಮಠನೋಡ ಮಠದ
ಬಾಗಿಲ ನೋಡ ಕಟ್ಟಾರೋ ರುದ್ರಾಕ್ಷಿಕದಾ
ನೋಡ ಸೋಬನವ ।
ಕಟದಾರೋ ರುದ್ರಾಕ್ಷಿ ಕದನೋಡ ಗವಿಸಿದ್ದನ
ಮದವ್ಯೆತಿ ಬಾಳೆ ವನದಾಗ ಸೋಬಾನವ ॥

ಹೊನ್ನಿಯ ಹುಳುದಂತೆ ಮುನ್ನೂರು ದಿವಟಿಗಿ
ಹೊನ್ನ ಕೊಪ್ಪಳದ ಬಯಲಾಗ ಸೋಬಾನ
ಹೊನ್ನ ಕೊಪ್ಪಳದ ಬಯಲಾಗ ನನ ಗವಿಸಿದ್ದ
ಹೋಗಿ ಬನ್ನಿಯ ಮುಡಿದು ಬರತಾನ, ಸೋಬಾನವ ॥[೩೧]

ಈ ಮೇಲಿನ ಸೋಬಾನದ ಪದವನ್ನು ಓದಿ ವಿಮರ್ಶೆ ಮಾಡಿದಾಗ ಹೀಗೆ ತಿಳಿಯುತ್ತದೆ. ಹಿಂದೆ ಒಂದೇ ದೊಡ್ಡ ಅವಿಭಕ್ತ ಕುಟುಂಬ ಇರುತ್ತಿತ್ತು. ಅಕ್ಕ-ತಂಗಿ(ಸಹೋದರರ ಹೆಂಡದಿರು) ತಾಯಿ-ಮಕ್ಕಳು ನಸುಕಿನಲ್ಲಿಯೇ ಎದ್ದು ಸ್ನಾನ ಮಾಡಿ, ಮಡಿ ಹಿಡಿಯಿಂದ ಅಪ್ಪ-ಅಣ್ಣ ಗವಿಸಿದ್ದನ ಮಠಕ್ಕೆ ಹೂವಿನ ಸರ-ಊದುಬತ್ತಿ, ಸುಡುವ ಗುಗ್ಗಳ, ಉತ್ತತ್ತಿ, ಬಾಳೆಹಣ್ಣು ಇತ್ಯಾದಿ ಪೂಜಾ ಸಾಮಗ್ರಿ ಒಯ್ದು ಪೂಜೆಯ ವೇಳೆಗೆ ಮಠಕ್ಕೆ ಹೋಗುತ್ತಿದ್ದುದನ್ನು ಗಮನಿಸಿದಾಗ ಅಲ್ಲಿ ತ್ರಿಕಾಲ ಪೂಜೆ ನಡೆಯುತ್ತಿತ್ತು ಎನ್ನುವುದು ನಮಗೆ ತಿಳಿದುಬರುತ್ತದೆ. ಒಂದು ತೇರು ಹಾಗೂ ಇನ್ನೊಂದು ಉತ್ಸವ ಮೂರ್ತಿ(ಉಚ್ಚಯ) ಎರಡಕ್ಕೂ  ಹಣ್ಣು, ಉತ್ತತ್ತಿ ಒಗೆಯುವುದು ನಿತ್ಯದ ರೂಢಿಯಾಗಿತ್ತು. ಗವಿಮಠದ ತೇರನ್ನು ಪ್ರಥಮವಾಗಿ ಇಲಕಲ್ಲಿನ ಬಡಿಗೇರ ಲಕ್ಷ್ಮಣ ಎನ್ನುವವರು ತಯಾರಿಸಿದುದು ಕೂಪ ಇಲ್ಲಿ ಕಂಡುಬರುತ್ತದೆ. ಆ ತೇರನ್ನು ಜಾತ್ರೆಯಲ್ಲಿ ಅಷ್ಟೆ ಅಲ್ಲ ವಿಶೇಷ ಸಂದರ್ಭದಲ್ಲಿ ಎಳೆಯುತ್ತಿದ್ದರು ಎಂಬುದು ಇಲ್ಲಿ ಗಮನಾರ್ಹ(ಈಗಲೂ ಹರಕೆ ತೇರು ಇದೆ). ಇದನ್ನು ಅಮವಾಸ್ಯೆ ದಿನ ಮಾತ್ರ ಭಕ್ತರು ಬೇಡಿಕೊಂಡು ಎಳೆಯುತ್ತಾರೆ. ದೊಡ್ಡ ತೇರನ್ನು ಜಾತ್ರೆ ಸಂದರ್ಭದಲ್ಲಿ ಮಾತ್ರ ಎಳೆಯುವ ರೂಢಿ ಆಗಿದೆ. ಅದೇ ಬಡಿಗೇರ ಲಕ್ಷ್ಮಣನು ಮಠದ ಕದಗಳ ಮೇಲೆ ಲಕ್ಷಣವಾಗಿ ರುದ್ರಾಕ್ಷಿ ಸರಗಳನ್ನು ಕೆತ್ತಿದ್ದಾನೆ. ಮಠದ ಸುತ್ತಲೂ ಬಾಳೆ ತೋಟವಿತ್ತು. ಇದರಿಂದ ಮಠದ ದೃಶ್ಯ ರಮಣೀಯವಾಗಿ ಕಾಣುವ ಅಂಶ ತಿಳಿಯುತ್ತದೆ.

ತೇರು ಎಳೆಯುವಾಗ ಹೊನ್ನಿ ಹುಳಗಳಂತೇ ಮುನ್ನೂರು ದೀವಟಿಗೆಗಳನ್ನು ಹಚ್ಚಿಕೊಂಡು ಬಯಲಲ್ಲಿ ತೇರು ಎಳೆಯುತ್ತಿದ್ದರು. ದೀವಟಿಗೆಗಳನ್ನು ಹಚ್ಚಿಕೊಂಡು ಬಯಲಲ್ಲಿ ಬನ್ನಿ ಮರಕ್ಕೆ ಹೋಗಿ ದಸರಾ ಸಂದರ್ಭದಲ್ಲಿ ಬನ್ನಿ ಬಂಗಾರ ಮುಡಿದು ಗವಿಸಿದ್ಧ ದೇವರು ಎಲ್ಲಾ ಭಕ್ತರಿಗೂ

ಆಶೀರ್ವಾದ ನೀಡುತ್ತಿದ್ದರೆಂದು ತಿಳಿದುಬರುತ್ತದೆ. ಇಂದಿಗೂ ಅದೇ ಸಂಪ್ರದಾಯ ಸಂಸ್ಕೃತಿಯನ್ನು ಗವಿಮಠದಲ್ಲಿ ಕಾಣಬಹುದು. ಸೋಬನವಾದ ಮೇಲೆ ದಂಪತಿಗಳು ಕೂಡಿ ಜೀವನ ಸಾಗಿಸುವರು. ಮದುವೆಯಾದ ಹೊಸದರಲ್ಲಿ ತವರಿಗೆ ಅವಳು ಗುಳ್ಳವ್ವನನ್ನು ಮಾಡಲು ಪಂಚಮಿ ಹಬ್ಬಕ್ಕೆ, ದೀಪಾವಳಿ ಹಬ್ಬಕ್ಕೆಂದು ಮೇಲಿಂದ ಮೇಲೆ ಹೋಗಿ ಬರುವಳು. ಮೊದಲ ಸಲ ಅವಳು ಗಂಡನ ಮನೆಯಿಂದ ತವರಿಗೆ ಬರುವಾಗ ಸೀರೆ ಉಡಿಸಿ, ಉಡಿಯಕ್ಕಿ ಹಾಕಿ ಕಳುಹಿಸುವರು. ಜೊತೆಗೆ ಒಬ್ಬಿಬ್ಬರು ಮುತ್ತೈದೆಯರು ಹೋಗಿ ಸಜ್ಜಕದ ಹೋಳಿಗೆ, ಅನ್ನ ಮಾಡಿ ಮನೆ ಮನೆಗೆ ಬೀರುತ್ತಾರೆ. ಅದೇ ರೀತಿ ತವರಿನಿಂದ ಬಂದ ಮೇಲೆ ಗಂಡನ ಮನೆಯಲ್ಲಿಯು ಹೋಳಿಗೆ ಮಾಡಿ ಬೀರುವ ಸಂಪ್ರದಾಯವಿದೆ. ಮದುವೆಯಾದ ನಂತರ ಗಂಡನ ಮನೆಯಲ್ಲಿ ಹೊಂದಿಕೊಳ್ಳತೊಡಗುವಳು. ತನ್ನ ಮನೆ ಸಂಸಾರದ ಜವಾಬ್ದಾರಿ ಹೆಚ್ಚಾದಂತೆ ತವರಿನ ಹಂಬಲ ಕಡಿಮೆಯಾಗುತ್ತದೆ. ಮುಂದೆ ಗರ್ಭಿಣಿಯಾಗಿ ಮಕ್ಕಳನ್ನು ಪಡೆದ ಮೇಲೆ ಅವಳು ತವರಿಗೆ ಒಂದು ವರ್ಷಕ್ಕೋ ಎರಡು ವರ್ಷಕ್ಕೋ ಹೋಗಬೇಕಾಗುವ ಪ್ರಸಂಗಗಳು ಬರುತ್ತವೆ. ಒಂದು ಹೆಣ್ಣಿನ ಜೀವನದಲ್ಲಿ ವಧುವನ್ನು ನೋಡಿ ನಿಶ್ಚಯಿಸಿ ಮದುವೆಯಾಗಿ ಸೋಬನವಾಗುವವರೆಗೆ ಒಂದು ಘಟ್ಟವಾದರೆ, ಚೊಚ್ಚಲ ಗರ್ಭಿಣಿಯಾಗಿ ಗಂಡನ ಮನೆಯ ವಂಶ ಬೆಳೆಯಿಸುವ ಘಟ್ಟ ಮುಂದಿನದು. ಚೊಚ್ಚಲ ಗರ್ಭಿಣಿಗೆ ಮಾಡುವ ಸಮಾರಂಭ ಕುಪ್ಪಸ ಮಾಡುವುದು. ಸೀಮಂತವೆಂತಲೂ ಇದನ್ನು ಕರೆಯುತ್ತಾರೆ. ಇದಕ್ಕೂ ಕೂಡ ಒಂದು ಹಿನ್ನೆಲೆ–ಪದ್ಧತಿಗಳಿರುತ್ತವೆ.

**ಕುಪ್ಪಸ ಮಾಡುವುದು**

ಇದಕ್ಕೂ 'ಹೂ ಮುಡಿಸುವುದು', 'ಸೀಮಂತ ಮಾಡುವುದು' ಎಂದೂ ಕರೆಯುತ್ತಾರೆ. ಹೆಣ್ಣು ಪೂರ್ಣತ್ವ ಪಡೆಯುವುದು ತಾಯಿಯಾದಾಗಲೇ ಪ್ರತಿ ಹೆಣ್ಣಿಗೆ ತಾಯಿಯಾಗುವ ಬಯಕೆ ಅದಮ್ಯವಾಗಿರುತ್ತದೆ. ಬಹಳ ದಿನಗಳವರೆಗೆ ಮಕ್ಕಳಾಗದಿದ್ದರೆ ಗಂಡೆಲ್ಲಿ ಇನ್ನೊಂದು ಮದುವೆ ಯಾಗುವನೋ ಎಂಬ ಆತಂಕ ಒಂದೆಡೆ 'ಅತ್ತೆ ಮಾವರು', 'ಬಂಜೆ' ಎಂದು ಮೂದಲಿಸುವರು. ನೆರೆಹೊರೆಯವರ ಕೊಂಕುನೋಟ ಇನ್ನೊಂದೆಡೆಗೆ. ಎಷ್ಟು ಕಷ್ಟಗಳಿದ್ದರೂ ಮಕ್ಕಳ ಮುಖ ನೋಡಿ ಸಹಿಸುವೆನು ಎಂಬ ಧೈರ್ಯವಿರುತ್ತದೆ. ದುಃಖ ಮರೆಸುವಂಥ ಮುದ್ದು ಕಂದನಿಲ್ಲದ ಕೊರಗನ್ನು ಒಬ್ಬ ಗೃಹಿಣಿ ಹೀಗೆ ಹೇಳಿಕೊಂಡಿದ್ದಾಳೆ.

ಕಂದನ ಕೊಡು ಶಿವನೆ, ಬಂಧನ ಬಡಲಾರೆ
ಹಂಗೀನ ಬಾನ ಉಣಲಾರೆ ಮರ್ತ್ಯದಾಗ
ಬಂಜೆರಿ ಬಸುಬುದ ಹೊರಲಾರೆ

ಹೆಣ್ಣು ಈ ರೀತಿ ದುಃಖ ವ್ಯಕ್ತಪಡಿಸಿ ಮನ ಹಗುರ ಮಾಡಿಕೊಳ್ಳಬಹುದು. ಆದರೆ ಗಂಡಸರು ತಮ್ಮ ಕೊರಗು ಹೊರಗೆ ವ್ಯಕ್ತ ಮಾಡದಿದ್ದರೂ ಮನಸ್ಸಿನಲ್ಲಿ ಇದ್ದೇ ಇರುತ್ತದೆ. ಸಂತಾನ ಪಡೆಯದೇ ಪಿತೃ ಋಣ ತೀರದು, ಮುಕ್ತಿ ದೊರಕದು ಎಂಬ ಆಧ್ಯಾತ್ಮಿಕ ಕಲ್ಪನೆ ಒಂದೆಡೆಯಾದರೆ ಆಸ್ತಿಗೆಲ್ಲ ಹಕ್ಕುದಾರರಿಲ್ಲ, ಕುಲದೀಪವಿಲ್ಲದೆ ಯಾರ ತಮ್ಮ ಪಾಲಾಗುವುದೋ ಎಂಬ ಕೊರಗುಂಟಾಗುವುದು ಸಹಜವಾಗಿದೆ.

ಒಂಬತ್ತು ತಿಂಗಳು ನಿನ್ನ ತುಂಬಿ ಕೊಂಡು ತಿರಗೇನ ಹಂಬಲಿಸಿ ನಿನ್ನ ಹಡೆದೇನ ಹಂಬಲಿಸಿ ನಿನ್ನ ಹಡೆದೇನ ಚಿತ್ರದ ಗೊಂಬೆ ನಿನ ಗೊಪ್ಪಿಸಿ ಕೊಂಡಲ್ಲಾಂಗ ತೊಟ್ಟಿಲ ತೂಗಂದ್ರೆ

ಸಿಟ್ಟೀತ ಕೂಡೋಳ ಬಟ್ಟಲ ಬೆಳಗಾಕ ಅರಿಯಳ ಬಟ್ಟಲ ಬೆಳಗಾಕ ಅರಿಯಾದ ಮಗಳನ್ನು ಕೊಟ್ಟೇನು ಮಾವನ ಕೈಯಾಗ ಕುಪ್ಪಸ ಮಾಡುವ ಸಮಾರಂಭ ಚೊಚ್ಚಲ ಬಸುರಿಗೆ ಮತ್ತ ಮುಂದೆ ಅವಳ ಎಷ್ಟು ಸಲ ಗರ್ಭಿಣಿಯಾದರೂ ಯಾವ ಸಮಾರಂಭಗಳಲ್ಲಿ. ಒಂಬತ್ತು ತಿಂಗಳಾದ ಮೇಲೆ ಹೆರಿಗೆಯಾಗಿ ಇನ್ನೊಂದು ಜೀವ ಜನಿಸಿ ಆ ಜೀವದ ಜೀವನಚಕ್ರ ಆರಂಭವಾಗುತ್ತದೆ. ಹಳೆಯ ಜೀವವು ಪಕ್ವವಾಗುತ್ತ ಜೀವನದಲ್ಲಿ ಹಲವು ಕಷ್ಟ ಸುಖಗಳಲ್ಲಿ ಪರಿಪಾಕಗೊಂಡು ಕಡೆಗೊಂದು ದಿನ ಮರಣ ಹೊಂದಿ ಭೌತಿಕ ಜೀವನದಿಂದ ಮುಕ್ತಿ ಪಡೆಯುತ್ತದೆ. ಹೊಸ ಜೀವದ ಜೀವನಚಕ್ರ ಬಾಲ್ಯ ಯೌವ್ವನ, ಮುಪ್ಪಿನಲ್ಲಿ ಮುಂದುವರಿಯುತ್ತದೆ. ಯುವ ಯುವ ಸಂದರೂ ಹುಟ್ಟಿದ ಜೀವಕ್ಕೆ ಬಾಲ್ಯ-ಯೌವ್ವನ, ಮುಪ್ಪು ಸಹಜವಾಗಿ ಬರುತ್ತವೆ. ಆದರೆ ಆಯಾ ಕಾಲದಲ್ಲಿ ಮಾಡುವ ಸಂಸ್ಕಾರಗಳು ಇದ್ದಂತೆಯೇ ಇರುವುದಿಲ್ಲ. ಕೆಲವೇ ವರ್ಷಗಳ ಹಿಂದೆ ಇದ್ದಿರುವ ಎಷ್ಟೋ ಸಂಪ್ರದಾಯಗಳು ಇಂದಿನ ಪರಿಸರದಲ್ಲಿ ಮಹತ್ವ ಕಳೆದುಕೊಂಡು ಇಲ್ಲವಾಗುತ್ತಿವೆ. ಅವುಗಳಲ್ಲಿ 'ಐದೇಸಿ ಮಾಡುವುದು', 'ಮೈನೆರೆದಾಗ ಕೂಡಿಸಿ ಹಾಡುವುದು' ಮುಂತಾದವುಗಳು. ಮದುವೆಯ ಹಲವು ಪ್ರಕ್ರಿಯೆಗಳಲ್ಲಿಯೂ ಬಹಳಷ್ಟೂ ಸಂಪ್ರದಾಯಗಳನ್ನು ಕೈಬಿಡಲಾಗಿದೆ. ಶುಭಾಶುಭ ಶಕುನಗಳನ್ನು ನೋಡಿ ಹಿರಿಯರು ಹೆಣ್ಣು ನೋಡುವುದು, ಒಳಕಲ್ ಪೂಜೆ, ಬೀಗರನ್ನು ಎದುರ್ಗೊಳ್ಳುವುದು, ಬಾಸಿಂಗ, ಐರಾಣಿ ತರುವುದು, ಸರಿಬೆಸ ಆಡುವುದು, ಭೂಮ ಕೊಡುವುದು ಮುಂತಾದವುಗಳೆಲ್ಲ ಇಂದು ಮಾಯವಾಗಿದೆ. ಇವು ಇಂದಿನ ಬದುಕಿಗೆ ಅಪ್ರಸ್ತುತವೂ ಆಗುತ್ತಿವೆ. ಅಪ್ರಸ್ತುತವಾಗಿರುವ ಯಾವುದೇ ವಸ್ತು ಕಾಲಕ್ರಮೇಣದಲ್ಲಿ ತಾವಾಗಿಯೇ ಮಾಯವಾಗುತ್ತವೆ. ಇದು ಸೃಷ್ಟಿಯ ನಿಯಮವು ಹೌದು. ಅದಕ್ಕೆ ಬದಲಾಗಿ ಜನ ಹೊಸದನ್ನು ಸೃಷ್ಟಿಸಿಕೊಳ್ಳುತ್ತಾರೆ. ಕಾಲ ಧರ್ಮಕ್ಕನುಗುಣವಾಗಿ ಸ್ಪಂದಿಸುತ್ತಾರೆ. ಇಂಥ ಹೊಸ ಸಂಪ್ರದಾಯಗಳಲ್ಲಿ ಹುಟ್ಟುಹಬ್ಬದ ಆಚರಣೆ, ಮದುವೆಯಲ್ಲಿ ತಂಪು ಪಾನೀಯ ಕುಡಿಸುವುದು, ವಿಡಿಯೋ ಚಿತ್ರೀಕರಣ, ವೈಭವದ ಔತಣಕೂಟ ಮತ್ತು ಮದುವೆಯ ವಾರ್ಷಿಕೋತ್ಸವಗಳು, ಬೆಳ್ಳಿ ಹಬ್ಬದ ಆಚರಣೆಗಳು ದಿನೇ ದಿನೇ ಜನಪ್ರಿಯವಾಗುತ್ತಿವೆ. ಇವುಗಳಲ್ಲಿ ಆಡಂಬರ ಪ್ರದರ್ಶನ ಹೊರತಾಗಿ ಹಿಂದಿನ ಸಂಪ್ರದಾಯಗಳಲ್ಲಿರುವಂತೆ ಆತ್ಮೀಯತೆ, ಸಹೃದಯತೆ, ಸರಳತೆಗಳಿಲ್ಲ.

**೫.೪. ಚೌಡಿಕೆ ಹಾಡುಗಳು**

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಬರುವ ಕೊಪ್ಪಳ ಜಿಲ್ಲೆಯ ವೃತ್ತಿಗಾಯಕರಲ್ಲಿ ಚೌಡಿಕೆಯವರು ಪ್ರಸಿದ್ಧರು. ಇವರು ರೇಣುಕೆ ಅಥವಾ ಎಲ್ಲಮ್ಮ ದೇವಿಯ ಭಕ್ತರು. ದೇವಿಯ ಮಹಿಮಾವಳಿಯನ್ನು ಭಕ್ತಿಯಿಂದ ಸ್ತುತಿಸುವಾಗ 'ಚೌಡಿಕೆ' ಎಂಬ ಚರ್ಮವಾದ್ಯವನ್ನು ಹಿನ್ನೆಲೆ ವಾದ್ಯವಾಗಿ ಬಳಸುವುದರಿಂದ ಇವು ಚೌಡಿಕೆ ಪದಗಳೆಂದು ಪ್ರಚಾರದಲ್ಲಿವೆ. "ಚೌಡಿಕೆ ಸಂಪ್ರದಾಯ ಕರ್ನಾಟಕದಾದ್ಯಂತ ಪ್ರಚಲಿತವಿದ್ದರೂ ಇದರ ನಾಲ್ಕು ಮುಖ್ಯ ಕೇಂದ್ರಗಳೆಂದರೆ ಬಳ್ಳಾರಿ ಜಿಲ್ಲೆಯ ಉಚ್ಚಂಗಿ ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿ ಜಿಲ್ಲೆಯ ಸವದತ್ತಿ". ಬೆಳಗಾವಿ ಈ ಸ್ಥಳಗಳು ಪೌರಾಣಿಕ ಕಥೆಗಳ ಪ್ರಕಾರ ರೇಣುಕೆ ನೆಲೆಗೊಂಡ ಪುಣ್ಯಕ್ಷೇತ್ರಗಳಾಗಿ ಪ್ರಸಿದ್ಧಿ ಪಡೆದಿವೆ. ಅದರಲ್ಲೂ ಕೊಪ್ಪಳ ಜಿಲ್ಲೆಯಲ್ಲಿರುವ ಹುಲಿಗಿ ಒಂದು ಪ್ರಸಿದ್ಧ ಯಾತ್ರಾಸ್ಥಳವಾಗಿ ನಾಡಿನ ಅಷ್ಟೇ ಏಕೆ ನೆರೆಯ ರಾಜ್ಯಗಳ ಭಕ್ತರನ್ನು ಆಕರ್ಷಿಸಿದೆ. ಪ್ರತಿ ಹುಣ್ಣಿಮೆ, ಅದರಲ್ಲೂ ಹೊಸ್ತಿಲು ಹುಣ್ಣಿಮೆ ಹಾಗೂ ಭಾರತ ಹುಣ್ಣಿಮೆಗಳಂದು ಜರುಗುವ ಜಾತ್ರೆಗಳ ಸಂದರ್ಭದಲ್ಲಿ ಲಕ್ಷೋಪಲಕ್ಷದಲ್ಲಿ

ನೆರೆಯುವ ಭಕ್ತರು ದೇವಿಯ ದರ್ಶನ ಪಡೆದು ಪುನೀತರಾಗುತ್ತಾರೆ. ಈ ಸಂದರ್ಭದಲ್ಲಿ ದೇವಿಯ ಸೇವೆಗೆ ತಮ್ಮನ್ನು ಮುಡುಪಾಗಿಟ್ಟುಕೊಂಡು ಜೋಗತಿಯರು ವಿಶಿಷ್ಟ ಗತ್ತಿನಿಂದ ಚೌಡಿಕೆ ನುಡಿಸಿ ನರ್ತನ ಮಾಡುತ್ತ ದೇವಿಯ ಮಹಿಮಾವಳಿ ಹಾಡುವುದರಿಂದಾಗಿ ಚೌಡಿಕೆ ಪದಗಳು ಜೋಗತಿಯರ ಹಾಡುಗಳೆಂಬ ಹೆಸರಿನಿಂದಲೂ ಕರೆಯಲ್ಪಡುತ್ತವೆ.

### ಕಲೆಯ ಹಿನ್ನೆಲೆ

ದೇವಿಯ ಆರಾಧನೆಗೆಂದೇ ಹುಟ್ಟಿಕೊಂಡಿರುವಂತಹ ಕಲೆ ಇಲ್ಲಿ ಚೌಡಿಕೆ ವಾದ್ಯದ ಹುಟ್ಟಿದ ಹಿನ್ನೆಲೆ ಹೇಳಬೇಕಾಗುತ್ತದೆ. ಏಕೆಂದರೆ ಅದನ್ನು ಹಿಡಿದುಕೊಂಡೇ ಎಲ್ಲಮ್ಮನ ಹಾಗೂ ಹುಲಿಗೆಮ್ಮ ಭಕ್ತರು ಹಾಡಿ ಕುಣಿಯುವುದು. ಈ ಮೂಲದ ಕುರಿತಾದ ಕೆಲವೊಂದು ಪುರಾಣಗಳು ಹೀಗಿವೆ.

### ಚೌಡಿಕೆ

ಚೌಡಿಕೆ ಮೂಲ ರಚನೆ ಹೇಗಿತ್ತು ಎಂಬುದಕ್ಕೆ ಎಲ್ಲಮ್ಮನ ಹಾಡುಗಳಲ್ಲಿ ವಿವರಣೆ ಇದೆ. ಆಕೆ ತನ್ನ ಗಂಡನನ್ನು ಕೊಂದು ಕಾರ್ತವೀರ್ಯಾರ್ಜುನನ್ನು ಕೊಂದು, ತಲೆಯ ಮೇಲಿನ ಪರಟೆ ತೆಗೆದು ಹಡ್ಲಿಗೆ ಮಾಡಿದೆಮ್ಮ। ನೀನೇ ಧರಿಸಿದೆಮ್ಮ। ಕಣ್ಣಾನ ಗುಳ್ಳಿ ತೆಗೆದು ರುದ್ರಾಕ್ಷಿ ಮಾಡಿದೆಮ್ಮ। ಕಾಲಾಗ ಮೆಟ್ಟಿದೆಮ್ಮ ಎದಿಯಾನ ಗುಂಡಿಗೆ ತೆಗೆದು ಸುತಿಗಳ ಮಾಡಿದೆಮ್ಮ। ಚೌಡಿಕೆ ಮಾಡಿದೆಮ್ಮ। ಹೊಟ್ಯಾಗಿನ ಕಳ್ಳ ತೆಗೆದು ತಂತಿ ಮಾಡಿದೆಮ್ಮ ದಾರಾ ಮಾಡಿದೆಮ್ಮ। ಕೈಯಾಗಿನ ಒಳ್ಳ ತೆಗೆದು ಕಡ್ಡಿ ಮಾಡಿದೆಮ್ಮ ಸಂತಗೋಳ ಹಾಕಿದೆಮ್ಮ ಹೊಟ್ಟಾಗಿನ ತಾಯತ ತೆಗೆದು ಜೀವ ಮಾಡಿದೆಮ್ಮ। ಜೀವವೆನಿಸಿದೇಮ್ಮ।

### ಧಾರ್ಮಿಕ ಹಾಗೂ ಲೌಕಿಕ ಸಂಪ್ರದಾಯ

ಧಾರ್ಮಿಕ ಸಂಪ್ರದಾಯದವರೆಂದರೆ ಎಲ್ಲಮ್ಮನ ಭಕ್ತರಾಗಿದ್ದು, ದೀಕ್ಷೆ ಪಡೆದು, ವಿಧಿಬದ್ಧವಾಗಿ ದೇವಿಯ ಕಥೆಯನ್ನು ಹಾಡುತ್ತಾ ತಿರುಗಾಟ ಮಾಡುವವರು. ಇವರ ಮುಖ್ಯ ಉದ್ದೇಶ ದೇವಿಯ ಪ್ರಚಾರ. ಕೊಪ್ಪಳ ಜಿಲ್ಲೆಯ ಹುಲಿಗಿ ಪ್ರದೇಶದಲ್ಲಿ ಹೆಚ್ಚಾಗಿ ಕಾಣಬಹುದು. ಲೌಕಿಕ ಸಂಪ್ರದಾಯ ದವರೆಂದರೆ ಎಲ್ಲಮ್ಮನ ಭಕ್ತರೇ ಆದರೂ ದೀಕ್ಷೆ ಪಡೆದವರಲ್ಲ. ಚೌಡಿಕೆ ಇವರ ಹವ್ಯಾಸ. ಇವರು ದೇವಿಯ ಕಥೆಯ ಜೊತೆಗೆ ಇತರ ಹಾಡುಗಳನ್ನೂ, ಕಥನ ಗೀತೆಗಳನ್ನು ಹಾಡುತ್ತಾರೆ. ಈ ಸಂಪ್ರದಾಯದಲ್ಲಿ ಹೆಂಗಸರ ಮೇಳ ಮತ್ತು ಗಂಡಸರ ಮೇಳ ಎಂಬುದಾಗಿ ಗುರುತಿಸಬಹುದು.[೩೩]

### ವೇಷಭೂಷಣಗಳು

ಜೋಗಪ್ಪನಾದವನು ಧೋತರ ಉಟ್ಟು, ಅಂತಿಗೊಟ್ಟು ಮೇಲೊಂದು ಕೋಟನ್ನೋ ನಿಲುವಂಗಿಯನ್ನೋ ಧರಿಸುವನು. ತಲೆಮೇಲೆ ಬಿಳಿ ಅಥವಾ ಬಣ್ಣದ ರುಮಾಲು ಸುತ್ತಿ, ಹೆಗಲಲ್ಲಿ ಜೋಳಿಗೆ ಇಳಿಬಿಟ್ಟು ಕೊರಳಲ್ಲಿ ಕವಡಿಸರ, ದೇವಿ ಭಂಡಾರದ ಚೀಲ ಹಾಕಿರುವನು. ವಿಶೇಷ ಸಂದರ್ಭಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುವನು. ಜೋಗತಿಯಾಗಿದ್ದರೆ ಹಸಿರು, ಕೆಂಪು, ಹಳದಿ ಬಣ್ಣದ ಸೀರೆಗಳನ್ನು ಉಟ್ಟುಕೊಂಡು ಅದೇ ತೆರನಾದ ಕುಪ್ಪಸವನ್ನು ತೊಟ್ಟುಕೊಳ್ಳುವಳು. ಕೈತುಂಬ ಬಳೆ, ಹಣೆ ತುಂಬ ಭಂಡಾರ ಬಳಿದುಕೊಂಡು ಮಧ್ಯದಲ್ಲಿ ಅಗಲವಾದ ಕುಂಕುಮ ಹಚ್ಚಿಕೊಳ್ಳುವಳು.

ಕಾಲಿಗೆ ಗೆಜ್ಜೆ ಕಟ್ಟಿಕೊಳ್ಳುವಳು. ಹೆಚ್ಚಾಗಿ ಇಂಥವರು ಜಡೆ ಬೆಳೆಸಿಕೊಂಡಿರುತ್ತಾರೆ. ತಾಮ್ರದ ಕೊಡಕ್ಕೆ ದೇವಿ ಮುಖವಾಡವನ್ನು ಕಟ್ಟಿ ಅಲಂಕರಿಸಿ ಹೊತ್ತುಕೊಂಡಿರುತ್ತಾರೆ. ಕೊರಳಲ್ಲಿ ತಾಳಿಸರ, ಕವಡೆಸರ, ದೇವಿಸರ, ಭಂಡಾರದ ಚೀಲಗಳನ್ನು ಹಾಕಿಕೊಂಡಿರುತ್ತಾರೆ. ಗಂಡು-ಜೋಗತಿಯರ ವೇಷಭೂಷಣಗಳು ನೈಜ ಜೋಗತಿಯವರಂತೆಯೇ ಇರುತ್ತವೆ. ಕೆಲವರು ಬಿಂದಿಗೆಯ ಬದಲಿಗೆ ಬಿದಿರಿನ ಗುಂಡಾದ ಸಣ್ಣ 'ಹಡ್ಲಿಗೆ'ಯನ್ನು ಹೊರುತ್ತಾರೆ. ಹಡ್ಲಗಿಯಲ್ಲಿ ದೇವಿಯ ಮುಖವಾಡ ಬಳೆ, ಭಂಡಾರದ ತಟ್ಟೆಗಳಿರುತ್ತವೆ. ಭಿಕ್ಷೆ ಕಾಳುಗಳನ್ನು ಅದರಲ್ಲಿ ಹಾಕಿಕೊಳ್ಳುತ್ತಾರೆ. ಹೀಗೆ ವೇಷಭೂಷಣಗಳೊಂದಿಗೆ ಕಂಗೊಳಿಸುವ ಈ ಜೋಗತಿ-ಜೋಗಪ್ಪನವರು ಕೂಡಿಕೊಂಡು ಊರಲ್ಲಿ ತಿರುಗುತ್ತ ಭಿಕ್ಷೆಯಾಡುವುದಕ್ಕೆ ಊರಾಡುವುದು ಎಂದು ಕರೆಯುತ್ತಾರೆ. ಭಿಕ್ಷೆಗೆ ಒಬ್ಬರೇ ಬರಬಹುದು. ಒಬ್ಬರಿಗಿಂತ ಹೆಚ್ಚಾಗಿ ತಂಡ ರೂಪದಲ್ಲಿ ಬರಬಹುದು. ಮನೆ ಮುಂದೆ ಬಂದಾಗ "ಉಧೋ ಉಧೋ" ಎಂದೂ "ಏಕ್ಕಯ್ಯ-ಜೋಗಯ್ಯ" ಎಂದೋ ಘೋಷಿಸುತ್ತ ಮನೆಯವರ ಗಮನ ಸೆಳೆಯುವರು. ಕುಣಿತದ ಕಾಲಗೆಜ್ಜೆಯ ಗತಿಗೆ ಚೌಡಿಕೆಯ ಲಯಕ್ಕೆ, ಶೃತಿವಾದ್ಯದ ನಾದಕ್ಕೆ ಎಂಥವರಾದರೂ ಆ ಇಡೀ ಓಣಿಯೇ ಅವರ ಲಘು ಪ್ರದರ್ಶನದ ಸವಿಯನ್ನು ಕಾಣುತ್ತಾರೆ. ಜನರ ಮನಸೆಳೆಯುವಲ್ಲಿ ಅವರು ಬಳಸುವ ಚೌಡಿಕೆಯು ಪ್ರಮುಖ ಪಾತ್ರವಹಿಸುತ್ತದೆ.[೩೪]

**ಚೌಡಿಕೆ ವಾದ್ಯ**

ಚೌಡಿಕೆಯೆಂಬುದು ತಂತಿ ವಾದ್ಯದ ಸ್ವರೂಪವನ್ನು ಒಳಗೊಂಡಿದ್ದರೂ ಇದರಲ್ಲಿ ತಂತಿಯ ಬಳಕೆಯಿರುವುದಿಲ್ಲ. ನೋಡಲು ತುಂತುಣಿ ಅಥವಾ ಶೃತಿವಾದ್ಯದ ಹಾಗೆ ಕಾಣುತ್ತದೆ. ಒಂದು ಅಡಿ ಎತ್ತರದ ಹಾಗೂ ಅಷ್ಟೇ ಗಾತ್ರ ಅಗಲದ ಕಟ್ಟಿಗೆಯ ಪಡಗಕ್ಕೆ ಕೆಳಗಡೆ ಕುರಿಚರ್ಮದಿಂದ ಗಟ್ಟಿಯಾಗಿ ಮುಚ್ಚಿರುತ್ತಾರೆ. ಪಡಗಕ್ಕೆ ಬಿಗಿದ ಚರ್ಮಕ್ಕೆ ಮಧ್ಯದಿಂದ ಚರ್ಮದ ಬಿಲ್ಲೆಯ ಸಹಾಯದಿಂದ ದಪ್ಪದಾದ ಚರ್ಮದ ದಾರವನ್ನು ಕೈಗಾತ್ರಕ್ಕೆ ಕಟ್ಟಿಗೆಯ ತುಂಡಿಗೆ ತಂದು ಕಟ್ಟುತ್ತಾರೆ. ಆ ಕಟ್ಟಿಗೆ ಎರಡೂ ಬದಿಯ ತುದಿಗಳಿಗೆ ಗೆಜ್ಜೆಗಳನ್ನು ಕಟ್ಟಿರುತ್ತಾರೆ. ಅದನ್ನು ಬಾರಿಸುವವರು ಬಗಲಿಗೆ ಹಾಕಿಕೊಂಡು ಹೊಟ್ಟೆಗೆ ಅಮುಕಿ ಆಧಾರವನ್ನು ಗಟ್ಟಿಗೊಳಿಸಿಕೊಂಡಿರುತ್ತಾರೆ. ಬಲಗೈ ಹೆಬ್ಬೆರಳಿನಿಂದ ಮತ್ತು ತೋರುಬೆರಳುಗಳಿಂದ ಆ ದಾರವನ್ನು ಅಗತ್ಯಕ್ಕೆ ತಕ್ಕಂತೆ ಜಗ್ಗುತ್ತ ನಾದವನ್ನು ಹೊರಡಿಸುವರು. ಆ ಮೂಲಕವೇ ನಾದ ವೈವಿಧ್ಯತೆಯನ್ನುಂಟು ಮಾಡುವ ಕಲೆಯನ್ನು ಕರಗತ ಮಾಡಿಕೊಂಡಿರುವರು. ಹೀಗೆ ಈ ಚೌಡಿಕೆಯ ಸ್ವರೂಪವಿರುತ್ತದೆ. ಉತ್ತರ ಕರ್ನಾಟಕದಲ್ಲಿ ಇದನ್ನು ಚೌಡಿಕೆಯೆಂದು ಕರೆದರೆ ದಕ್ಷಿಣ ಕರ್ನಾಟಕದಲ್ಲಿ ಇದಕ್ಕೆ ಚಾರಿಕ ವಾದ್ಯವೆಂದು ಕರೆಯುತ್ತಾರೆ. ಈ ಚೌಡಿಕೆಯು ಶಕ್ತಿದೇವತೆಯ ಸಂಕೇತವಾದ್ದರಿಂದ ನೆಲದ ಮೇಲಿಡುವುದಿಲ್ಲ. ಭಿಕ್ಷಾಟನೆ ಮುಗಿದ ಮೇಲೆ ಅಥವಾ ಪ್ರದರ್ಶನದ ನಂತರ ದೇವರ ಗದ್ದಿಗೆಯ ಮೇಲಿಡುವುದರ ಮೂಲಕ ಚೌಡಿಕೆ ವಾದ್ಯವನ್ನು ದೇವರ ಸಮಾನವೆಂದೇ ಭಾವಿಸುತ್ತಾರೆ.

ಈ ಚೌಡಿಕೆಯೊಂದಿಗೆ ಶೃತಿ ವಾದ್ಯವನ್ನು ಬಳಸುವರು. ಶೃತಿ ವಾದ್ಯವಾದರೂ ಸಹ ಚೌಡಿಕೆಯ ಆಕೃತಿಯ ಹೊಂದಿದೆ. ಶೃತಿ ವಾದ್ಯದ ಪಡಗದ ತಳಭಾಗದ ಚರ್ಮದಿಂದ ತಂತಿಯನ್ನು ತಂದು ಪಡಗತ ಹೊರಭಾಗಕ್ಕೆ ಸಿಕ್ಕಿಸಿದ ಎರಡುವರೆ ಅಡಿಗಳಷ್ಟು ಉದ್ದವಿರುವ ಕೋಲಿನ ಬಿರಡಿಗೆ ತಂತಿ ಸಿಕ್ಕಿಸುತ್ತಾರೆ. ಬೇಕಾದ ಹಾಗೆ ತಂತಿಯನ್ನು ಜಗ್ಗಿ ಗಟ್ಟಿಗೊಳಿಸಿಕೊಂಡು ಶೃತಿಯನ್ನು

ಹೊಂದಿಸಿಕೊಳ್ಳುತ್ತಾರೆ. ಇದಕ್ಕೆ ತುಂತುಣಿಯೆಂದು ಕರೆಯಲಾಗುತ್ತದೆ.[೩೬] ಇದರ ಮೂಲಕ ಒಂದೇ ಸ್ವರನ್ನು ಲಯಬದ್ಧವಾಗಿ ನುಡಿಸಲಾಗುತ್ತಿದೆ. ಶೃತಿ ವಾದ್ಯವನ್ನು ಏಕತಾರಿಗೆ ಹತ್ತಿರವಾದರೂ ರಚನಾ ದೃಷ್ಟಿಯಿಂದ ಭಿನ್ನವಾಗಿರುತ್ತದೆ. ಚೌಡಿಕೆ ಮತ್ತು ಶೃತಿ ವಾದ್ಯಗಳು ಜೋಗಪ್ಪ-ಜೋಗತಿಯರ ಪ್ರಮುಖ ವಾದ್ಯಗಳಾಗಿವೆ. ಮಹತ್ವದ ಪ್ರದರ್ಶನದಲ್ಲಿ ತಪ್ಪಡಿಯನ್ನು ಹಾಗೂ ತಾಳಗಳನ್ನು ಬಳಸಲಾಗುತ್ತಿದೆ.[೩೭]

**ಚೌಡಿಕೆ ಪದಗಳ ಹಾಡುಗಾರಿಕೆಯ ಸಂದರ್ಭ**

ಈ ಮೊದಲೇ ಹೇಳಿದಂತೆ ಪ್ರತಿ ಹುಣ್ಣಿಮೆ, ವಿಶೇಷವಾಗಿ ಹೊಸ್ತಿಲು ಹುಣ್ಣಿಮೆ ಹಾಗೂ ಭಾರತ ಹುಣ್ಣಿಮೆಯ ಸಂದರ್ಭಗಳಲ್ಲಿ ಹುಲಿಗೆಮ್ಮ ದೇವಿಯ ಗುಡಿಯ ಮುಂದೆ, ದೇವಿಯ ಭಕ್ತರ ಆಮಂತ್ರಣದ ಮೇರೆಗೆ ಅವರ ಮನೆಗಳಲ್ಲಿ ಹಾಗೂ ಜೋಗ ಹಾಡುವ ಸಂದರ್ಭಗಳಲ್ಲಿ ಜೋಗತಿಯರು ಈ ಚೌಡಿಕೆ ಪದಗಳನ್ನು ಹಾಡುವುದು ಕೊಪ್ಪಳ ಜಿಲ್ಲೆಯ ಗ್ರಾಮಗಳಲ್ಲಿ ನಿರಂತರವಾಗಿ ನಡೆದುಕೊಂಡು ಬರುತ್ತಿರುವುದನ್ನು ಕಾಣಬಹುದು.

ಜೋಗಪ್ಪ, ಜೋಗತಿಯರಿಂದ ಹಾಡುವ ಹಾಡು ಕುರಿತಂತೆ ಜನಪದರು ತುಂಬ ವರ್ಣರಂಜಿತವಾಗಿ ಹಾಡುವುದನ್ನು ಕಾಣುತ್ತೇವೆ.

ಎಲ್ಲಾ ದೇವರ ಮುಂದೆ ಕಲ್ಲೀನ ವಲೆಗುಂಡ
ಹೊನ್ನಾದ ಹುಲಿಗವ್ವ ಬಾಳಾದು ನಿಜವಂತೆ
ಸಲ್ಲೇದ ಮೂರೇನ ವಲೆಗುಂಡ ಹುಲಿಗವ್ವ ॥

ನಡವೊಂದು ಹಿಡಿಯಲ್ಲೆ ಜಡೆಯೊಂದು ಮಾರಲ್ಲೆ
ಗಡಿಯಾರದೆಣ್ಣೆ ಚೌಡಮ್ಮ ಉಜ್ಜನಿಯ
ಗಡಗೀಗೆ ತನಿಯ ಎರೆದಾಳೇ ॥

ಕೈಯ್ಯಾಕಂಕಣದೋಳೆ ಮಯ್ಯ ಬಾಸಣದೋಳೆ
ವೈಯಾರಿ ಸಣ್ಣ ದನಿಯೋಳೆ ಚೌಡಮ್ಮ
ಉಯ್ಯಾಲೆಯನ್ನಿಳಿದು ಬಂದ್ಹೋಗೆ ॥

ಕೆಂಜೆಡೆಯನ್ನು ಬಿಟ್ಟು ಮುಂದಕ್ಕೆ ಸಾಗುತ
ಕೆಂಡದಂತೆ ಸಣ್ಣ ಕಿಡಿಕಿಡಿ ಸೂಸುತ
ಕರಕರ ಹಲ್ಲು ಕಡಿದು ದೇವಿ ಬರುತ್ತಾಳ ॥[೩೮]

ಈ ತ್ರಿಪದಿಗಳಲ್ಲಿ ಜನಪದ ಹೆಣ್ಣು ದೈವಗಳ ರೂಪ ಕಲಾತ್ಮಕವಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ. ಕಲ್ಲಿನ ವಲೆಗುಂಡುಗಳ ರೂಪದ. ನಡುವಿನ ಉದ್ದ ಜಡೆಯುಳ್ಳ ದೇವಿ, ಕಂಕಣದ ಕೈಯವಳು ಸಣ್ಣ ದನಿಯವಳು ಅಮ್ಮ ಕೆಂಜೆಡೆಯುಳ್ಳವಳು, ಕೆಂಗಣ್ಣ ಬಿಟ್ಟವಳು ಕರಕರ ಹಲ್ಲು ಕಡಿಯುವ ಹೆಮ್ಮಾರಿ. ಹೀಗೆ ದೈವಗಳ ರೂಪ ಸ್ವರೂಪಗಳಿಗೆ ಸಂಬಂಧಿಸಿದಂತೆ ಜನಪದ ಗರತಿಯರು ವರ್ಣಮಯವಾದ ಕಾವ್ಯ ಕಟ್ಟಿದ್ದಾರೆ. ಆಯಾ ಪ್ರದೇಶಗಳಿಗೆ ತಕ್ಕಂತೆ ಅಲ್ಲಿಯ ವೈಶಿಷ್ಟ್ಯತೆಗಳನ್ನು ಸಾರುವ ದೇವಿಯ ಸ್ವರೂಪ ಜನಪದ ಕಾವ್ಯದಲ್ಲಿ ವೈವಿಧ್ಯಮಯವಾಗಿ ಮೂಡಿಬಂದಿದೆ:

ಬನ್ನೀಯ ಮರದಾಕಿ ಬೆಳ್ಳಿಯ ಮರದಾಕಿ
ಎಳೆಸೂಸಿ ಎಲೆಯೋಳೆ ಮಳೆಪೈರ ಮುಡಿಯೋಳೆ
ಪಚ್ಚೆಯ ಮುಡಿಯೋಳೆ ಪಾಲೀಸಿ ಮೆರಿಯೋಳೆ ॥

ಕಣ್ಣ ಕೈಯಕ್ಕಯೋಲೆ ಕಸ್ತೂರಿ ಮೈಯ್ಯವಳೆ
ಚಿರತೆ ರೂಪ ತೊಟ್ಟು ಮಾರೆಮ್ಮ ಬಂದಾಳೊ
ಕಣ್ಣ ಬಿಟ್ಟು ತೊಟ್ಟವಳೆ ಕ್ವಾರಮೀಸಿ ಮುಖದವಳೆ ॥[೩೭]

ಇಂಥ ನುಡಿಗಳಲ್ಲಿ ಹೆಣ್ಣು ದೈವಗಳ ರೂಪ ನಿಚ್ಚಳವಾಗಿ ಮೂಡಿರುವುದನ್ನು ಕಾಣಬಹುದಾಗಿದೆ. ರೂಪ ಸ್ವರೂಪದ ದೃಷ್ಟಿಯಿಂದಲೂ ಲಕ್ಷಣಗಳು ವಿಶಿಷ್ಟವಾಗಿದೆ.

ನಿನ್ನ ತಲೆಯ ಮ್ಯಾಲ ಮುತ್ತಿನ ದಂಡಿ ಮಾದೇವಿ
ನಿನ್ನ ಹಣೆಯ ಮ್ಯಾಲ ಕುಂಕುಮರೇಖ ಮಾದೇವಿ
ನಿನ್ನ ಕಿವಿಯಲ್ಲಿ ಮುತ್ತಿವಾಲೆ ಮಾದೇವಿ ॥

ನಿನ್ನ ಮೂಗಿನಲ್ಲಿ ರಾಗೋಡಿನತ್ತು ಮಾದೇವಿ
ನಿನ್ನ ಕೊರಳಲ್ಲಿ ಕವಡೆಯ ಸರವೈತಿ ಮಾದೇವಿ
ನಿನ್ನ ಟೊಂಕದಲ್ಲಿ ಮಕ್ಮಲ್ ಡಾಬ ಮಾದೇವಿ ॥

ನಿನ್ನ ಕೈಯಲ್ಲಿ ಉರಿಯಪತ್ತಿ ಮಾದೇವಿ
ನಿನ್ನ ಕೈದೊಳಗ ಭಂಡಾರ ಪರಡಿ ಮಾದೇವಿ
ನಿನ್ನ ಕಾಲಲ್ಲಿ ಗಿಲ್‌ಗಿಲ್ ಗೆಜ್ಜೆ ಮಾದೇವಿ ॥[೩೮]

ಜನಪದರ ಚೌಡ್ಕಿ ಪದಗಳಲ್ಲಿ ಸ್ತ್ರೀ ದೇವತೆಯ ಸ್ವರೂಪವನ್ನು ಚಿತ್ರಿಸುವುದನ್ನು ಕಾಣಬಹುದು. ಜನಪದರ ದೇವತೆಗಳು ಅಲಂಕಾರಿಕವಾದ ದೈಹಿಕ ಸ್ವರೂಪವು ಕಂಡುಬರುತ್ತದೆ. ದೇವತೆಯ ಸ್ವರೂಪ ಹಾಗೂ ತಲೆಯ ಮೇಲೆ ಹೂವಿನ ದಂಡಿ, ಕಿವಿಯಲ್ಲಿ ಮುತ್ತಿನವಾಲೆ, ಕೊರಳಲ್ಲಿ ಕವಡೆಸರ ಧರಿಸಿರುವ ಈ ಉಡುಗೆ ತೊಡುಗೆಗಳನ್ನು ಕುರಿತಾದ ವರ್ಣನೆಯನ್ನು ಜನಪದ ಗರತಿಯರಿಂದಲೇ ಕೇಳಬೇಕು ಹಾಗೂ ಎಲ್ಲಮ್ಮನ ಉಡುಗೆ ತೊಡುಗೆಗಳನ್ನು ಕುರಿತಂತೆ ಎಲ್ಲಮ್ಮ ಜೋಗತಿಯರು ಹಾಡುವ ವಿಧಾನವಿದು.

ಸಣಾನೆ ಉದಿಮಾಯ್ಲ ನೊಸಲಲ್ಲೆ ಹಚ್ಚಿಕೊಂಡು
ಕನ್ನಡಿ ಹಿಡಿದು ತಾನು ನಗುತ್ತಾಳೆ
ಉಂಗುರ ಕೂದಲ ನಕ್ಕರಿಕರಿಹಲ್ಲ
ಚಿಕ್ಕಮ್ಮ ಲಕೀನ ತುಂಬಾ ಹೆಡಕಿಲ್ಲೇಳಮ್ಮ
ಅವಳಿಸರ ಗವಳಿಸರ ಜೋಡು ಮುತ್ತಿನ ಹಾರ
ಹಾರ ಕವಡಿಯೆ ಸರ ಕೊರಳಿಗೇಳಮ್ಮ
ಮಕರ ಮಲ್ಲಿಗಿ ಹೂವು ತುರುಬಿಗೇಳಮ್ಮ ॥[೩೯]

ಈ ಹಾಡಿನಲ್ಲಿ ಕಾಳಮ್ಮ ಅಲಂಕೃತ ಮೂರ್ತಿ ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗಿದೆ. ಉಡಿಯಲ್ಲಿ ಭಂಡಾರ ತುಂಬಿಕೊಂಡು, ಹಣೆಯಲ್ಲಿ ಕುಂಕುಮ ಹಚ್ಚಿಕೊಂಡಿರುವ ಈ ದೈವಗಳ ವೇಷಭೂಷಣಗಳು ಅದ್ಭುತವಾಗಿ ಕಾಣಿಸುತ್ತವೆ.

ಈ ದೈವಗಳು ಉಡುವ ಸೀರೆಯ ಪರಿಯನ್ನು ಕುರಿತಂತೆ ಜನಪದ ಗರತಿ ಹೀಗೆ ಹೇಳುತ್ತಾಳೆ.

ಎಲ್ಲಮ್ಮ ಉಡುವದು ಎಳ್ಳ ಹೂವಿನ ಸೀರಿ
ಬಡವರದಾಕೆ ದಾಮವ್ವ ಉಡವಸೀರಿ
ಎಳಿಎಳಿಗೆಲ್ಲ ಬಿಳಿಮುತ್ತು ॥

ಕಾಳಮ್ಮ ಉಟ್ಟಾಗ ಕಾಡಿಗಣಿಸಿ ಸೀರಿ
ಕಾಲಗ್ಹಾಕ್ಯಾಳರುಳಿಕಡ ಹಳಕಟ್ಟಿ
ಈರಣ್ಣಗ ಈಳ್ಯಾ ಮಡಚ್ಯಾಳ ॥

ಎಲ್ಲಮ್ಮ ಉಡುವಾದುಳ್ಳ ಹೂವಿನ ಸೀರಿ
ಜಗದುಂಬುಡುವಾದು ಎಲ್ಲಿ ಬೇವು
ನಾಗರಗಂಬಿ ಸೀರಿ ನಾಕ್ಷಾರದ್ಹೊನ್ನೋಲೆ
ಪಂಚಕದ ಗಿಂಡಿ ಬಲಗೈಲಿ ಹಿಟ್ಕೊಂಡು
ಪಂಚಮಿದ ಮಾಡ್ಯಾಳೆ ಮಾಕಾಳಿ ॥[೪೦]

ಈ ತ್ರಿಪದಿಗಳಲ್ಲಿ ಎಲ್ಲಮ್ಮ ಕಾಳಮ್ಮ ಮಾಪೂರತಾಯಿ, ಮಾಕಾಳಿ ಈ ದೈವಗಳು ಉಡುವ ಸೀರೆಗಳ ಸ್ವರೂಪದ ಬಗೆಗೆ ತಿಳಿಸಿದರೆ, ಈ ಕೆಳಗಿನ ತ್ರಿಪದಿಗಳಲ್ಲಿ ಆಭರಣಗಳ ವಿಶಿಷ್ಟತೆ ಕುರಿತು ಹೇಳುತ್ತಾಳೆ.

ಉಂಗುರದ ಕಾಲ ಊರೂತ ಜಾರೂತ
ಬಂಗಾರದ ನಡುವ ಬಳಕುತ । ಚೌಡಮ್ಮ
ಬಂದಾಳು ಬಳೆಯ ಹಸುರಾಕೆ ॥

ಪಿಲ್ಲಿ ಕಾಲೋಳೆ ಪಿರಿಯಾಪಟ್ಟಣದೋಳೆ
ಕಲ್ಲ ಮೇಲೆ ಪಾದ ತೋಳೆಯೋಳೇ ಮಾಕಾಳಮ್ಮ
ಪಿಲ್ಲಿ ಸಾವಿರಕ್ಕೆ ಬೆಲೆಯಾದರೂ ॥[೪೧]

ಎನ್ನುವಲ್ಲಿ ಕಾಲುಂಗುರ ಕಾಲಪಿಲ್ಲಿ, ಹಸಿರು ಪ್ರಸ್ತಾಪ ಬರುತ್ತದೆ. ಜನಪದ ಗರತಿಯ ಭಾವನೆಯಲ್ಲಿ ಈ ಹೆಣ್ಣು ದೈವಗಳು ಸಕಲಾಲಂಕಾರ ಭೂಷಿತೆಯರಾಗಿ ಕಂಡಿವೆ. ಕಸ್ತೂರಿ ಸೀರೆಯವಳು, ಕಣ್ಣಕಪ್ಪ ಮುಖದೋಳು, ಚಿತ್ತಾರವನುಟ್ಟವಳು, ಬೈತಲೆಯ ಬಿಟ್ಟವಳು, ಅಂಚಿನ ಸೀರೆಯವಳು, ಕಂಚಕಸ್ತೂರಿಯವಳು ಇಂಥ ಪದಗಳಲ್ಲಿ ಕಾಣಿಸುವ ವರ್ಣನೆ ಗಮನ ಸೆಳೆಯುತ್ತದೆ.

ಹೌದನ್ನೆದೇವಿ ಗರಡಾನೇರ್‍ಯಾಳ ರಾಮನ ತಾಯಿ
ಆನಂದಮಾಯಿ ಕುದರಿಯೇಳ ರಾಮನ ತಾಯಿ
ಬಂಗಾರದ ಕುಪ್ಪೆಬ್ಯಾರಿ ಮ್ಯಾಲ ಜಗದಂಬಾ ಕುಂತಾಳ ಹುಲಿಯೇರಿ ॥

ಮಾಯ್ಲ ನಿಂತವ್ವೆ ನೀರಾಲ ನೋಡ್ತವ್ವೆ
ಏರಿಗು ನೀರಿಗು ಸುಮನೆಂದು/ಕಾಳಮ್ಮ
ಏಳಿವ್ವೆ ಹೋನ್ನ ಕುದುರೇಯ ಕೊಡಬೇಕೋ
ಚಿಂತಯ ಅಮ್ಮನ ನೋಡಬೇಕೋ ॥[೪೨]

ಈ ಮೊದಲಾದ ಹಾಡುಗಳಲ್ಲಿ ಈ ದೈವಗಳ ವಾಹನಗಳನ್ನು ಕುರಿತಂತೆ ವಿವರವಾಗಿ ಹೇಳಲಾಗಿದೆ. ಶಿಷ್ಟದೈವಗಳು ಸಾಧುಪ್ರಾಣಿಗಳ ಮೇಲೆ ಸವಾರಿ ಮಾಡಿದರೆ ಈ ಶಕ್ತಿದೈವಗಳು ಕ್ರೂರ ಪ್ರಾಣಿಗಳ ಮೇಲೆ ಸವಾರಿ ಮಾಡುವುದು ವಿಶಿಷ್ಟವಾಗಿ ಕಾಣಿಸುತ್ತದೆ. ಹುಲಿಯ ಮೇಲೆ ಕುಳಿತು ಸವಾರಿ ಮಾಡುತ್ತಲೇ ಇರುವ ಸವಾರೆಮ್ಮನೆಂಬ ದೇವತೆ ರಾಯಚೂರಿನ ಮಡ್ಡಿಪೇಟೆಯಲ್ಲಿದ್ದಾಳೆ.

**ಚೌಡಿಕೆ ಪದಗಳ ಲಕ್ಷಣಗಳು**

ಕೊಪ್ಪಳ ಜಿಲ್ಲೆಯಲ್ಲಿ ಹಾಡಲ್ಪಡುವ ಚೌಡಿಕೆ ಪದಗಳ ಸಾಮಾನ್ಯ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಸಾಮಾನ್ಯವಾಗಿ ಚೌಡಿಕೆ ಪದಗಳು ರೇಣುಕ ಎಲ್ಲಮ್ಮ ಹಾಗೂ ಅವಳ ಪರಿವಾರವನ್ನು ಕೇಂದ್ರಬಿಂದುವಾಗಿಸಿಕೊಂಡಿವೆ.

೨. ಜನಪದ ಪದ್ಯ ಸಾಹಿತ್ಯ ಇತರೇ ಪ್ರಕಾರಗಳಲ್ಲಿರುವಂತೆ ಚೌಡಿಕೆ ಪದಗಳಲ್ಲಿಯೂ ಪಲ್ಲವಿ ಅನುಪಲ್ಲವಿಗಳಿದ್ದು ಪ್ರತಿನುಡಿಯ ಮುಕ್ತಾಯಕ್ಕೆ ಅವುಗಳ ಪುನರಾವೃತ್ತಿಯಾಗುತ್ತದೆ.

೩. ಸರಳವಾದ ನೇರ ನಿರೂಪಣೆ ಪ್ರಾಸ, ಅನುಪ್ರಾಸ ಹಾಡುಗಳಲ್ಲಿ ಸರ್ವೆಸಾಮಾನ್ಯವಾದರೂ ಅಂತ್ಯ ಪ್ರಾಸಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದು ಕಂಡುಬರುತ್ತದೆ. ಹಾಡುಗಳು ಸಾಮಾನ್ಯವಾಗಿ ಅಂಶಗಣದ ಮೇಲೆ ಅವಲಂಬಿಸಿ ನಿರ್ಮಾಣಗೊಂಡಿವೆ.

೪. ಕ್ವಚಿತ ಎನಿಸುವಂತೆ ಕೆಲವು ಹಾಡುಗಳಲ್ಲಿ ಸಂಭಾಷಣೆ ಇಣುಕಿದರೂ ಇಂಥ ರಚನೆಗಳು ವಿರಳವಾಗಿರುವುದೊಂದು ವಿಶೇಷ.

೫. ಹಾಡುಗಳಲ್ಲಿ ಸಾಹಿತ್ಯಿಕ ಅಂಶ ಕಡಿಮೆ. ಹಾಗೆಯೇ ವಿಷಯ ವೈವಿಧ್ಯವೂ ಅಷ್ಟಕ್ಕಷ್ಟೇ. ಎಲ್ಲಮ್ಮ ಹಾಗೂ ಅವಳ ಪರಿವಾರ ಬಿಟ್ಟು ಹಾಡಿನ ವ್ಯಾಪ್ತಿಗೆ ಹೊರಗೆ ಪಸರಿಸುವುದೇ ಇಲ್ಲ.

೬. ಕೆಲವು ಹಾಡುಗಳಲ್ಲಿ ಕೃತಿಕಾರ ಹಾಡಿನ ಕೊನೆಯಲ್ಲಿ ತನ್ನ ಊರು, ಆರಾಧ್ಯ ದೈವ ಇಲ್ಲವೆ, ತನ್ನ ನಿಜನಾಮ ಪ್ರಕಟಿಸಿದ್ದುಂಟು.

೭. ಚೌಡಿಕೆ ಪದಗಳ ಧಾಟಿ ಮಹತ್ವಪೂರ್ಣವಾದುದು. ಈ ಧಾಟಿಯನ್ನು ಹಿಡಿದು ಅವರು ಹೇಳಬೇಕಾದುದರಲ್ಲಿ ಬೇಕಾದ ವ್ಯತ್ಯಾಸ ಮಾಡಿಕೊಳ್ಳುವರು. ಬ್ಯಾಲಗಳಂತೆ ತೀವ್ರ ಲಯದೊಂದಿಗೆ ಪ್ರಾರಂಭಗೊಳ್ಳುವ ಈ ಹಾಡುಗಳ ಪ್ರತಿನುಡಿಯು ದೃತಲಯದಲ್ಲಿ ಕೊನೆಗೊಳ್ಳುತ್ತದೆ.[೪೩]

ಒಟ್ಟಿನಲ್ಲಿ ಧಾರ್ಮಿಕ ಹಿನ್ನೆಲೆ ಹೊಂದಿದ ಚೌಡಿಕೆ ಹಾಗೂ ಚೌಡಿಕೆ ಪದಗಳು ಜನತೆಯ ಹೃದಯದಲ್ಲಿ ಧಾರ್ಮಿಕ ಹಾಗೂ ದೈವಿಕ ಭಾವ ಸ್ಥಾಯಿಯಾಗಿ ನೆಲೆಗೊಳ್ಳಲು ಕಾರಣವಾದರೂ ಅವುಗಳ ಪ್ರಸಾರವನ್ನೇ ತಮ್ಮ ವೃತ್ತಿ-ಪ್ರವೃತ್ತಿಯನ್ನಾಗಿಸಿಕೊಂಡ ಜೋಗತಿಯರ ಬಗ್ಗೆ ಸಮಾಜದ

ಜನತೆ ನಿಕೃಷ್ಟ ಭಾವನೆ ಹೊಂದಿರುವುದು ಕಂಡುಬರುತ್ತದೆ. ವಂಶಪರಂಪರೆ ಹಾಗೂ ವೈಯಕ್ತಿಕ ಕಾರಣಗಳಿಗಾಗಿ ಧಾರ್ಮಿಕ ವಿಧಿ ಕ್ರಿಯೆಗಳಿಗೊಳಪಡುವ ಮೂಲಕ ಎಲ್ಲಮ್ಮನನ್ನೇ ಗಂಡನನ್ನಾಗಿ ಸ್ವೀಕರಿಸುವ ಜೋಗತಿಯರು ಇಚ್ಛಿತ ಪುರುಷನೊಡನೆ ಲೈಂಗಿಕ ಸಂಬಂಧ ಬೆಳೆಸಬಹುದೆಂಬ ಸಾಂಪ್ರದಾಯಿಕ ನಂಬಿಕೆ ಸೂಳಿಗಾರಿಕೆಗೆ ಎಡೆಮಾಡಿಕೊಟ್ಟಿದೆ. ಸಾಮಾನ್ಯ ಮಹಿಳೆಯರಂತೆ ಮದುವೆ ಮಾಡಿಸಿ ವೈವಾಹಿಕ ಜೀವನಕ್ಕೆ ಭದ್ರಬುನಾದಿ ಹಾಕುವ ಮೂಲಕ ಜೋಗತಿ ಸಂಪ್ರದಾಯಕ್ಕೆ ವಿದಾಯ ಹೇಳುವ ಭರದಲ್ಲಿ ವಂಶಪರಂಪರೆಯಾಗಿ ಅವರು ಪೋಷಿಸಿಕೊಂಡು ಬಂದ ಚೌಡಿಕೆ ಪದಗಳೆಡೆಗೆ ಗಮನಹರಿಸದ್ದರಿಂದ ಅವು ಕೊಚ್ಚಿಕೊಂಡು ಹೋಗಿ ಕಾಲಗರ್ಭ ಸೇರುತ್ತಿವೆ.

**ಅಡಿಟಿಪ್ಪಣಿಗಳು**

೧. ಹನುಮಂತಪ್ಪ ಸಂಜೀವಣ್ಣನವರ, ೨೦೦೭, **ಕನ್ನಡ ಸಾಹಿತ್ಯಕ್ಕೆ ಹಾವೇರಿ ಜಿಲ್ಲೆಯ ಕೊಡುಗೆ,** ಪುಟ ೫೨೯-೫೩೦.

೨. ಮಾರೆಮ್ಮ, ವಿದ್ಯಾನಗರ.

೩. ದುರಗಮ್ಮ, ವಿದ್ಯಾನಗರ.

೪. ವೀರಣ್ಣ ದಂಡೆ ಮತ್ತು ಶ್ರೀಪಾದಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೨೯೧-೨೯೨.

೫. ಸೀತಾರಾಮಯ್ಯ ವಿ., ೧೯೭೮, **ಕವಿಕಾವ್ಯ ಪರಂಪರೆ ಜನಪದ ಸಾಹಿತ್ಯ,** ಪುಟ ೯೮-೯೯.

೬. ಬಿಸರಹಳ್ಳಿ, ಸಾರೆವ್ವಕಾಳಿ.

೭. ಲಕ್ಷ್ಮವ್ವ, ವಡ್ಡರಹಟ್ಟಿ

೮. ಯಮನಮ್ಮ, ವಿದ್ಯಾನಗರ.

೯. ಲಕ್ಷ್ಮವ್ವ, ಅಲ್ಲಾನಗರ.

೧೦. ನಿಂಗಮ್ಮ ಜಂಗಮರ ಕಲ್ಗುಡಿ.

೧೧. ವೀರಣ್ಣ ದಂಡೆ ಮತ್ತು ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೩೬೮.

೧೨. ಅದೇ., ಪುಟ ೩೬೯-೩೭೦.

೧೩. ಶ್ರೀ ನೀಲಮ್ಮ ಹಳಿಹುಂಡಿ

೧೪. ಯಮನಮ್ಮ ವಡ್ಡರಹಟ್ಟಿ

೧೫. ಮಾರೆಮ್ಮ ವಿದ್ಯಾನಗರ

೧೬. ಜೀವನಸಾಬ ವಾಲೀಕಾರ ಬಿನ್ನಾಳ.

೧೭. ಜೀವನಸಾಬ ವಾಲೀಕಾರ ಬಿನ್ನಾಳ.

೧೮. ನಾರಾಯಣ ಗಿರಿಯಪ್ಪ, ೨೦೦೭, **ಆನೆಗೊಂದಿ ಜಾನಪದ,** ಪುಟ ೨೮–೨೯.

೧೯. ಹುಲಿಗೆಮ್ಮ, ವಿದ್ಯಾನಗರ.

೨೦. ಗಂಗಮ್ಮ, ಇಟಗಿ ವಿದ್ಯಾನಗರ.

೨೧. ರತ್ನಮ್ಮ, ವಿದ್ಯಾನಗರ.

೨೨. ಮಲಿಯಮ್ಮ, ವಿದ್ಯಾನಗರ.

೨೩. ಯಶೋಧರ ಶಾಸ್ತ್ರಿ, ೧೯೯೯, **ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು,** ಪುಟ ೧೨೪-೧೨೫.

೨೪. ಅದೇ., ಪುಟ ೩೫-೩೬

೨೫. ವೀರೇಂದ್ರ ಸಿಂಪಿ, ೨೦೦೭, **ಡಾ. ಸಿಂಪಿಲಿಂಗಣ್ಣ ಸಮಗ್ರ ಜನಪದ ಸಂಪುಟ,** ಪುಟ ೧೮೬-೧೮೭.

೨೬. ಯಶೋಧರ ಶಾಸ್ತ್ರಿ, ೧೯೯೯, **ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು,** ಪುಟ ೪೨.

೨೭. ಅದೇ., ಪುಟ ೪೬-೪೭.

೨೮. ವೀರೇಂದ್ರ ಸಿಂಪಿ, ೨೦೦೭, **ಡಾ. ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ,** ಪುಟ ೧೮೯-೧೯೦.

೨೯. ಯಶೋಧರ ಶಾಸ್ತ್ರಿ, ೧೯೯೯, **ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು,** ಪುಟ ೫೧.

೩೦. ಅದೇ., ಪುಟ ೭೭-೭೮.

೩೧. ಶ್ರೀ ಜಗದೀಶನಾ ಬಾಲಹುಣಸಿ, ೨೦೦೬, **ಕೊಪ್ಪಳ ಗವಿಮಠ : ಸಾಂಸ್ಕೃತಿಕ ಅಧ್ಯಯನ,** ಪುಟ ೨೨೦.

೩೨. ಯಶೋಧರ ಶಾಸ್ತ್ರಿ, ೧೯೯೯, **ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು,** ಪುಟ ೮೦.

೩೩. ಶ್ರೀ ದುರ್ಗಪ್ಪ ಸುಭಾಸ ದೊಡ್ಡಮನಿ, ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೫೯೩.

೩೪. ಗೀತಾ ಬಿ.ವಿ., ೨೦೦೯, **ತುಂಗೆ ಮಡಿಲ ಜನಪದ,** ಪುಟ ೧೨೬-೧೨೭.

೩೫. ಮೃತ್ಯುಂಜಯ ಹೊರಕೇರಿ., ೨೦೦೩, **ಚದುರ ಜಾನಪದ,** ಪುಟ ೪೪-೪೫.

೩೬. ಹಂದ್ರಾಳ ಹನುಮಂತಪ್ಪ ಪರಸಪ್ಪ ಚೌಡಿಕಿ.

೩೭. ದೇವಪ್ಪ ಜೋಗತಿ, ಹುಲಿಗಿ.

೩೮. ಶ್ರೀಮತಿ ಕಾಳವ್ವ, ಹುಲಿಗಿ.

೩೯. ಹುಲಿಗೆಮ್ಮ, ಹುಲಿಗಿ ಹೊಸಳ್ಳಿ.

೪೦. ಜೋಗಮ್ಮ ತಂಡ ಬಿಸರಹಳ್ಳಿ.

೪೧. ದೇವಪ್ಪ ಜೋಗತಿ, ಹುಲಿಗಿ.

೪೨. ಶ್ರೀಮತಿ ಕಾಳವ್ವ, ಹುಲಿಗಿ.

೪೩. ಶ್ರೀ ದುರ್ಗಪ್ಪ ಸುಭಾಸ ದೊಡ್ಡಮನಿ, ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಪುಟ ೫೯೪.

□□

ಅಧ್ಯಾಯ : ಆರು

# ಮಕ್ಕಳ ಹಾಡುಗಳು(ಶಿಶುಪ್ರಾಸಗಳು)

ಆಟಗಳಿಗೆ ಹೊಂದಿಕೊಂಡು ಬರುವ ಮಕ್ಕಳ ಹಾಡುಗಳನ್ನು ಮಕ್ಕಳ ಹಾಡುಗಳು ಎಂದು ಗುರುತಿಸಲಾಗುತ್ತದೆ. ಆಟಗಳಿಗೆ ಹಿನ್ನೆಲೆಯಾಗಿಯೊ ಪಲ್ಲವಿಯಾಗಿಯೋ ಅಥವಾ ಆಟದೊಡನೆ ಕ್ರಿಯಾಶೀಲವಾಗಿಯೋ ಇವು ಇರುತ್ತವೆ. ಆಟದ ಬಯಲಿನಲ್ಲಿ ಬಳಕೆಯಾಗುವ ಇವು ಮಕ್ಕಳು ಕೂಡಿ ಆಡುತ್ತಿರುವಾಗಲೇ ಅನೈಚ್ಛಿಕವಾಗಿ ಸೃಷ್ಟಿಯಾಗುವಂಥವು. ಮುಖ್ಯವಾಗಿ ಇವು ಪರಿಸರದ ಸ್ಫೂರ್ತಿಯಿಂದ, ಆಟಗಳ ಪ್ರಚೋದನೆಯಿಂದ ಮತ್ತು ಅಂತಃಪ್ರೇರಣೆಯಿಂದ ಮೂಡಿ ಬರುವಂಥವು. ಮಕ್ಕಳ ಆಟದ ಹಾಡುಗಳು ಎಂದಾಗ ಮಕ್ಕಳ ಆಟದ ಸಂದರ್ಭದಲ್ಲಿ ಹಾಡಿಕೊಳ್ಳುವಂಥವು ಎಂದರ್ಥವಾಗುತ್ತದೆ. ಸ್ವಯಂ ಮಕ್ಕಳೇ ಪರಿಸರದ ಸ್ಫೂರ್ತಿಯಿಂದ ರಚಿಸಿದ ಹಾಡುಗಳು ಇವು. ಆದರೆ ಮಕ್ಕಳನ್ನು ಕುರಿತು ದೊಡ್ಡವರ ರಚಿಸಿರುವ ಹಾಡುಗಳನ್ನು ಮತ್ತು ಮಕ್ಕಳಿಗಾಗಿ ತಾಯಂದಿರು ಕಟ್ಟಿದ ರಚನೆಗಳನ್ನು ಕೂಡ ಮಕ್ಕಳ ರಚನೆಗಳಲ್ಲಿವಾದ್ದರಿಂದ ಪ್ರಕೃತ ವಿಷಯದ ವಿವೇಚನೆಯ ವ್ಯಾಪ್ತಿಗೆ ಸೇರುವುದಿಲ್ಲ. ಇಂಗ್ಲಿಶಿನ Nurary Rhymeಗೆ ಸಂವಾದಿಯಾಗಿ ಕನ್ನಡದಲ್ಲಿ ಶಿಶುಪ್ರಾಸ ಪದವನ್ನು ಬಳಸಲಾಗುತ್ತದೆ. ಮಕ್ಕಳ ಪ್ರಾಸಬದ್ಧ ಪದ್ಯ ರಚನೆಗಳು ಹಾಡಿನಂತೆ ಗೋಚರಿಸುವುದರಿಂದ (ಮಕ್ಕಳ) 'ಶಿಶುಗೀತೆ', 'ಮಕ್ಕಳ ಹಾಡು' ಎಂದು ಕರೆಯಲಾಗುತ್ತಿದೆ. ಆಟವಾಡುತ್ತಿರುವಾಗಲೇ ಮಕ್ಕಳ ಬಾಯಿಂದ ಮಾತುಗಳು ಪ್ರಾಸಬದ್ಧವಾಗಿ ಸೃಷ್ಟಿಯಾಗುತ್ತವೆ. ಆಟದ ಹಾಡುಗಳ ಇನ್ನೊಂದು ವಿಶೇಷ ಎಂದರೆ ಆಟ ಹೇಗೆ ಸ್ಪರ್ಧಾತ್ಮಕವೊ ಆಟದ ಹಾಡುಗಳು ಕೂಡ ಸ್ಪರ್ಧಾ ಮನೋಭಾವದಿಂದ ಪ್ರೇರಿತವಾದವು. ಮಕ್ಕಳ ಆಟದ ಹಾಡುಗಳು ಜನಪದ ಸಾಹಿತ್ಯದ ಇತರ ರೂಪ(Genre)ಗಳಂತೆ ಸಮುದಾಯದ ಸೃಷ್ಟಿಗಳಾಗಿವೆ. ಪದ ಚಮತ್ಕಾರ ಈ ಹಾಡುಗಳ ವೈಶಿಷ್ಟ್ಯ. ವಿರಳವಾಗಿ ಅರ್ಥ ಕಾಣಿಸಿಕೊಳ್ಳುವ ಕೆಲವು ರಚನೆಗಳಂತೂ ನೇರ ಮತ್ತು ಸರಳ ಸ್ವರೂಪ ಹೊಂದಿರುತ್ತವೆ. ಅವುಗಳ ಬಂಧ ಹಲವು ವೇಳೆ ಜಾಳುಜಾಳಾಗಿರುತ್ತದೆ. ಆಟದ ಹಾಡುಗಳು ಒಳ್ಳೆಯ ಕಾವ್ಯವಲ್ಲವಾದರೂ ಚಿಕ್ಕ ಮಕ್ಕಳು ಬಹಳವಾಗಿ ಪ್ರೀತಿಸುವ ನೆನಪಿನಲ್ಲಿಟ್ಟುಕೊಳ್ಳುವ ಲಯಬದ್ಧ ರಚನೆಗಳಾಗಿವೆ.

ಇವು ಸಹೃದಯರನ್ನು ವ್ಯವಹಾರಿಕ ಲೋಕದಿಂದ ಕುತೂಹಲಭರಿತ ರಮ್ಯಲೋಕಕ್ಕೆ ಕೊಂಡೊಯ್ಯುತ್ತವೆ. ಇವುಗಳು ಮಕ್ಕಳಿಗೆ ಅಪಾರ ಮೌಖಿಕ ವಾಕ್‌ಪರಂಪರೆಯಲ್ಲಿ ಹರಿದು ಬಂದಿರುತ್ತವೆ. ಇವು ಮಕ್ಕಳಿಗೆ ಅಪಾರ ಮನರಂಜನೆಯನ್ನು ಕೊಡುತ್ತವೆ. ಕುತೂಹಲಕಾರಿ ವಸ್ತುವಿಷಯಗಳು ಪ್ರಾಸಗಳ ನಾದ ಮಾಧುರ್ಯ ಇವುಗಳ ವೈಶಿಷ್ಟ್ಯ. ಇವು ಪ್ರಿಯವಾದ

ಪದಪುಂಜಗಳ ನಾದದಿಂದ ಭಾಷೆಯ ಬೆರಗಿನಿಂದ ಹಲವು ವಿಧದಲ್ಲಿ ನಿನಾದಗೈದು ಮಕ್ಕಳ ಮನಸ್ಸನ್ನು ಸೂರೆಗೊಂಡು ಅಲಿಸಲಾಗದ ನೆನಪಿನ ಮುದ್ರೆಯನ್ನು ಮನಸ್ಸಿನಲ್ಲಿ ಮೂಡಿಸುತ್ತವೆ. ಲಿಖಿತ ರೂಪದಲ್ಲಿ ಲಭ್ಯವಾಗುವ ಮತ್ತು ದೊಡ್ಡವರು ಕಲಿಸುವ ಹಾಡುಗಳಿಗಿಂತ ತಮ್ಮ ವಾರಿಗೆಯವರ ಬಾಯಲ್ಲಿ ಬರುವ ಹಾಡುಗಳೇ ಮಕ್ಕಳಿಗೆ ಅಚ್ಚುಮೆಚ್ಚು ಆಟದ ಹಾಡುಗಳ ಬೆಳವಣಿಗೆಯನ್ನು ಈ ಆಧಾರದ ಮೇಲೆ ಗುರುತಿಸಬಹುದು.[೧]

ಶಿಶುಪ್ರಾಸಗಳು ಜನಪದ ಆಟಗಳೊಂದಿಗೆ ಬೆಳೆದು ಬಂದಿರುವುದರಿಂದ ಮಕ್ಕಳಿಗೆ ಸಹಜವಾಗಿಯೇ ಆನಂದ ಉತ್ಸಾಹ, ಉಲ್ಲಾಸ ಹಾಗೂ ಮನರಂಜನೆಯನ್ನು ಕೊಡುವವು ಮಕ್ಕಳ ದೈಹಿಕ, ಬೌದ್ಧಿಕ ವಿಕಾಸಕ್ಕೆ ನೆರವು ನೀಡುತ್ತವೆ. ಹಾಳುಹರಟೆ ಹೊಡೆಯುವ ಪ್ರವೃತ್ತಿಯನ್ನು ದೂರಮಾಡಿ ವಿರಾಮ ವೇಳೆಯ ಸದುಪಯೋಗವಾಗುವಂತೆ ಮನಸ್ಸು ಕಾರ್ಯೋನ್ಮುಖವಾಗುವಂತೆ ಅವರಿಗೆ ಉತ್ತೇಜನ ನೀಡುತ್ತವೆ.

ಎಳೆಯ ವಯಸ್ಸಿನಿಂದಲೇ ಮಕ್ಕಳನ್ನು ಕ್ರಿಯಾಶೀಲರನ್ನಾಗಿ ಮಾಡಲು ಅವು ಸಹಕಾರಿ. ಮಕ್ಕಳಲ್ಲಿ ಶಿಸ್ತು, ಸಾಂಘಿಕ ಜೀವನ ನಡೆಸಲು ಪರೋಕ್ಷವಾಗಿ ತರಬೇತಿ ನೀಡುತ್ತವೆ. ಶಿಶುಪ್ರಾಸಗಳಲ್ಲಿ ಅರ್ಥದ ಸೊಬಗಿಗಿಂತ ಶಬ್ದ ಸಂಯೋಜನೆಯೇ ಮುಖ್ಯವಾಗಿರುವುದರಿಂದ ಭಾಷಿಕ ಶುದ್ಧ ನಿರರ್ಗಳ ಉಚ್ಚಾರಣೆಗೆ ಅವು ತುಂಬ ನೇರವಾಗುತ್ತವೆ. ಆಧುನೀಕರಣದ ಅಥವಾ ವೈಜ್ಞಾನಿಕತೆಯ ಪ್ರಭಾವದಿಂದ ಶಿಶುಪ್ರಾಸಗಳು ಕಣ್ಮರೆಯಾಗುತ್ತಿವೆ. ಸಾಧ್ಯವಿದ್ದ ಮಟ್ಟಿಗಾದರೂ ಅವುಗಳನ್ನು ಉಳಿಸಿಕೊಳ್ಳಬೇಕಾಗಿದೆ. ಪೂರ್ವ ಪ್ರಾಥಮಿಕ ಪಠ್ಯಕ್ರಮದಲ್ಲಿ ಅವುಗಳನ್ನು ಸೇರಿಸಬೇಕು. ಶಾಲೆಗಳಲ್ಲಿ ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಶಿಶುಪ್ರಾಸಗಳಿಗೆ ಪ್ರಾಧಾನ್ಯತೆ ಕೊಡಬೇಕು. ಇದರಿಂದ ಮಕ್ಕಳ ಗ್ರಹಣಶಕ್ತಿ, ಕಲ್ಪನಾಶಕ್ತಿ ಬೆಳೆಸಿದಂತಾಗುತ್ತದೆಯಲ್ಲದೆ ಬೋಧನೆಯ ಯಶಸ್ವಿಯಾಗುವುದು. ಜಾನಪದ ಗೀತ ಸಾಹಿತ್ಯದ ಇತರ ಪ್ರಕಾರಗಳನ್ನು ಹೋಲಿಸಿದಾಗ ಶಿಶುಪ್ರಾಸಗಳ ಬಗೆಗೆ ಈಗಾಗಿರುವ ಕೆಲಸ ತುಂಬ ಕಡಿಮೆಯೆಂದೇ ಹೇಳಬೇಕು. ಬಿ.ಎಸ್. ಗದ್ದಗಿಮಠರು ತಮ್ಮ ನಿಬಂಧದ ಕನ್ನಡ ಜನಪದ ಗೀತೆಗಳು, ಮಕ್ಕಳ ಆಟದ ಹಾಡುಗಳು ಎಂಬ ಅಧ್ಯಾಯದಲ್ಲಿ ಜನಪದ ಆಟಗಳನ್ನು ಕುರಿತು ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದ್ದಾರೆ. ಎಂ.ಎಂ. ಕಲಬುರ್ಗಿಯವರು ಉತ್ತರ ಕರ್ನಾಟಕ ಜನಪದ ಪದ್ಯ ಸಾಹಿತ್ಯ ಎಂಬ ಗ್ರಂಥದಲ್ಲಿ ಮಕ್ಕಳ ಹಾಡುಗಳ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಜೀ.ಶಂ. ಪರಮಶಿವಯ್ಯನವರು 'ಹೊನ್ನ ಬಿತ್ತೇವು ಹೊಲಕ್ಕೆಲ' ಎಂಬ ಗ್ರಂಥದಲ್ಲಿ ದಕ್ಷಿಣ ಕರ್ನಾಟಕದ ಜನಪದ ಸಾಹಿತ್ಯದಲ್ಲಿ ಮಕ್ಕಳ ಹಾಡುಗಳನ್ನು ಕುರಿತು ವಿವೇಚಿಸಿದ್ದಾರೆ. ಎನ್.ಆರ್. ನಾಯಕ ಮತ್ತು ಶ್ರೀಮತಿ ಶಾಂತಿನಾಯಕ ಜೊತೆ ಸೇರಿ ಸಂಪಾದಿಸಿದ 'ಉತ್ತರ ಕನ್ನಡ ಜಿಲ್ಲೆಯ ಜನಪದ ಆಟಗಳು' ಎಂಬ ಗ್ರಂಥದಲ್ಲಿ ವಿವರಿಸುವಾಗ ಪ್ರಾಸಂಗಿಕವಾಗಿ ಶಿಶುಪ್ರಾಸಗಳನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ. ಎಸ್.ಎಸ್. ಅಂಗಡಿ ಅವರು ಬೆಳಗಾವಿ ಜಿಲ್ಲೆಯನ್ನು ಅನುಲಕ್ಷಿಸಿ 'ಕನ್ನಡ ಶಿಶುಪದ'ಗಳನ್ನು ಸಂಪಾದಿಸಿದ್ದಾರೆ. ಒಂದು ಪ್ರದೇಶದ ಜನಪದ ಆಟಗಳನ್ನು ಪರಿಚಯಿಸುವ ಮೌಲಿಕ ಕೃತಿ ಇದಾಗಿದೆ. 'ಜಾನಪದ'ವೆಂಬ ಷಣ್ಮಾಷಿಕ ನಾಲ್ಕನೇ ಸಂಚಿಕೆಯಲ್ಲಿ ಡಿ.ಕೆ. ರಾಜೇಂದ್ರ ಅವರು ಶಿಶುಪ್ರಾಸಗಳು ಬಗೆಗೆ ಲೇಖನಗಳನ್ನು ಬರೆದಿದ್ದಾರೆ.

‘ಜಾನಪದ’ ಸಂಚಿಕೆ ಮೂರನೆಯದಲ್ಲಿ ಬಿ.ಎ. ವಿವೇಕ ರೈಯವರು ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಜನಪದ ಕಲಾತ್ಮಕ ವಿನೋದಗಳು ಎಂಬ ಲೇಖನ ಬರೆದಿದ್ದಾರೆ. ಟಿ.ಎಸ್. ಸತ್ಯನಾಥ್ ಅವರು ಆಟಗಳು ಮನೋವೈಜ್ಞಾನಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಎಂಬ ಮೌಲಿಕ ಲೇಖನವೊಂದನ್ನು ಬರೆದಿದ್ದಾರೆ. ಅದು ಆಟಗಳ ಬಗೆಗೆ ಹೊಸ ರೀತಿಯ ವಿವೇಚನೆಯನ್ನೊಳಗೊಂಡಿದೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಟಿಸಿದ ‘ಜನಪದ ಆಟಗಳು’ ಎಂಬ ಗ್ರಂಥದಲ್ಲಿ ಜನಪದ ಆಟಗಳಿಗೆ ಸಂಬಂಧಿಸಿದ ಆರು ಮೌಲಿಕ ಲೇಖನಗಳಿವೆ. ಜನಪದ ಆಟಗಳ ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಈ ಗ್ರಂಥ ತುಂಬ ಉಪಯುಕ್ತವಾಗಿದೆ. ಈ ಗ್ರಂಥದಲ್ಲಿ ಪ್ರಾಸಂಗಿಕವಾಗಿ ಶಿಶುಪ್ರಾಸಗಳ ಬಗೆಗೂ ಚರ್ಚಿಸಲಾಗಿದೆ.[೨]

ಮಾನವನ ಜೀವನವು ಅವನ ಬಾಲ್ಯದ ಮೇಲೆ ಬಹಳ ಅವಲಂಬಿಸಿರುವುದು. ಆಡಿ, ಹಾಡಿ ಓಡಾಡದ ಮಕ್ಕಳ ದೇಹಾರೋಗ್ಯ ಬುದ್ಧಿಗಳು ಸಮೃದ್ಧಿಯಾಗುವ ಬಗೆ ಹೇಗೆ ತಾಯಿಯ ಹೊಟ್ಟೆಯಿಂದ ಜಾರಿ ಕೂಸು ಜಗತ್ತಿನ ಬೆಳಕನ್ನು ಕಂಡಕೂಡಲೇ ಚೀರಿ ಹೊಸೆದಾಡಿ ಆಳುವುದೇ ಅದರ ಮೊದಲನೆಯ ಆಟ ದಿನಗಳೆದ ಮೇಲೆ ಕಾಲೆತ್ತಿ ಬೆರಳಾಡಿನ ತನ್ನದೇ ಆದ ಒಂದು ರಾಗದಲ್ಲಿ ಕೂಸು ಹಾಡಿ ಆಡುವುದನ್ನು ನಾವು ನೋಡುತ್ತೇವೆ. ಕೂಸು ಬೆಳೆಯ ಹತ್ತಿದ ಮೇಲೆ ಗುನುಗುನು ಹಾಡಿ ಆಡುವುದು. ಹಾಡಿ ಆಡುವುದೇ ಅದರ ದೇಹಕ್ಕೆ ವ್ಯಾಯಾಮ. ಗದ್ಯಕ್ಕಿಂತ ಪದ್ಯವೇ ಸರಳವಾಗುವುದೇನೋ ಎಂಬಂತೆ ಕೂಸು ಮಾತಾಡಲು ಪ್ರಯತ್ನ ಮಾಡುವ ಮಾತುಗಳೂ, ಹರಕುಮುರುಕು ಪ್ರಯತ್ನ ಮಾಡುವ ಮಾತುಗಳೂ ರಾಗಗಳೇ ಆಟದ ಭರದಲ್ಲಿ ತಲ್ಲೀನವಾದ ಮಗು ತನ್ನದೇ ಆದ ಒಂದು ತಾನ ಹಿಡಿದು ಹಾಡುತ್ತಿದ್ದರೆ, ಹಾಡಿಗೆ ತಡೆಯಿಲ್ಲ ಹಾಡು ಅರ್ಥವಿಲ್ಲದಿದ್ದರೂ ಇರಬಹುದು.[೩] ಹಾಡು ಹೇಳಿ ಆಡುವುದೂ ಹಾಡಿ ಕುಣಿಯುವುದೂ ಮಗುವಿನ ಹುಟ್ಟು ಗುಣ. ತಾಯಿಯ ಹಾಲನ್ನುಂಡು ತೊಟ್ಟಿಲಲ್ಲೊರಗಿನ ಮಗು ಜೋಗುಳದ ಉಯ್ಯಾಲೆಯಲ್ಲಿ ಜೀಕಿ ಅರ್ಥವಿಲ್ಲದ ತನ್ನ ಹಾಡನ್ನು ಅರ್ಥವಿರಲಿ ಇಲ್ಲದಿರಲಿ ಅದು ಹಾಡುತ್ತದೆ. ಹಾಡು ಬಿಟ್ಟು ತೀಡಿದರೂ ಆ ತಿಂಡಿನಲ್ಲಿಯೂ ಹಾಡಿನ ರಾಗವಿರುತ್ತದೆ. ಮಕ್ಕಳ ಗೀತ ಪ್ರಿಯರು ಪ್ರಚಂಡದ ಮಕ್ಕಳೆಲ್ಲ ಗೀತಗಳ ವಾತಾವರಣದಲ್ಲಿಯೇ ಬಾಳಿ ಬದುಕುವರು. ಕಾಡಿಗೆ ಹಸುರೊಡೆಯುವುದು ಹೇಗೆ ಸಹಜವೋ ಹಾಗೆಯೇ ಮಕ್ಕಳಿಗೆ ಪ್ರಾಸಗಳು ಸಹಜ. ಭಾರತದ ದೇಶದ ಮಕ್ಕಳಿಗೆ ಅವರದೇ ಆದ ಶಿಶುಪ್ರಾಸಗಳು ಗೀತಗಳು ಇವೆ. ಅಸಂಖ್ಯಾತವಾದ ಈ ಹಾಡುಗಳು ಹಾಗೂ ಮಕ್ಕಳಿಗೆ ಅವರದೇ ಆದ ಶಿಸುಪ್ರಾಸಗಳನ್ನು ಗೀತಗಳು ಇವೆ. ಅಸಂಖ್ಯಾತವಾದ ಈ ಹಾಡುಗಳು ಹಾಗೂ ಪ್ರಾಸಗಳು ಹೂಗಳಂತೆ ನಿಸರ್ಗ ದೇವತೆಯ ಸುಮಧುರವಾದ ತೊಡೆಯ ಮೇಲೆ ತಮ್ಮಷ್ಟಕ್ಕೆ ತಾವೇ ಅರಳುವವು ಭಾರತದ ಜಾನಪದವು ಶಿಶುಪ್ರಾಸ ಹಾಗೂ ಗೀತಗಳ ಸುಂದರವಾದ ಮೊಗ್ಗುಗಳಿಂದ ಕೂಡಿದ ಗುಲಾಬಿಯ ಗಿಡದಂತೆ ಎಂದು ದೇವೇಂದ್ರ ಸತ್ಯಾರ್ಥಿಯವರು ಹೇಳಿದ್ದು ಯತಾರ್ಥವಾಗಿದೆ. ಮಗುವಿಗೆ ಹಾಡಬೇಕು ಹಾಡು ಕೇಳಿ ಆನಂದಿಸುವುದೂ ಬೇಕು ಮಗುವಿನ ಈ ಮನೋಧರ್ಮಕ್ಕೆ ಅನುಗುಣವಾದ ಪರಿಸರವು ದೊರಕದಿದ್ದಲ್ಲಿ ಅದರ ಬದುಕು ನೀರಸವಾಗಿ ಬಾಡಿಹೋಗುವುದು. ಶಿಶು ತುಂಬು ಜೀವನದ ಅಮೋದ ಪ್ರಮೋದ ಪಡೆಯಲಾರದು. ಶಿಶುಗೀತಗಳು

ಮಕ್ಕಳಿಂದಲೇ ರಚಿತವಾದವುಗಳೆಂದು ಭಾವಿಸುವಂತಿಲ್ಲ. ಮಕ್ಕಳ ಚಿತ್ತ ಪ್ರವೃತ್ತಿಗನುಸರಿಸಿ ಹಿರಿಯರು ರಚಿಸಿ ಹಾಡಿದ ಗೀತೆಗಳ ಸಂಸ್ಕಾರ ಬಲದಿಂದ ಪ್ರತಿಭಾವಂತ ಗೀತೆಗಳನ್ನು ರಚಿಸುವ ಹಿರಿಯರು ಸಾಕಷ್ಟು ಎಚ್ಚರ ವಹಿಸಬೇಕಾಗುವುದು. ಅವರು ತಮ್ಮ ಪಾಂಡಿತ್ಯದ ಗೌರಿಶಿಖರದಿಂದ ತಳಕ್ಕಿಳಿದು ಸುಲಭ ಶೈಲಿಯಲ್ಲಿ ಮಕ್ಕಳ ಮನೋಧರ್ಮಕ್ಕೊಗ್ಗುವ ರೀತಿಯಲ್ಲಿ ರಚಿಸಿದಲ್ಲಿ ಮಾತ್ರ ಅವು ಮಕ್ಕಳಿಗೆ ಪ್ರಿಯವಾಗಬಲ್ಲುವು. ಓಡಾಡಲು ಕಲಿತ ಮಕ್ಕಳು ಆಡಿ, ಹಾಡಿ, ಮಾತ್ರ ಸದೃಢ ಕಾಮದವರಾಗುವರು. ಉತ್ಸಾಹಶೀಲರಾಗುವರು. ಮತಿವಂತರಾಗುವರು. ಮಕ್ಕಳ ಅನೇಕಾನೇಕ ಆಟದ ಹಾಡುಗಳು ನೂರಾರು ವರ್ಷ ಹಳೆಯವಾಗಿದ್ದು. ಬಾಯಿಂದ ಬಾಯಿಗೆ ಬಂದವುಗಳಾಗಿವೆ. ಆದ್ದರಿಂದ ಇವು ಎಲ್ಲಿ ಯಾವಾಗ ಹುಟ್ಟಿದನೆಂದು ಖಚಿತವಾಗಿ ಹೇಳಲಾಗದು. ಬಹಳಷ್ಟು ಹಾಡಿನ ಆಟಗಳು ಪ್ರಬುದ್ಧರಿಂದ ಆಡಲ್ಪಡುವ ಗಂಭೀರ ರೀತಿಯ ಕಾಣಬಹುದು.

ಅನೇಕ ಶಿಶುಗೀತೆಗಳಲ್ಲಿ ಹಾಡು ಮತ್ತು ಆಟಗಳಿಗೆ ಅವಿನಾಭಾವ ಸಂಬಂಧವಿರುತ್ತದೆ. ಇವುಗಳ ಬಂಧುಗಳ ಬೆಸುಗೆ ಸಮ್ಮೋಹಕ, ಮಕ್ಕಳ ಆಟದಲ್ಲಿ ಕುಟುಂಬದ ಅನುಕರಣೆ ಹೆಚ್ಚಾಗಿರುತ್ತದೆ. ಮಕ್ಕಳು ಮೊಟ್ಟ ಮೊದಲು ತಂದೆ ತಾಯಿಯನ್ನು ಅನುಕರಿಸುತ್ತಾರೆ. ತಾಯಿ ಅಡುಗೆ ಮಾಡುವುದನ್ನು ನೋಡಿದ ಮಗ ತಾನೂ ಗಿರಟೆ, ಕಲ್ಲು ಮಣ್ಣು ಎಲೆಗಳನ್ನು ತೆಗೆದುಕೊಂಡು ಅಡುಗೆ ಆಟವಾಡುವುದು ತಾಯಿ ಮಗುವನ್ನೆತ್ತಿ ಮುದ್ದಾಡಿದಂತೆ ತಾನೂ ಗೊಂಬೆ ಇಲ್ಲವೆ ಚಿಕ್ಕ ಮಗುವನ್ನೆತ್ತಿ ಮುದ್ದಾಡುವುದು ತಾಯಿ ತನಗೆ ಕಲಿಸಿದ ಆಟ ಹಾಡುಗಳನ್ನು ತನ್ನ ಆಟ ಮಗುವಿಗೂ ಕಲಿಸುವುದು ತೋಳಾಡಿಸುವ ಆಟ ಮಕ್ಕಳಿಗೆ ಅಚ್ಚುಮೆಚ್ಚು ಆಗಿ ಕಂಡುಬರುತ್ತದೆ.[೪]

ಒಟ್ಟಾರೆ, ಶಿಶುಪ್ರಾಸಗಳು ಪ್ರದೇಶದಿಂದ ಪ್ರದೇಶಕ್ಕೆ ಕಾಲದಿಂದ ಕಾಲಕ್ಕೆ ವಸ್ತು ವಿಷಯದಲ್ಲಿ ಹಾಡುವ ರೀತಿಯಲ್ಲಿ, ಪಾಠದಲ್ಲಿ ವ್ಯತ್ಯಾಸಗಳಾಗುತ್ತವೆ. ಶಿಶುಪ್ರಾಸಗಳ ವಸ್ತು ವೈವಿಧ್ಯತೆಯೂ ಒಂದು ಪ್ರದೇಶದ ಸಾಂಸ್ಕೃತಿಕ ಜೀವನದ ಪರಿಶೋಧನೆಗೆ ಒಂದು ಭಾಷಾ ಸಮುದಾಯದ ಮನಸ್ಸಿನ ಇಂಗಿತವನ್ನು ಅಧ್ಯಯನ ಮಾಡಲಿಕ್ಕೆ ಮಕ್ಕಳ ಮನಸ್ಸನ್ನು ಅರ್ಥ ಮಾಡಿಕೊಳ್ಳಲಿಕ್ಕೆ ವಿಪುಲ ಸಾಮಗ್ರಿಗಳನ್ನೊದಗಿಸುತ್ತದೆ. ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಶಿಶುಪ್ರಾಸಗಳ ಸಂಗ್ರಹವಾಗಬೇಕಾಗಿದೆ. ಕೊಪ್ಪಳ ಭಾಗದಲ್ಲಿ ಶಿಶುಪ್ರಾಸಗಳು ಹೇರಳವಾಗಿವೆ.

ಆನೆಗೊಂದಿ, ಹಂಪಿ ಹಾಗೂ ಇಲ್ಲಿನ ಅಕ್ಕಪಕ್ಕದ ಪ್ರದೇಶಗಳಲ್ಲಿ ಈ ಭಾಗಕ್ಕೆ ಸಂಬಂಧಿಸಿದ ಶಿಶುಪ್ರಾಸವೊಂದು ಹೀಗಿದೆ.

ಆನಿಬಂತ್ ಆನಿ
ಯಾವೂರ್ ಆನಿ
ಬಿಜಾಪುರ್ ಆನಿ
ಇಲ್ಲಿಗ್ಯಾಕ ಬಂತು
ಹಾದಿತಪ್ಪಿ ಬಂತು
ಹಾದಿಗೊಂದು ದುಡ್ಡು
ಬೀದಿಗೊಂದು ದುಡ್ಡು

ಲಟ ಲಟ ಮುರದು
ಸೇರ್‌ಕೊಬ್ರಿ ತಂದು
ಹುಡುಗರ ಕೈಯಾಗಕೊಟ್ಟು[೫]

ರಜಾಕಾರರ ದಾಳಿ ಮತ್ತು ಲೂಟಿಯನ್ನು ಮಾಡಿದ ವಿವರಣೆಗಳು ಇಲ್ಲಿವೆ. ಚಿಕ್ಕ ಮಕ್ಕಳನ್ನು ಆಡಿಸುವಾಗ ಹಾಡುವ ಜನಪ್ರಿಯ ಹಾಡು ಇದಾಗಿದೆ(ನಾರಾಯಣ ಗಿರಿಯಪ್ಪ, ಆನೆಗೊಂದಿ ಜಾನಪದ, ಪು. ೩೦)

ಹುಯ್ಯೋ ಹುಯ್ಯೋ ಮಳೆರಾಯ
ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತ್ವಾಟಕ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳೆತ್ವಾಟಕೆ ನೀರಿಲ್ಲ
ಚುಚ್ಚೊ ಚುಚ್ಚೊ ಮಳೆರಾಯ
ಪಚ್ಚೆ ಪಯಿರಿಗೆ ನೀರಿಲ್ಲ
ಕೊಚ್ಚೊ ಕೊಚ್ಚೊ ಮಳೆರಾಯ
ಕುಡಿಯೋ ಬಾವಿಗೆ ನೀರಿಲ್ಲ

ಮಳೆ ಬಾರದ ಸಂದರ್ಭದಲ್ಲಿ ಚಿಕ್ಕಮಕ್ಕಳು ಈ ಹಾಡು ಹಾಡುತ್ತಾರೆ(ನಾರಾಯಣ ಗಿರಿಯಪ್ಪ, ಆನೆಗೊಂದಿ ಜಾನಪದ, ಪು. ೩೦).

ಕೈ ಎಲ್ಲೋಯ್ತು? ಕದದತ್ರ ಹೋಯ್ತು
ಕದ ಏನ್ಕೊಟ್ತು? ಸೌದೆಕೊಡ್ತು
ಸೌದೆ ಏನ್ಮಾಡ್ದಿ? ಒಲಿಗ್ಹಾಕ್ದೆ
ಒಲೆ ಏನ್ಕೊಟ್ತು? ಬೂದಿ ಕೊಡ್ತು
ಬೂದಿ ಏನ್ಮಾಡ್ದೆ? ತಿಪ್ಪೇಗಾಕ್ದೆ
ತಿಪ್ಪೆ ಏನ್ಕೊಟ್ತು? ಗೊಬ್ಬರ ಕೊಡ್ತು
ಗೊಬ್ರ ಏನ್ಮಾಡ್ದೆ? ಗದ್ದೆಗೆ ಹಾಕ್ದೆ
ಗದ್ದೆ ಏನ್ಕೊಡ್ತು? ಬತ್ತಕೊಡ್ತು
ಬತ್ತ ಏನ್ಮಾಡ್ದೆ? ಕುಂಬಾರ್ಗೆ ಕೋಟೆ
ಕುಂಬಾರೇ ನ್ಕೊಟ್ಟು? ಗಿಡಗಿ ಕೊಟ್ಟ
ಗಡಗಿ ಏನ್ಮಾಡ್ದೆ? ಬಾವೀಗ್ಬಿಟ್ಟೆ
ಬಾವಿ ಏನ್ಕೋಡ್ತು? ನೀರ್ಕೋಡ್ತು
ನೀರಾ ಏನ್ಮಾಡ್ದೆ? ಗಿಡಕ್ಕೆ ಹಾಕ್ದೆ
ಗಿಡ ಏನ್‌ಕೊಡ್ತು? ಹೂ ಕೊಡ್ತು
ಹೂ ಏನ್ ಮಾಡ್ದೆ? ದೇವರಿಗೆ ಎಸ್ದೆ
ದೇವ್ರ ಏನ್‌ಕೊಡ್ತು? ಗಂಟೆ ಕೊಡ್ತು
ಗಂಟೆ ಏನ್ ಮಾಡ್ದೆ? ಜವಾನ್‌ಗೆ ಕೊಟ್ಟೆ
ಜವಾನ ಏನ್ ಮಾಡ್ದ? ಸಲಾಮ್ ಹೊಡ್ದ[೬]

ಹೀಗೆ ಪ್ರಶ್ನೋತ್ತರ ಮಾಲೆಯೋಪಾದಿಯಲ್ಲಿ ಪ್ರಾಸ ಬೆಳೆದುಕೊಂಡು ಹೋಗುತ್ತದೆ. ಹಿಂದೆ ಒಕ್ಕಲುತನ ತಿಳಿಯದ ಇತರ ಕಸುಬುದಾರರು ಉತ್ಪನ್ನಗಳನ್ನು ರೈತನಿಗೆ ಕೊಟ್ಟು ರೈತನಿಂದ ಪ್ರತಿಯಾಗಿ ಆಹಾರ ಧಾನ್ಯಗಳನ್ನು ಪಡೆಯುವ ಸಂಪ್ರದಾಯವಿತ್ತು. ಇದು ವಸ್ತುವಿನಿಮಯ ಪದ್ಧತಿ ಆರ್ಥಿಕ ಜೀವನ ವ್ಯವಸ್ಥೆಯನ್ನು ಹೇಳುತ್ತದೆ. ಹಣಕ್ಕೆ ಬದಲು ಆಹಾರಧಾನ್ಯ ಕೊಡುವ ವಿನಿಮಯ ಪದ್ಧತಿ ತುಂಬ ಹಳೆಯದು. ಮೇಲಿನ ಆಯದಾಟದ ಹಾಡು ಪದ್ಧತಿ ಹಿಂದೆ ಎಷ್ಟು ಜನಪ್ರಿಯವಾಗಿತ್ತು ಎಂಬುದನ್ನು ಹೇಳುತ್ತದೆ.

ಹೆಣ್ಣುಮಕ್ಕಳೇ ಹೆಚ್ಚಾಗಿ ಆಡುವ ಕುಕ್ಕರು ಬಸವಿ ಆಟದಲ್ಲಿ ಹಾಡುವ ಹಾಡು ಏರಿಕೆ ಪ್ರಾಸವನ್ನು ನೆನಪಿಗೆ ತರುತ್ತದೆ.

ರತ್ತೊ ರತ್ತೊ ರಾಯನ ಮಗಳೆ
ಬಿತ್ತೊ ಬಿತ್ತೊ ಭೀಮನ ಮಗಳೆ
ಹದಿನಾರೆಮ್ಮೆ ಕರಿಯಾಲಾರೆ ಕಾಸಾಲಾರೆ
ಬೈಟ್‌ಗುಬ್ಬಿ ಬಾಳೇಕಂಬ
ಕುಕ್ಕರು ಬಸವಿ ಕುರುಬಸವಿ

(ನಾರಾಯಣ ಗಿರಿಯಪ್ಪ, ಆನೆಗೊಂದಿ ಜಾನಪದ, ಪು. ೩೦).

ಈ ಆಟದಲ್ಲಿ ಎರಡು ಗುಂಪಿರುತ್ತವೆ. ಗುಂಪಿನ ನಾಯಕಿಯರನ್ನುಳಿದು ಮಿಕ್ಕವರು ವೃತ್ತಾಕಾರದಲ್ಲಿ ಎರಡು ಅಡಿ ಅಂತರದಲ್ಲಿ ನಿಲ್ಲುತ್ತಾರೆ. ಒಬ್ಬ ನಾಯಕಿ ವರ್ತುಲದ ಹೊರಗೂ ಇನ್ನೊಬ್ಬಳು ವರ್ತುಲದ ಒಳಗೆ ನಿಂತು ಒಂದು ಹುಡುಗಿಯ ತಲೆಯ ಮೇಲೆ ತಮ್ಮ ಕೈಗಳನ್ನು ಚಪ್ಪಾಳೆ ಹಿಡಿದು ಮೇಲಿನ ಹಾಡನ್ನು ಹಾಡಿ ಕೆಳಗೆ ಕೂರಿಸುತ್ತಾರೆ. ಈ ಹಾಡು ಮುಗಿದ ಕೂಡಲೇ ವರ್ತುಲದ ಹುಡುಗಿಯು ತಾನು ನಿಂತಸ್ಥಳದಲ್ಲಿಯೇ ಕೆಳಗೆ ಕುಳಿತುಕೊಳ್ಳುತ್ತಾಳೆ. ಆಮೇಲೆ ನಾಯಕಿಯರು ಹತ್ತಿರದಲ್ಲಿ ನಿಂತಿದ್ದ ಎರಡನೆಯ ಹುಡುಗಿಯ ಕಡೆಗೆ ಸರಿದು ಮೇಲಿನಂತೆ ಹಾಡು ಹೇಳಿ ಆಕೆಯನ್ನು ಕೂರಿಸುತ್ತಾರೆ.

ಮಕ್ಕಳ ಹಾಡುಗಳಲ್ಲಿ ಪ್ರಾಸಕ್ಕೆ ಹೆಚ್ಚು ಪ್ರಾಧಾನ್ಯತೆಯಿದ್ದರೂ ಕಲಾತ್ಮಕ ಅಭಿವ್ಯಕ್ತಿ ಇರುವ ಹಾಡುಗಳಿಲ್ಲದಿಲ್ಲ. ನಿಗೂಢ ಅರ್ಥವನ್ನು ಅಂತರ್ಯದಲ್ಲಿ ಹೊಂದಿರುವ ಕೆಲವು ರಚನೆಗಳು ಉತ್ತಮ ಅಭಿವ್ಯಕ್ತಿ ಸಾಮರ್ಥ್ಯವನ್ನು ಮೆರೆದಿವೆ. ಕಣ್ಣಾಮುಚ್ಚಾಲೆಯಾಟದ ಹಾಡೊಂದು ಹೀಗಿದೆ.

ಕಣ್ಣಾಮುಚ್ಚೆ
ಕಾಡೇಗೂಡೆ
ಉದ್ದಿನ ಮೂಟೆ
ಉರುಳೇ ಹೋಯ್ತು
ನಮ್ಮಯ ಹಕ್ಕಿ
ಬಿಟ್ಟೇ ಬಿಟ್ಟೆ
ನಿಮ್ಮಯ ಹಕ್ಕಿ
ಹಿಡಿದುಕೊಳ್ಳಿ
ನಿಮ್ಮನೆಲೇನು

ಪಾಯಸ
ಪಾಯಸದಲ್ಲೇನು?
ನೊಣ
ನೊಣನೆಲ್ಲ ಬಡ್ಕಂಡು ಬಾ
(ದೇವರಾಜ, ವಿದ್ಯಾನಗರ, ಗಂಗಾವತಿ).

ಉಕ್ತಿ ವೈಚಿತ್ರ್ಯದಲ್ಲಿ ಹೊಸತನವನ್ನು ಹೊಂದಿರುವ ಇಂಥ ಶಾಸ್ತ್ರ ವಿರಳ. ಕಣ್ಣಾಮುಚ್ಚಾಲೆ ಆಟವೇ ಒಂದು ಪ್ರತಿಮೆ. ಈ ಪ್ರತಿಮೆ ಸಾವನ್ನು ಕುರಿತು ಧ್ವನಿಪೂರ್ಣಚಿತ್ರವನ್ನು ನೀಡುತ್ತದೆ. ಈ ಹಾಡಿನ ಪ್ರತಿಯೊಂದು ಪಾದವೂ ಕುತೂಹಲಕಾರಿಯಾಗಿದೆ. ಇಲ್ಲಿ ರಮ್ಯರುದ್ರ ರೂಪಕಗಳಿವೆ. ಕಣ್ಣು ಮುಚ್ಚಿದ ಮೇಲೆ ಪ್ರತಿಯೊಬ್ಬರಿಗೂ ಕಾಡು ಅವರ ಗೂಡಾಗುತ್ತದೆ. ಇಲ್ಲಿ ಬಳಕೆಯಾಗಿರುವ ಕಾಡು ಶಬ್ದವು ಧ್ವನಿಪೂರ್ಣವಾಗಿದ್ದು, ಸುಡುಗಾಡನ್ನು ಸಂಕೇತಿಸುತ್ತದೆ. ಉದ್ದಿನ ಮೂಟೆ ಶರೀರಕ್ಕೆ ಸಂಕೇತವಾಗಿದೆ. ಹಕ್ಕಿಯು ಆತ್ಮಕ್ಕೆ ಸಂಕೇತವಾಗಿದೆ. ನಿಮ್ಮಯ ಹಕ್ಕಿ ಹಿಡಿದುಕೊಳ್ಳಿ ಎಂಬಲ್ಲಿ ನಿಮ್ಮ ಆತ್ಮವನ್ನು ಸಂರಕ್ಷಿಸಿಕೊಳ್ಳಿ ಎಂಬ ಧ್ವನಿಯಿದೆ. ಪ್ರಾಸದ ಮೊದಲ ಎಂಟು ಪಾದಗಳು ಸಾವು ಮತ್ತು ಶವಸಂಸ್ಕಾರ ಅಲ್ಲದೆ ಆತ್ಮೋದ್ಧಾರವನ್ನು ಕುರಿತು ಕೊನೆಯ ಐದನೆಯ ಸಾಲಿನಲ್ಲಿ ಬಳಕೆಯಾಗಿರುವ ಪಾಯಸ ಶಬ್ದವು ಉತ್ತರಕ್ರಿಯೆಯನ್ನು ತಿಳಿಸುತ್ತದೆ. ಪಾಯಸ ಕುಡಿಯುವವರನ್ನು ನೊಣಕ್ಕೆ ಹೋಲಿಸಿ ನೊಣವನ್ನೆಲ್ಲ ಬಡ್ಕಂಡು ಬಾ ಎಂಬ ಮಾತನ್ನು ಸೃಷ್ಟಿಕರ್ತನು ಯಮಧರ್ಮನಿಗೆ ಕೊಟ್ಟ ನಿರ್ದೇಶನದಂತಿದೆ.

ಇದು ಮಕ್ಕಳ ಕಣ್ಣು ಮುಚ್ಚಾಲೆ ಆಟದ ಪಲ್ಲವಿ
ಬಿಟ್ಟು ಬಿಟ್ಟು ಬೆಳಗಾಯಿತು
ತಟ್ಟೇಮನಿ ಹಾಳಾಯಿತು
ಹಾಳು ಗೋಡೆಯ ದೇವ್ವ ಬಂದು ಬಡೀತು
(ಗಂಗಮ್ಮ, ವಿದ್ಯಾನಗರ, ಗಂಗಾವತಿ).

ಎಂದು ಹಿರಿಮಣಿಯು ಘೋಷಿಸಿದಾಗ ಅಡಗಿದ ಸದಸ್ಯರನ್ನು ಹುಡುಕಲು ನಿಂತ ಹುರಿಯಾಳಿನ ಓಟ ಪ್ರಾರಂಭವಾಗುತ್ತದೆ.

ಬಾರೋ ಬಾರೋ ಮಳೆರಾಯ
ಜೋಳದ ಹೊಲಕ್ಕ ನೀರಿಲ್ಲ
ಜನಾಬಾಯಿ ಬಿಡತಾರೊ
ಮುಗಿಲ ಮ್ಯಾಲ ನೋಡೆವು
ನಾವು ಕೈ ಮುಗಿದೇವು[೭]

ಶಿಶುಪ್ರಾಸಗಳಲ್ಲಿ ಸಾಮಾಜಿಕ ಹಿನ್ನೆಲೆ ಇದೆ. ಒಕ್ಕಲುತನಕ್ಕೆ ಮುಖ್ಯವಾಗಿ ಬೇಕಾಗಿರುವುದು ಮಳೆ. ಅದು ಕೈ ಕೊಡಬಾರದೆಂದು ಮಕ್ಕಳು ಪ್ರಾರ್ಥಿಸುತ್ತಾರೆ. ಮಳೆ ಬರುವ ವಾತಾವರಣ ಸಂದರ್ಭದಲ್ಲಿ ಮಕ್ಕಳು ಹಾಡುವ ಹಾಡುತ್ತಾರೆ.

ಪುಟ್ಟ ಮಕ್ಕಳ ಸೃಷ್ಟಿಯು ಭಾವಪೂರ್ಣವಾದುದು. ಅವರು ಏನೆಲ್ಲವನ್ನು ಕಲ್ಪಿಸಿ ರಚಿಸಿ ಆಡಬಲ್ಲರು, ಆಡಿಸಲೂ ಬಲ್ಲರು. ಐದಾರು ವರುಷದ ಬಾಲೆಯೋರ್ವಳು ತನ್ನ ಕೈಗೂಸಾದ ಬಣ್ಣದ ಗೊಂಬೆಯನ್ನು ಮುದ್ದಿಸಿ, ಲಾಲಿಸಿ ರಮಿಸುವ ಧಾಟಿಯನ್ನೂ ಆ ರಾಗದ ಮೋಹಕತೆಯನ್ನೂ ನೋಡೋಣ.

ಅಳಬ್ಯಾಡs ಗೊಂಬವ್ವs
ಅಳ್ಳಿಟು ಕೊಡತೀನಿ ॥ ಪಲ್ಲವಿ ॥
ಗೊಂಬವ್ವ ನನ ಕೂಸು
ಚಂದುಳ್ಳ ನನ ಕಂದs
ಅಂದದ ಅಂಗೀಯs
ಕೆಂದs ಗs ತೊಡಿಸೀನಿ
ಹಾಲ್ಗಡಗ ಇಡಿಸೀನಿ
ಕಾಡೀಗಿ ಹಚ್ಚೆನಿ

(ಸೀತವ್ವ, ವಿದ್ಯಾನಗರ, ಗಂಗಾವತಿ).

ಈ ರೀತಿಯಾಗಿ ಆ ಗೊಂಬೆ, ಹೆಣ್ಣು ಕೂಸಾಗಿ, ಗಂಡುಮಗುವಾಗಿ, ಬಹುರೂಪಿಯಾಗಿ ತೋರುತ್ತದೆ.

ಯವ್ವಾ ಯವ್ವಾ ಗೆಣಸs
ಕುಳ್ಳಾಗ ಹಾಕಿ ಕುದಿಸs
ಕೆರೆ ಸೀರೆ ಉಡಿಸs
ಗಂಡನ ಮನಿಗೆ ಕಳಿಸs

ಈ ಪಲ್ಲವಿಯ ನಂತರ ಮಕ್ಕಳ ಹಿ.ಹಿ.ಹಿ.ಹಿ. ಕಿಲಿ ಕಿಲಿ ನಗುವೇ ನಗುವು ಇದೊಂದು ಒಗಟಾಗಿರುವುದೇನೋ ಹೆಣ್ಣು ಹುಡುಗಿಯರು ಮಾತ್ರ ಈ ಮಾತಿನ ಮಾಲೆಯನ್ನು ಹೆಣೆದು ಮಣಿದು ನುಡಿದು ನಕ್ಕು ನಲಿಯುವರು. ಗೆಣಸನ್ನು ಕುದಿಸುವುದು ಮಡಿಕೆಯಲ್ಲಿಯೇ ಅದನ್ನು ಸುಟ್ಟಾಗ ಗೆಣಸಿನ ಬಣ್ಣ ಮೈ ಹೊದಿಗೆ ಕಪ್ಪಾಗುತ್ತದೆ. ಸುಲಿದು ತಿಂದರೆ ಬಲುರುಚಿ. ಅದು ಗೆಣಸು ಹೊಟ್ಟೆಯಲ್ಲಿ ಹೊಕ್ಕರೆ ಅದಕ್ಕೆ ಅದುವೇ ಗಂಡಸನ ಮನೆ ಎಂಬ ಭಾವದ ಒಗಟು ಇದಾಗಿರಬಹುದು. ಮಕ್ಕಳಿಗೆ ಹಾಡುವುದೆಂದರೆ ಹಿಗ್ಗು ಹಾಡುತ್ತ ಆಡುವುದು ಅವರ ಹುಟ್ಟು ಗುಣ ಅವರ ಹಾಡುವ ಪದಗಳು, ಪೋಣಿಸುವ ನುಡಿಮುತ್ತುಗಳು ಅವರ ಹುಟ್ಟಿನೊಂದಿಗೆ ಗಟ್ಟಿಗೊಂಡೇ ಬಂದಿದೆ.

ಮಕ್ಕಳವಾಡುವಾಗ ತಮ್ಮ ಬಾಲಭಾಷೆಯಲ್ಲಿ ಹಾಡುವ ಹಲವಾರು ಶಿಶುಪ್ರಾಸಗಳು ಕನ್ನಡದಲ್ಲಿವೆ. ಶಿಶುಪ್ರಾಸಗಳ ಕೆಲವು ಉದಾಹರಣೆಗಳು.

ಕಾಗಿ ಕಾಗಿ ಕೌ
ಯಾರೊಬಂದರೌ

ಮಾವ ಬಂದಾನೌ
ಏನು ತಂದಾನೌ
ಹಂಡೆ ದಂತದ
ಕುಂಡಿ ಮಾಡಿಕೊಂಡ
ಹಂಗ ಬಂದಾನೌ

ಹೆಣ್ಣುಮಕ್ಕಳನ್ನು ಗಂಡುಮಕ್ಕಳು ಛೇಡಿಸುವ ಒಂದು ಗೀತೆ ಹಾಸ್ಯದ ಕೋಲ್ಮಿಂಚುಗಳ ಬೆಡಗು ಕಣ್ಮುಂದೆ ಕಟ್ಟುತ್ತದೆ. ಇಲ್ಲಿಯ ವ್ಯಂಗ್ಯ, ನಾಟಕೀಯ ಸನ್ನಿವೇಶ, ದೇಶಿಯ ಮಾತಿನ ಧಾಟಿ ಗಮನಾರ್ಹವಾಗಿವೆ. ಶಿಶುಪ್ರಾಸಗಳಲ್ಲಿ ಹಾಸ್ಯ ವಿಡಂಬನೆಗೆ ಕೇಂದ್ರ ವ್ಯಕ್ತಿ ಮಾವ.

ಒಬ್ಬನು: ನೋಡು ನೋಡು ತಮ್ಮಯ್ಯ!
ಎಲ್ಲರೂ: ಲಡ್ಡು ಬಚ್ಚಿ ಎಲ್ಲಿಟ್ಟೀ?

ದಂಡಗೆ ಕುಳಿತ ಹತ್ತಿಪ್ಪತ್ತು ಎಳೆಯವರ ಹಿಂದಿನಿಂದ ಕೈಯಲ್ಲಿ 'ಲಡ್ಡು' ಹಿಡಿದು ಅದನ್ನು ಅಂಗಿಯಲ್ಲಿ ಮುಚ್ಚಿಕೊಂಡು ತಿರುಗುವ ಹಿರಿಮಣಿಯು "ನೋಡು ನೋಡು ತಮ್ಮಯ್ಯ!" ಎಂದಾಗ ಎಲ್ಲರೂ "ಲಡ್ಡು ಬಚ್ಚಿ ಎಲ್ಲಿಟ್ಟೀ?" ಎಂದು ಕೇಳುವರು ರಾಗವಾಗಿ ಕುಳಿತವರು. ಹಿಂದೆ ಹೊರಳಿ ನೋಡುವಂತಿಲ್ಲ. ಕಂಡುದನ್ನು ಇನ್ನಾರಿಗೂ ಹೇಳುವಂತಿಲ್ಲ! ಒಬ್ಬನ ಹಿಂದೆ ಲಡ್ಡು ಗುಟ್ಟಾಗಿ ಇಟ್ಟದ್ದನ್ನು ಅರಿಯದ ಬಾಲಕನು ಹಿರಿಮಣಿಯಿಂದ ಲಡ್ಡಿನ ಏಟು ಸಹಿಸುತ್ತ ಒಂದು ಸುತ್ತ ಓಡಬೇಕು. ಉಳಿದವರಿಗೆ ಇದು ತುಂಬಾ ಹುರುಪಿನ ಆಟ.

ಅಡ್ಡ ಗ್ವಾಡಿ ಮ್ಯಾಗ
ಗಿಡ್ಡ ಬಾಳಿ ಹಣ್ಣು!
ಯಾರ ನುಂಗ್ಯಾರವ್ವ!
ಭಾವ ನುಂಗ್ಯಾನವ್ವ!
ಭಾವನ ಹೊಟ್ಟೆ ಕಡಿಲಿ!
ನಮ್ಮ ಹೊಟ್ಟೆ ತುಂಬಲಿ![೧೧]

ಭಾವನನ್ನು ಮೂದಲಿಸಿ ಅಣಕಿಸುವ ಹುಡುಗಿಯರ ಹುಡುಗಾಟದ ಪಲ್ಲವಿ ಇದಾಗಿದೆ.

ಕೊಪ್ಪಳ ಜಿಲ್ಲೆಯಲ್ಲಿ ಮಕ್ಕಳ ಹಾಡುಗಳಲ್ಲಿ ಜನಪದ ಸಾಹಿತ್ಯ ಸಮೃದ್ಧವಾಗಿದೆ. ಆರು ವರ್ಷದಿಂದ ಹನ್ನೆರಡು ವರುಷದ ಮಕ್ಕಳು ಆಡುತ್ತ, ಕುಣಿಯುತ್ತ ಹಾಡುತ್ತಾರೆ. ತಮ್ಮದೇ ಆದ ಪ್ರಪಂಚ ಕಟ್ಟಿ ಗಂಡ ಹೆಂಡಿರಾಗಿ ಸರಸವಾಡುತ್ತಾರೆ. ಇವು ಅರ್ಥರಹಿತವಾದವುಗಳಾದರೂ ಪ್ರಾಸಬದ್ಧವಾದ ಹಾಡುಗಳು ಕೇಳುಗರ ಕಿವಿಗೆ ರಸದೂಟವಾಗಿರುತ್ತವೆ. ಮಾನವನ ಜೀವನವು ಅವನ ಬಾಲ್ಯದ ಮೇಲೆ ಬಹಳ ಅವಲಂಬಿಸಿರುವುದು, ಆಡಿ, ಹಾಡಿ ಓಡಾಡದ ಮಕ್ಕಳು ದೇಹಾರೋಗ್ಯ ಬುದ್ಧಿ ಸಮೃದ್ಧಿಯಾಗುವುದು. ತನ್ನದೇ ಆದ ಒಂದು ರಾಗದಲ್ಲಿ ಕೂಸು ಆಡಿ ಹಾಡುವುದನ್ನು ನಾವು ನೋಡುತ್ತೇವೆ.

## ಚಂದಪ್ಪ ಚಂದಪ್ಪ ಚಲುವಾ

ಚಂದಪ್ಪ ಚಂದಪ್ಪ ಚಲುವಾ
ಜುಟ್ಟಲಾ ಬಿಟಗೊಂಡ ಬರುವ
ಎಂಟ ಎತ್ತಿನ ಬಂಡಿ
ಬಂಡಿ ಮ್ಯಾಲಿ ನಾನಾ

ನನ್ನ ಹಿಂದ ನವಿಲು
ನವಿಲು ಗರಿ ತಗದ
ಚಿಗರಿ ಕೋಡಿಗೆ ಹಾಕಿ
ಚಿಗರಿ ಚಿಗರಿ ಬಿಕ್ಕಪ್ಪಾ
ಅವರಿ ಗುಗ್ಗರಿ ಮುಕ್ಕಪ್ಪಾ[೧೧]

ಬೆಳದಿಂಗಳ ರಾತ್ರಿಯಲ್ಲಿ ಮಕ್ಕಳು ಜೊತೆ ಜೊತೆಯಾಗಿ ಅಡ್ಡಾಡುತ್ತ, ಕೈ ಕೈ ಚಪ್ಪಾಳೆ ಬಾರಿಸುತ್ತಾ, ಚಂದಪ್ಪ, ಚಂದಮಾಮನನ್ನು ಕೈಮಾಡಿ ಕರೆಯುತ್ತಾ ಹಾಡುವುದು ಕಂಡುಬರುತ್ತವೆ.

## ಬಾರೋ ಬಾರೋ ಮಳೆರಾಯ

ಮಳೆರಾಯನನ್ನು ಕುರಿತು ಹೇಳುವ ಪದ ಬಹಳ ದಿನ
ಮಳೆ ಬಾರದಿದ್ದಾಗ ಚಿಕ್ಕಮಕ್ಕಳೆಲ್ಲರೂ ಒಟ್ಟುಗೂಡಿ
ಬೀದಿ ಬೀದಿಗಳಲ್ಲಿ ಬಾರೋ ಬಾರೋ ಮಳೆರಾಯ
ಎಂದು ಮಳೆರಾಯನನ್ನು ಕರೆಯುತ್ತಾರೆ.

ಮಳೆ ಬಾರೋ ಮಲ್ಲೇಶಾ
ಗುಡಿ ಕಟ್ಟೋ ಸಿದ್ದೇಶಾ
ಬಾರೋ ಬಾರೋ ಮಳೆರಾಯ ಮಳೆರಾಯ
ಬಾಳಿಗಿಡುಕ ನೀರಿಲ್ಲ ನೀರಿಲ್ಲ
ಹೊಯ್ಯೋ ಹೊಯ್ಯೋ ಮಳೆರಾಯ ಮಳೆರಾಯ
ಹೂವಿನ ಗಿಡುಗ ನೀರಿಲ್ಲ ನೀರಿಲ್ಲ
ತಪ್ಲಿ ತಾಲಿಗಿ ಮುಕ ಮುಕ ನೀರಿಲ್ಲ
ಬಾರೋ ಬಾರೋ ಮಳೆರಾಯ ಮಳೆರಾಯ[೧೨]

## ಅಚ್ಚಚ್ಚು ಬೆಲ್ಲದಚ್ಚು

ಅಚ್ಚಚ್ಚು
ಬೆಲ್ಲದಚ್ಚು
ಅಲ್ಲಿ ನೋಡು ಇಲ್ಲಿ ನೋಡು
ಸಂಪಂಗಿ ಮರದ ಮೇಲೆ
ಗುಂಪು ನೋಡು
ಯಾವ ಗುಂಪು

ಕಾಗೆ ಗುಂಪು
ಯಾವ ಕಾಗೆ
ಯಾವ ಕಪ್ಪು
ಕಾಗೆ ಗುಂಪು
ಯಾವ ಕಾಗೆ
ಕಪ್ಪು ಕಾಗೆ
ಯಾವ ಕಪ್ಪು
ಮಡಿಕೆ ಕಪ್ಪು
ಯಾವ ಮಡಿಕೆ
ಮಣ್ಣಿನ ಮಡಿಕೆ
ಯಾವ ಮಣ್ಣು
ಕೋಟೆ ಮಣ್ಣು
ಯಾವ ಕೋಟೆ
ಕೆಂಪೇಗೌಡ್ನ ಕೋಟೆ
ಯಾವ ಕೆಂಪೇಗೌಡ
ಮಾಗಡಿ ಕೆಂಪೇಗೌಡ[೧೩]

ಇದನ್ನು ಮಕ್ಕಳು ಪ್ರಶ್ನೋತ್ತರ ರೀತಿಯಲ್ಲಿ ಹಾಡುತ್ತಾರೆ. ಒಬ್ಬ ನಾಯಕ ಉಳಿದ ಹುಡುಗರು ದೂರ ಇರುತ್ತಾರೆ. ನಾಯಕ ಕಣ್ಣು ಮುಚ್ಚಿಕೊಂಡು ಈ ಹಾಡು ಹಾಡುವಾಗ ಉಳಿದವರು ದೂರದಲ್ಲಿದ್ದು ಓಗೊಡುತ್ತಾರೆ. ಕೊನೆಗೆ ನಾಯಕ ಯಾರನ್ನು ಮುಟ್ಟುತ್ತಾನೋ ಅವನು ಮತ್ತೆ ನಾಯಕನಾಗುವನು.

## ಕಪ್ಪೆ ಕರ ಕರ

ಕಪ್ಪೆ ಕರ ಕರ
ತುಪ್ಪ ಝುಳಿ ಝುಳಿ
ಮಾವಿನ ಪೋಟೆ
ಮರದಲಿ ಪೋಟೆ
ಹದ್ದಿನ ಕೈಲಿ
ಸುದ್ದಿ ಕೊಟ್ಟು
ಕಾಗೆ ಕೈಲಿ
ಕಂಕಣ ಕಟ್ಟಿ
ನಳ್ಳಿ ಕೈಲಿ
ನಗಾರಿ ಹೊಡ್ಸಿ
ಸೊಳ್ಳೆ ಕೈಲಿ
ಸೋಬಾನೆ ಹೇಳ್ಸಿ

ಸಣ್ಣಿ ಮದುವೆ ಶನಿವಾರ
ಊಟಕ್ಕೆ ಬನ್ನಿ ಭಾನುವಾರ[೧೪]

ಸಣ್ಣಿ ಎನ್ನುವ ಜತೆಗಾತಿಯನ್ನು ಚಿಕ್ಕಮಕ್ಕಳೆಲ್ಲರೂ ಅಣಕಿಸಲು ಹಾಡುವ ಹಾಡು.

## ಹಾದಿ ದೇವ್ವ ಬೀದಿ ದೇವ್ವ

ಹಾದಿ ದೇವ್ವ
ಬೀದಿ ದೇವ್ವ
ಗಾಳಿ ದೇವ್ವ
ಧೂಳಿ ದೇವ್ವ
ಕೊಳ್ಳಿ ದೇವ್ವ ಬಡ್ಕೊ ಬಡ್ಕೊ
ಆಲಗ ಗಿಡದ ದೇವ್ವ
ಜಾಲಿ ಗಿಡದ ದೇವ್ವ
ಬನ್ನಿ ಗಿಡದ ದೇವ್ವ
ಊರಿನ ದೇವ್ವ
ಕೇರಿಯ ದೇವ್ವ ಬಡ್ಕೊ ಬಡ್ಕೊ[೧೫]

ಏಳೆಂಟು ಗಟ್ಟಿಮುಟ್ಟಾದ ಹುಡುಗರು ಊರ ಹೊರಗೆ ಸೇರುತ್ತಾರೆ. ಅವರಲ್ಲಿ ಶಕ್ತಿಶಾಲಿಯಾದವನೊಬ್ಬನಿಗೆ ಎಲೆ, ಅಡಿಕೆ, ತಂಬಾಕು(ಹೊಗೆಸೊಪ್ಪು)ಗಳನ್ನು ಹೆಚ್ಚಾಗಿ ತಿನ್ನಿಸಿ ಮೂರು ದಾರಿ ಕೂಡುವಲ್ಲಿ ಬೋರಲಾಗಿ ಮಲಗಿಸುತ್ತಾರೆ.

## ಹಾಲಿಗೊಂದು ಕಾಸು

ಹಾಲಿಗೊಂದು ಕಾಸು
ಮೊಸರಿಗೊಂದು ಕಾಸು
ಬೆಣ್ಣೆಗೊಂದು ಕಾಸು
ತುಪ್ಪಕ್ಕೊಂದು ಕಾಸು
ಚಿಕ್ಕಪ್ಪ ಕೊಟ್ಟ ಕಾಸು
ಪುಕ್ಕಟೆ ಹೋಯಿತು
ಮಾವಯ್ಯ ಕೊಟ್ಟ ಕಾಸು
ಮಾಯವಾಗಿ ಹೋಯಿತು
ಗಂಡಯ್ಯ ಕೊಟ್ಟ ಕಾಸು
ಗಂಟಾಗಿ ಉಳೀತು[೧೬]

ಮನೆಗೆ ಯಾರಾದರೂ ನೆಂಟರಿಷ್ಟರು ಬಂದಾಗ ಮಕ್ಕಳಿಗೆ ಹಾಡು ಹೇಳಮ್ಮ ಎಂದು ಕೇಳುವುದು ವಾಡಿಕೆ. ಆಗ ಚಿಕ್ಕಮಕ್ಕಳು ಮಾವಂದಿರಿಗೆ ಕಾಸು ಕೊಟ್ರೆ ಹೇಳ್ತೀನಿ ಎನ್ನುತ್ತವೆ. ಅವರು ಕಾಸು ಕೊಟ್ಟಾಗ ಸಂತೋಷದಿಂದ ಈ ಪದ ಹೇಳುತ್ತಾರೆ.

ಸಂತೆ ಗೋಯ್ತು
ಸಂತೆಯಿಂದ ಏನು ತಂತು?
ಬಾಳೆಹಣ್ಣು ತಂತು
ಬಾಳೆಹಣ್ಣು ಏನು ಮಾಡ್ದೆ?
ಸುಲಕಂಡು ತಿಂದೆ

ಸಿಪ್ಪೆ ಏನ್ ಮಾಡ್ದೆ?
ಕದದ ಹಿಂದ್ಹಾಕ್ದೆ
ಕದ ಏನ್ಕೊಡ್ತು
ಚಕ್ಕೆ ಕೊಡ್ತು
ಚಕ್ಕೆ ಏನ್ ಮಾಡ್ದೆ?
ಒಲೆಗ್ಹಾಕ್ದೆ
ಒಲೆ ಏನ್ ಕೊಡ್ತು?
ಬೂದಿ ಕೊಡ್ತು
ಬೂದಿ ಏನ್ ಮಾಡ್ದೆ?
ತಿಪ್ಪೆಗ್ಹಾಕ್ದೆ
ತಿಪ್ಪೆ ಏನ್ ಕೊಡ್ತು
ಗೊಬ್ಬರ ಕೊಡ್ತು
ಗೊಬ್ಬರ ಏನ್ ಮಾಡ್ದೆ?
ಹೊಲಕ್ಕೆ ಹಾಕ್ದೆ
ಹೊಲ ಏನ್ ಕೊಡ್ತು?
ಜೋಳ ಕೊಡ್ತು
ಜೋಳ ಏನ್ ಮಾಡ್ದೆ?
ಊಟ ಮಾಡ್ದೆ

(ದೇವರಾಜ, ವಿದ್ಯಾನಗರ, ಗಂಗಾವತಿ)

ಚಿಕ್ಕಮಕ್ಕಳು ಆಟ ಆಡುವಾಗ ಈಗಲೂ ಹಾಡುವ ಪ್ರಚಲಿತವಾದ ಹಾಡು ಇದಾಗಿದೆ.

**ಅಡ್ಡಂ ದಿಡ್ಡಂ**

ಅಡ್ಡಂ
ದಿಡ್ಡಂ
ಮಥಲೆ
ಪಿತಲೆ
ಪಾವು
ಫರಂಗಿ
ಲಾಟಮೆ
ಲೂಟ್‌ಮೆ
ಛೀಚಲ್[೧೭]

ಇಲ್ಲಿ ಅರ್ಥಕ್ಕಿಂತ ಪ್ರಾಸ ಮುಖ್ಯ. ಎರಡು ಅಥವಾ ಹೆಚ್ಚು ಮಕ್ಕಳು ಸೇರಿ ಆಡುವ ಬೆರಳಾಟದಲ್ಲಿ ಇದನ್ನು ಹೇಳುತ್ತಾರೆ. ಎಣಿಕೆ ಮಾಡುವವರು ತಮ್ಮ ಒಂದು ಹಸ್ತವನ್ನು ಇಡುತ್ತಾರೆ. ಉಳಿದವರು ತಮ್ಮ ಎರಡು ಹಸ್ತಗಳನ್ನು ಇಟ್ಟು ಹತ್ತು ಬೆರಳನ್ನು ಒಡ್ಡುತ್ತಾರೆ. ಅಡ್ಡಂ ದಿಡ್ಡಂ ಎಂದು ಹೇಳಿಕೊಂಡು ಒಂದೊಂದೇ ಬೆರಳನ್ನು ಎಣಿಸುತ್ತಾ ಹೋಗಿ ಯಾರ ಬೆರಳಿ ಚಲ್ ಎಂದು ನಿಲ್ಲುತ್ತದೋ ಬೆರಳನ್ನೂ ಮಡಿಸುತ್ತಾರೆ. ನಂತರ ಎಣಿಕೆ ಮುಂದಿನ ಬೆರಳಿನಿಂದ ಆರಂಭವಾಗುತ್ತದೆ. ಹೀಗೆ ಹತ್ತು ಬೆರಳು

ಮಡಿಸಿಕೊಂಡವರು ತಮ್ಮ ಕೈ ಕಾಣದಂತೆ ಬಚ್ಚಿಟ್ಟುಕೊಳ್ಳುವರು. ಆಗ ಮತ್ತೊಬ್ಬರು ಕೈ ಎಲ್ಲಿ ಹೋಯ್ತು ಎಂದು ಪ್ರಶ್ನೆ ಹಾಕುವರು. ಉತ್ತರ ದೊರೆತೊಡನೆ ಮತ್ತೆ ಪ್ರಶ್ನೆ ಹೀಗೆ ಮತ್ತು ಉತ್ತರ ಮುಂದುವರಿಯುತ್ತದೆ:

ಕರಿಕರಿ ಕಬ್ಬು
ಮೈಯೆಲ್ಲಾ ಜಿಬ್ಬು
ಮೈಲಾರಕ ಹೋಗಿ
ಗಳಗಂಟ ತಂದು
ಆಕಳ ಕೊಳ್ಳಾಕಟ್ಟಿ
ಆಕಳ ನನಗ ಹಾಲಕೊಡ್ತು
ಹಾಲ ಒಯ್ದು ಅಮ್ಮಗ ಕೊಟ್ಟ
ಅಮ್ಮ ನನಗೆ ತಿಂಡಿ ಕೊಟ್ಟಳು

ಅಪ್ಪ ನನಗೆ ಪೈಸೆ ಕೊಟ್ಟ
ಪೈಸೆ ಒಯ್ದು ಅಕ್ಕಾಗೆ ಕೊಟ್ಟೆ
ಅಕ್ಕ ನನಗೆ ಬೆಣ್ಣೆ ಕೊಟ್ಟು
ಬೆಣ್ಣೆ ಒಯ್ದು ಆನಿಗೆ ಕೊಟ್ಟೆ
ಆನಿ ನನಗ ಸಲಾಮು ಕೊಡ್ತು

ಲಡ್ಡು ಲಡ್ಡು ತಿಮ್ಮಣ್ಣ
ಲಡ್ಡಿಗೊಂದು ಹೊಡತಾ
ಹೊಡತಾಕೊಂದು ದುಡ್ಡು
ದುಡ್ಡಿಗೊಂದು ಬಡ್ಡಿ
ಬಡ್ಡಿಗೊಂದು ತಿಮ್ಮಣ್ಣ

ಅಪ್ಪ ಬಂದ ಪಾಟಿ ತಂದ
ಅವ್ವ ಬಂದ್ಲು ಪೇಣಿ ತಂದ್ಲು
ಪಾಟಿ ಪೇಣಿ ತೆಗೆದುಕೊಂಡು
ಸ್ಯಾಲಿಗ ಹೋದೆನವ್ವಾ
ತಾನ ತಂದಾನ ತಾನ ತಂದಾನ
ಹಂಪಪಟ್ಣಕ್ಕೆ ಹೋಗಿದ್ದೆ
ಕಂಚಿನ ಸೇರಿ ತಂದಿದ್ದೆ
ಬಾವಿ ಮ್ಯಾಲೆ ಇಟ್ಟಿದ್ದೆ
ಬಾವ್ಯಾಲ ಬಂಗಾರ
ಮನಿಯಲ್ಲ ಸಿಂಗಾರ

ಬುಡು ಬುಡುಕಿ ಬಂದಾನ
ಏನೇನು ತಂದಾನ
ಸೆಜ್ಜಿ ರೊಟ್ಯಾಕ ದಾರ
ದಾರ ತೆಗಿಯ ಮಲ್ಲವ್ವ
ಕಲ್ಲುತಾರ ಕಲ್ಲವ್ವ

ಹತ್ತಿ ಕಟ್ಟಿಗಿ ಬತ್ತಿ ಕಟ್ಟಿಗಿ
ಭಾವ ನೋಡು ಬಸವ ನೋಡು
ಕೈ ಕೈ ಥೂಳಗ್ಯೆ ಪಂಚಂ ಪಗಡ್ಯಾ
ನೆಲ ಮುಟ್ಟು ಹನುಮ
ದಾಸರ ಭರಮು ತಿಪ್ಪಿಮ್ಯಾಲೆ
ಕೋಳಿ ರಗತ್ ಬೋಳಿ ಸೊಂರಂ ಸಕ್ರಿ
ಯವ್ವಾ ಯವ್ವಾ ಗೆಣಸು
ಕುಡಿಕಿ ಹಾಕ್ಯಂಡು ಕುಣಿಸು
ಕರಿಸೀರೆ ಉಡುಸು
ಗಂಡನ ಮನಿಗೆ ಕಳಿಸು
ಜಾರ್ಕಿ ಬಂಡಿ ಆಟ
ಜಾರಿ ಬೀಳ ಆಟ
ಏಟು ಬಿತ್ತು ಜೋರಾಗಿ
ಜಾರಿ ಬಿದ್ದ ರಾಮಣ್ಣ[೧೮]

ಚಿಕ್ಕಮಕ್ಕಳು ಆಟ ಆಡುವಾಗ ಈಗಲೂ ಈ ಹಾಡುದನ್ನು ಹಾಡುತ್ತಿರುತ್ತದೆ.

ಕೂಸು ಬೆಳೆಯುತ್ತ ಗುನು ಗುನು ಹಾಡಿ ಆಡುವುದು. ಅದು ಅದರ ದೇಹಕ್ಕೆ ವ್ಯಾಯಾಮ. ಹಳ್ಳಿಗಳ ಮಕ್ಕಳಾಟ ಹಾಡಿ ಬೆಳೆಯಲು ಮಾರ್ಗ ತೋರಿಸುವ ಹಳ್ಳಿಗರ ಶಾರೀರ ಶಿಕ್ಷಣದ ಸಾಧನೆಗಳೆಂದು ಕರೆದರೆ ತಪ್ಪಾಗಲಿಕ್ಕಿಲ್ಲ.[೧೯]

ಮಕ್ಕಳು ಯಾವ ಕಟ್ಟುಪಾಡುಗಳಿಗೂ ಬದ್ಧರಲ್ಲ, ಮನುಷ್ಯನ ಜೀವನದಲ್ಲಿ ಯಾವುದೇ ಬಗೆಯ ಚಿಂತೆ, ಪಕ್ಷಪಾತ, ಸೀಮಿತ ಆಸಕ್ತಿಗಳು ಇಲ್ಲದೆ ಬಂಧನ ಕಾಣದ ಮನಸ್ಸು ಇರುವುದು. ಹಾಗೆಯೇ ಜೋಗುಳ ಕೇಳುವುದು ನೆನಪಿರುತ್ತದೆ. ಮಕ್ಕಳು ಹೇಳುವ ಪದಗಳು ಪರಿಚಯವಾಗುತ್ತವೆ. ಈ ಪದಗಳು ಹಿಂದಿನ ತಲೆಮಾರುಗಳನ್ನು ದಾಟಿ ಬಂದವುಗಳು, ಕಾಲದಿಂದ ಕಾಲಕ್ಕೆ ಮಕ್ಕಳಿಂದ ಹೊಸ ಹೊಸ ಹಾಡುಗಳು ರಚಿತವಾಗಿದೆ. ಇಲ್ಲಿ ಪ್ರಾಸ ಪ್ರಿಯತೆಯೇ ಹೆಚ್ಚಾಗಿದ್ದು ಅರ್ಥ ಕಡಿಮೆ ಆದ್ದರಿಂದ ಈ ಪದಗಳನ್ನು ಶಿಶುಪ್ರಾಸಗಳೆಂದು ಕರೆಯಲಾಗಿದೆ. ವಸ್ತು ಮತ್ತು ರಚನೆಗಳ ದೃಷ್ಟಿಯಿಂದಲೂ ಕೂಡ ಈ ಪ್ರಾಸಗಳು ಒಂದೇ ರೀತಿ ಹಾಗೂ ನಾದಗಳನ್ನು ಹೊಂದಿರುತ್ತದೆ.[೨೦]

ಆಟದ ಹಾಡುಗಳೆಂದರೆ ಆಟದೊಂದಿಗೆ ಹಾಡುವ ಪ್ರಾಸಗಳು, ಆಟದ ಪದಗಳು ಪದ್ಯ ರೂಪದಲ್ಲಿರುತ್ತದೆ. ಮನೋರಂಜಕವಾಗಿರುತ್ತದೆ. ಆಟದ ಹಾಡುಗಳಿಗೆ ಸ್ಫೂರ್ತಿ ಮಕ್ಕಳ ಅನುಕರಣ ಬುದ್ಧಿ. ಆಟದ ಪದಗಳ ರಚನೆಗೆ ಮಕ್ಕಳ ಪರಿಹಾಸ ಪ್ರವೃತ್ತಿಯೇ ಮೂಲ. ದೈನಂದಿನ ಬದುಕೇ ಮಕ್ಕಳ ಆಟದ ಹಾಡುಗಳ ವಸ್ತು. ಗುಂಪಿನ ಆಟಗಳಲ್ಲಿಯೇ ಆಟದ ಹಾಡುಗಳು ಪ್ರಾಬಲ್ಯ ಹೆಚ್ಚು. ಆಟದ ಪದಗಳು ಗಂಡುಮಕ್ಕಳ ಆಟಗಳಿಗಿಂತ ಹೆಣ್ಣುಮಕ್ಕಳ ಆಟಗಳಲ್ಲಿಯೇ ಹೆಚ್ಚು. ಆಟ ಪದಗಳನ್ನು ಉಚ್ಚರಿಸುವಾಗ ಅಭಿನಯವು ಮಹತ್ವದ ಪಾತ್ರ ವಹಿಸುವುದರಿಂದ ಮಕ್ಕಳ ದೇಹ ಬೆಳವಣಿಗೆ ಆಟಗಳಷ್ಟೇ ಹಾಡುಗಳೂ ಸಹಾಯಕವಾಗಿವೆ.[೨೧]

ಉಳಿದ ಜನಪದ ಸಾಹಿತ್ಯ ರೂಪಗಳಂತೆ ಮಕ್ಕಳ ಹಾಡುಗಳು ಸಹ ನಿರಂತರವಾದ ಮಾರ್ಪಾಡಿಗೆ ಒಳಗಾಗುತ್ತದೆ. ಹಾಗಿದ್ದೂ ಬದಲಾವಣೆಯ ಪ್ರಮಾಣ ದೊಡ್ಡವರ ರಚನೆಗಳಿಗಿಂತ ಮಕ್ಕಳ ರಚನೆಗಳಲ್ಲಿ ಕಡಿಮೆ ಎಂದು ವಿದ್ವಾಂಸರ ಮತ. ದೊಡ್ಡವರ ರಚನೆಗಳು ಶೈಶವಕ್ಕೆ ಸೀಮಿತವಾಗಿರುವುದನ್ನು ಲಕ್ಷಿಸಿದರೆ ಮಕ್ಕಳ ಹಾಡುಗಳ ಹೆಚ್ಚು ಬದಲಾವಣೆ ಸಾಧಿಸದಿರಲು ಇರುವ ನಿಜವಾದ ಕಾರಣವೇನೆಂಬುದು ತಿಳಿಯುತ್ತದೆ. ಆಟದ ಪದಗಳಲ್ಲಿ ಸೇರಿರುವ ಪರಂಪರಾಗತ ನಂಬಿಕೆಗಳು ನಮ್ಮ ಸಂಸ್ಕೃತಿಯ ಸ್ವರೂಪವನ್ನು ತಿಳಿಯಲು ಮತ್ತು ಮಕ್ಕಳ ಮನಸ್ಸಿನ ಕುತೂಹಲಕಾರಿ ಅಧ್ಯಯನಕ್ಕೆ ಮುಖ್ಯ ಸಾಮಗ್ರಿ ಎನಿಸಿವೆ.[೨೨]

**ಅಡಿಟಿಪ್ಪಣಿಗಳು**

೧. ಅಂಬಳಿಕೆ ಹಿರಿಯಣ್ಣ., ೧೯೮೫, **ಜಾನಪದ ಪರಿಶೋಧನ,** ಪುಟ ೭೪-೭೫.

೨. ಅಂಗಡಿ ಎಸ್.ಎಸ್., ೨೦೦೮, **ಜನಪದ ಸಾಹಿತ್ಯ ಭಾಷೆ,** ಪುಟ ೨೫೦-೨೫೧.

೩. ಗದ್ದಗಿಮಠ ಬಿ.ಎಸ್., ೧೯೮೬, **ಕನ್ನಡ ಜಾನಪದ ಗೀತೆಗಳು,** ಪುಟ ೪೩.

೪. ನಾಯಕ ಎನ್.ಆರ್., ೧೯೮೨, **ಕಾರವಾರ ಜಿಲ್ಲೆಯ ಜನಪದ ಗೀತೆಗಳು,** ಪುಟ ೧೮೮.

೫. ನಾರಾಯಣ ಗಿರಿಯಪ್ಪ., ೨೦೦೭, **ಆನೆಗೊಂದಿ ಜಾನಪದ,** ಪು. ೨೯-೩೦.

೬. ಅದೇ ಪುಟ ೩೩

೭. ಅಂಬಳಿಕೆ ಹಿರಿಯಣ್ಣ., ೧೯೮೫, **ಜಾನಪದ ಪರಿಶೋಧನ,** ಪುಟ ೯೧-೯೨.

೮. ಅಂಗಡಿ ಎಸ್.ಎಸ್., ೨೦೦೮, **ಜನಪದ ಸಾಹಿತ್ಯ ಭಾಷೆ,** ಪುಟ ೨೪೭.

೯. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೯೧.

೧೦. ಅಂಗಡಿ ಎಸ್.ಎಸ್., ೨೦೦೮, **ಜನಪದ ಸಾಹಿತ್ಯ ಭಾಷೆ,** ಪುಟ ೨೪೪.

೧೧. ಬಸವರಾಜ, ಗಂಗಾವತಿ.

೧೨. ವೀರೇಶ, ಕುಕನೂರು.

೧೩. ಹನುಮಂತ, ಕೊಪ್ಪಳ.

೧೪. ರಾಮೇಶ, ಕನಕಗಿರಿ.

೧೫. ಗಂಗಪ್ಪ, ನವಲಿ.

೧೬. ಯಮನೂರ, ತಾವರಗೆರೆ.

೧೭. ರಾಮಪ್ಪ, ಭಾಗ್ಯನಗರ.

೧೮. ಹನುಮಂತ, ತಳಕಲ್ಲ.

೧೯. ವೀರಣ್ಣದಂಡೆ, ಶ್ರೀಪಾದಶೆಟ್ಟಿ, ೨೦೦೬, **ಸುವರ್ಣ ಜಾನಪದ ಲೇಖನಗಳು,** ಪುಟ ೯೯.

೨೦. ಹನುಮಂತರಾವ ಬಿ. ದೊಡ್ಡಮನಿ, ೨೦೦೯, **ಜಾನಪದ ತೊಟ್ಟಿಲು,** ಪುಟ ೧೩-೧೪.

೨೧. ಕಾಳೇಗೌಡನಾಗವಾರ, **ತ್ರಿಪದಿ ರಗಳೆ ಮತ್ತು ಜನಪದ ಸಾಹಿತ್ಯ,** ಪುಟ ೭೩.

೨೨. ಅಂಬಳಿಕೆ ಹಿರಿಯಣ್ಣ, ೧೯೮೫, **ಜಾನಪದ ಪರಿಶೋಧನ,** ಪುಟ ೯೬-೯೭.

□□

ಅಧ್ಯಾಯ : ಏಳು

# ಸಮಾರೋಪ

ಆಧುನಿಕ, ತಂತ್ರಜ್ಞಾನ ಯುಗವೆಂದು ಕರೆಯಲ್ಪಡುವ ಇಂದಿನ ದಿನಮಾನಗಳಲ್ಲೂ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ನೂರಾರು, ಸಾವಿರಾರು ವರ್ಷಗಳಿಂದ ಉಳಿದು, ಬೆಳೆದುಬಂದಿರುವ ಜಾನಪದ ಸಾಹಿತ್ಯ, ಕಲೆ, ಸಂಸ್ಕೃತಿಗಳು ಅಜರಾಮರವಾಗಿವೆ. ಇದಕ್ಕೆ ಹೈದರಾಬಾದ್ ಕರ್ನಾಟಕದ ಕೊಪ್ಪಳ ಜಿಲ್ಲೆಯ ಗ್ರಾಮೀಣ ಪ್ರದೇಶ ಹೊರತಾಗಿಲ್ಲ. 'ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧದಲ್ಲಿ ಜಿಲ್ಲೆಯ ಜನಪದ ಗೀತ ಸಾಹಿತ್ಯವನ್ನು ಸಂಗ್ರಹಿಸಿ, ವಿಶ್ಲೇಷಿಸುವ ಕಾರ್ಯವನ್ನು ಇಲ್ಲಿ ಮಾಡಲಾಗಿದೆ. ಜನಪದ ಗೀತ ಸಾಹಿತ್ಯದಲ್ಲಿ ಕಂಡುಬರುವ ಸಾಹಿತ್ಯ ಪ್ರಕಾರಗಳನ್ನು, ಜನಪದ ಕಲೆಗಳನ್ನು, ಅದರಿಂದಾಗುವ ಪ್ರಯೋಜನಗಳನ್ನು ಮತ್ತು ಪ್ರಸ್ತುತ ಕಾಲಮಾನದಲ್ಲಿ ಜನಸಾಮಾನ್ಯರ ಮೇಲಾಗುವ ಪ್ರಭಾವಗಳನ್ನು ಸೂಕ್ಷ್ಮವಾಗಿ ನೋಡಲು ಸಾಧ್ಯವಾಗಿದೆ. ಆಧುನೀಕರಣ, ಜಾಗತೀಕರಣ, ಖಾಸಗೀಕರಣ, ಯಾಂತ್ರೀಕರಣಗಳ ಸವಾಲುಗಳನ್ನು ಧೈರ್ಯವಾಗಿ ಎದುರಿಸಲು(ಪೂರ್ಣ ಪ್ರಮಾಣದಲ್ಲಿಲ್ಲದಿದ್ದರೂ) ಶಕ್ತವಾಗಿದೆ ಎಂಬುದು ಸಮಾಧಾನಕರ ಸಂಗತಿ.

**ಫಲಿತಗಳು**

ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಈ ರೀತಿ ಪಟ್ಟಿ ಮಾಡಬಹುದು.

೧. ಕನ್ನಡ ಜನಪದ ದೃಷ್ಟಿಯಿಂದ ನೋಡಿದಾಗ ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯಕ್ಕೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಇದು ತನ್ನದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡ ಪ್ರದೇಶವಾಗಿದೆ. ತನ್ನ ಪ್ರದೇಶದ ಸತ್ವವನ್ನು ಮೈಗೂಡಿಸಿಕೊಂಡು ಈ ನೆಲದ ಸಾಂಸ್ಕೃತಿಕ ಒತ್ತಡದಲ್ಲಿ ಅರಳಿದ ಜನಪದ ಸಾಹಿತ್ಯವಾಗಿದೆ.

೨. ಭಾಷೆ ಮತ್ತು ಛಂದಸ್ಸಿನ ದೃಷ್ಟಿಯಿಂದ ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಹೊಸ ಪ್ರಯೋಗಗಳನ್ನು ಮಾಡಿಸಿ ರೂಢಿಯಲ್ಲಿರುವ ಗ್ರಾಂಥಿಕ ಕನ್ನಡ ಭಾಷೆಯ ಮೂಲಕವೇ ಜನಪದ ಗೀತಗಳ ಸೃಷ್ಟಿ ಮಾಡುವ ಸವಾಲನ್ನು ದಿಟ್ಟವಾಗಿ ಎದುರಿಸಿದೆ. ಜನಪದ ಅನುಭವಕ್ಕೆ ತಕ್ಕಂತೆ ಭಾಷೆಯನ್ನು ವೈವಿಧ್ಯಮಯವಾಗಿ ದುಡಿಸಿಕೊಳ್ಳುವ ಮೂಲಕ ಸಾರ್ಥಕವಾದ ಗೀತೆಗಳನ್ನು ನೀಡಿದೆ. ಇಲ್ಲಿನ ದೇಶಿ ಲಯ ಸಹಾಯದಿಂದ ಭಾಷೆಯನ್ನು ನವೀನಗೊಳಿಸಿದೆ.

೩. 'ರಾಷ್ಟ್ರೀಯತೆಯ ಪರಿಕಲ್ಪನೆ' ಮತ್ತು ಸಾಮಾಜಿಕ ಪ್ರಜ್ಞೆಯಲ್ಲೂ ಹೊಸ ದೃಷ್ಟಿಕೋನವಿದೆ. ಸಾಮಾಜಿಕ ಪ್ರಜ್ಞೆಯಲ್ಲೂ ಜನಪದ ಗೀತಗಳಲ್ಲಿ ಸಾಮಾಜಿಕ ಆಕ್ರೋಶವನ್ನು ಮಂದಸ್ವರದಲ್ಲಿ ಸೂಚಿಸುವ ದೃಷ್ಟಿಕೋನವಿದೆ. ತಳವರ್ಗದ ಜನರ ನೋವುಗಳನ್ನು, ಸಮಸ್ಯೆಗಳನ್ನು, ಅನುಕಂಪ, ವಿಷಾದದಿಂದ ನೋಡುವ ಮೂಲಕ ಅದಕ್ಕೆ ಮಾನವೀಯವಾಗಿ ಸ್ಪಂದಿಸುವ ಕಾಳಜಿಯನ್ನು ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ವ್ಯಕ್ತಪಡಿಸಿದೆ. ಈ ಕಾಳಜಿ ಕೇವಲ ಜಾತಿಯ ಮಟ್ಟಕ್ಕೆ ಸೀಮಿತವಾಗದೇ ಧರ್ಮದ ನೆಲೆಯಲ್ಲೂ ಕಾಣಿಸಿಕೊಳ್ಳುವ ಮೂಲಕ ವೈಶಾಲ್ಯತೆಯನ್ನು ಪಡೆದುಕೊಂಡಿದೆ. ಉದಾಹರಣೆ: ಡೊಳ್ಳು, ಹಂತಿ, ಮೊಹರಂ, ಬೀಸುವ, ಕುಟ್ಟುವ ಹಾಡುಗಳು.

೪. ಇದುವರೆಗೂ ದಾಖಲೆ ಆಗಲಾರದ ಜನಪದ ಗೀತಗಳನ್ನು ಮೊದಲ ಬಾರಿಗೆ ಸಂಗ್ರಹ ಮಾಡಿ ಒಂದೆಡೆ ಕಲೆಹಾಕಲಾಗಿದೆ.

೫. ಹಲವಾರು ಮಹತ್ವದ ಜನಪದ ಕಲಾವಿದರನ್ನು ಮೊದಲ ಬಾರಿಗೆ ಗುರುತಿಸಲಾಗಿದೆ. ಉದಾಹರಣೆ: ರೇವಣ್ಣಪ್ಪ ಅಬ್ಬಿಗೇರಿ, ಮದುಕುವ್ವ ಹರಿಜನ, ಶಿವಪ್ಪ ಡೊಳ್ಳಿನ ಮಾರುತಿ ಸಂಘ ಬೆಂಚಮಟ್ಟಿ, ಕೃಷ್ಣಪ್ಪ ಗೊಂದಳಿ ಮನ್ನೇರಹಾಳ, ಈರಪ್ಪ ತೋಟದವರು ಕುಷ್ಟಗಿ, ಕಿನ್ನಾಳ ಶಂಕ್ರಪ್ಪ ಗೊಂದಲಿಗ ಚಿಕ್ಕುಸಿಂಧೋಗಿ, ಸಿದ್ದಪ್ಪ ಬಿಜಕಲ್, ಹಂದ್ರಾಳದ ಹನುಮಂತಪ್ಪ ಪರಸಪ್ಪ ಚೌಡಿಕಿ, ಶರಣಪ್ಪ ಭಜಂತ್ರಿ ಮಸಬ ಹಂಚಿನಾಳ, ಶಾಂತಮ್ಮ ಹಿರೇಮನಿ ಹರಿಜನ, ಸಣ್ಣ ಯಲ್ಲಪ್ಪ ಬಿಸರಹಳ್ಳಿ, ಕುರುಬರು ನಾಗಪ್ಪ ಮಲ್ಲಾಪುರ, ಧರ್ಮಣ್ಣ ಹೊಸಳ್ಳಿ, ಭೀಮಣ್ಣ ದುರುಗಪ್ಪ ನವಲಿ, ಮಾಂತಯ್ಯ ಪೂಜಾರ ನವಲಿ, ಮಾಳಮ್ಮ ಕುರುಬರು ಜಂಗಮರ ಕಲ್ಗುಡಿ, ಬೀರಪ್ಪ ಎಡೆಯಾಪುರ, ಸುಟ್ಟವ್ವ ಹರಿಜನ ಮಾರೆಪ್ಪದಾಸರು, ಜೀವನಸಾಬ್ ವಾಲಿಕಾರ್, ದಾವನ್‌ಸಾಬ್ ಅತ್ತರ, ಅಗಳಕೇರಿ ಸುಮಿತ್ರಾ, ಶರಣಪ್ಪ ಚಳ್ಳಮರ, ತಿಪ್ಪಣ್ಣ ಅಂಬಜಿ, ಲಕ್ಷ್ಮವ್ವ ಆಡೂರು, ರೇವಣ್ಣಪ್ಪ ಹೀರೆಕುರುಬರ, ವೈ.ಬಿ. ಜೂಡಿ, ಹನುಮಂತಪ್ಪ, ಗೊಂದಲಿಗ ಹಿರೇರೆ ಸಿಂಧೋಗಿ ಮುಂತಾದವರು.

೬. ಕನ್ನಡ ಗ್ರಾಂಥಿಕ ಭಾಷೆಗೆ ಇಲ್ಲಿನ ಜನಪದ ಗೀತಗಳ ಲಯ, ನುಡಿಗಟ್ಟು ಅದರ ಸ್ವರೂಪವನ್ನು ಕಸಿಮಾಡುವ ಮೂಲಕ ಕೊಪ್ಪಳ ಜಿಲ್ಲೆಯ ಜನಪದ ಕವಿಗಳು ಹೊಸ ಭಾಷೆಯನ್ನು ಸೃಷ್ಟಿಸಿದರು. ಮುಖ್ಯ ದೇಶಿ ಲಯಗಳಾದ ಗೀಗೀ ಪದಗಳು, ಡೊಳ್ಳು, ಹಂತಿ, ಹೋಳಿ, ಮೊಹರಂ ಲಯ ಇವುಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ಮೂಲಕ ಕೊಪ್ಪಳದ ಕನ್ನಡ ಕವಿಗಳು ಕಾವ್ಯಕ್ಕೆ ಹೊಸತನ ತರುವಲ್ಲಿ ಯಶಸ್ವಿಯಾಗಿದ್ದಾರೆ.

* ಜನಪದ ಅನುಭವವನ್ನು ನಾದಮಯದಿಂದ ಅರ್ಥದ ನೆಲೆಗೆ ಒಯ್ದದ್ದು ಕೊಪ್ಪಳ ಜಿಲ್ಲೆಯ ಜನಪದ ಗೀತ ಸಾಹಿತ್ಯ ಮುಖ್ಯ ನೆಲೆಯಾಗಿದೆ. ಉದಾಹರಣೆಗೆ ಡೊಳ್ಳು ಹಾಡುಗಳು, ಹಂತಿ ಹಾಡುಗಳನ್ನು ಕೇಳುವುದು ಒಂದು ಸೊಗಸು. ಇಲ್ಲಿ ವಾದದ ಜೊತೆಗೆ ಅರ್ಥವೂ ಮುಖ್ಯವಾಗಿದೆ.

೮. ಕೊಪ್ಪಳ ಪ್ರದೇಶದ ರೈತಾಪಿ ಜನರ ಬದುಕು, ಬವಣೆ ಅದರಂತೆ ತಳವರ್ಗದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ವರೂಪ, ಅವು ಅಭಿವ್ಯಕ್ತಿಸುವ ಹಾಡುಗಳನ್ನು ದಾಖಲಿಸಲಾಗಿದೆ.

ಉದಾಹರಣೆಗೆ: ಹಂತಿ ಹಾಡುಗಳು-ರೈತರ ಬದುಕು, ಮೊಹರಂ ಹಾಡುಗಳು-ಮುಸ್ಲಿಂ-ಸಂಸ್ಕೃತಿ, ಡೊಳ್ಳಿನ ಹಾಡುಗಳು ಹಾಲುಮತ ಸಂಸ್ಕೃತಿ ಪ್ರತಿಬಿಂಬಿತವಾಗಿವೆ.

೯. ಹಾಡುಗಾರರ ಹಾವಭಾವಗಳನ್ನು ಗಮನಿಸಿ ಗೀತೆಗಳಿಗೆ ನಾಟಕೀಯತೆಯನ್ನು ತಂದದ್ದು ಕೊಪ್ಪಳ ಜಿಲ್ಲೆಯ ಜನಪದ ಗೀತೆಗಳ ವಿಶಿಷ್ಟತೆಯಾಗಿದೆ. ಇದು ಕೊಪ್ಪಳ ಜನಪದ ಪ್ರಯೋಗ ಶೀಲತೆಯೂ ಹೌದು.

೧೦. ನಿಸರ್ಗವು ಇಲ್ಲಿನ ಕವಿಗಳಿಗೆ ಆರಾಧನೆಯ ವಸ್ತುವಾಗಿಲ್ಲ. ಅದು ಪ್ರೀತಿಯ ವಸ್ತುವಾಗಿದೆ. ಅದು ಕಟ್ಟಳೆಯಿಂದ ಮುಕ್ತವಾದ ಸಹಜ ಬದುಕನ್ನು ಕೊಡುವ ತಾಣವೂ ಆಗಿದೆ. ಇಲ್ಲಿನ ಕವಿಗಳಿಗೆ ನಿಸರ್ಗವು ಒಂದು ನೆಲೆಯಲ್ಲಿ ವಾಸ್ತವಗಳಾಗಿ ಕಂಡರೆ, ಇನ್ನೊಂದು ದೃಷ್ಟಿಯಿಂದ ನಿಜವಾದ ಜನಪದದ ಮುಖ್ಯ ನೆಲೆಯಾಗಿದೆ.

೧೧. ಪರಂಪರೆಯಿಂದ ಬಂದ ಅಭಿಜಾತ ಜನಪದ ಲಯ, ಬಂಧ, ಸ್ವರೂಪವನ್ನು ಬಳಸಿಕೊಂಡು ಹೊಸ ಅನುಭವವೊಂದಕ್ಕೆ ಜನಪದ ಗೀತ ರೂಪ ಕೊಡುವ ಪ್ರಯತ್ನವನ್ನು ಇಲ್ಲಿನ ಕವಿಗಳು ಮಾಡಿದರು. ಪರಂಪರೆಯ ಅಂಶಗಳನ್ನು ಬಳಸಿಕೊಳ್ಳುತ್ತಲೇ ಹೊಸದರ ಕಡೆಗೆ ತುಡಿಯುವ ದೃಷ್ಟಿಕೋನವನ್ನು ಇಲ್ಲಿ ಕಾಣುತ್ತೇವೆ. ಇದು ಇಲ್ಲಿನ ಕವಿಗಳಲ್ಲಿದ್ದ ಉದಾರವಾದಿ ನೆಲೆಯಿಂದ ಬಂದದ್ದಾಗಿದೆ ಎಂದು ಪ್ರಸ್ತುತ ಅಧ್ಯಯನದಿಂದ ತಿಳಿದುಬರುತ್ತದೆ.

□□

# ಅನುಬಂಧಗಳು

---

೧. ವಕ್ತೃಗಳ ವಿವರ

೨. ಜಾನಪದ ಹಾಡುಗಳ ಕೆಲವು ಮಾದರಿಗಳು

೩. ಪರಾಮರ್ಶನ ಗ್ರಂಥಗಳು

೪. ಕೊಪ್ಪಳ ಜಿಲ್ಲೆ ನಕ್ಷೆ

೫. ಹಾಡುಗಾರರ ಭಾವಚಿತ್ರಗಳು

# ೧. ವಕ್ತೃ ವಿವರ

## ಕೊಪ್ಪಳ ತಾಲ್ಲೂಕು

| ಕ್ರ.ಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೧. | ಹನುಮಂತಪ್ಪ | ೪೦ | ಇಲ್ಲ | ಗೊಂದಲಿಗ | ಹಿರೇಸಿಂದೋಗಿ |
| ೨. | ರೇವಣಿಪ್ಪ ಅಬ್ಬಿಗೋರಿ | ೪೫ | ಇಲ್ಲ | ಕುರುಬ | ಹಲಗೇರಿ |
| ೩. | ಸಾವರೆವ್ವಕಾಳಿ | ೪೦ | ಇಲ್ಲ | ಕುರುಬ | ಬಿಸರಹಳ್ಳಿ |
| ೪. | ಗುಂಡಮ್ಮ | ೪೫ | ಇಲ್ಲ | ಕುರುಬ | ಇರಕಲ್ಲಗಡಾದ |
| ೫. | ಸುಮಿತ್ರ | ೪೦ | ಇಲ್ಲ | ಚಲುವಾದಿ | ಅಗಳಕೇರಿ |
| ೬. | ಹನುಮಂತಪ್ಪ | ೪೦ | ಇಲ್ಲ | ನಾಯಕ | ಕೊಪ್ಪಳ |
| ೭. | ನಾಗರಾಜ | ೩೫ | ಪದವಿ | ನಾಯಕ | ಕೊಪ್ಪಳ |
| ೮. | ಗಂಗಮ್ಮ | ೩೦ | ಇಲ್ಲ | ಕುರುಬ | ಕೊಪ್ಪಳ |
| ೯. | ಈರಪ್ಪ | ೪೦ | ಇಲ್ಲ | ಗೊಂದಳಿ | ಚಿಕ್ಕಸಿಂದೋಗಿ |
| ೧೦. | ನೀಲಮ್ಮ | ೩೫ | ಇಲ್ಲ | ಕುರುಬ | ಕೊಪ್ಪಳ |
| ೧೧. | ಹಂದ್ರಾಳ ಎಲ್ಲವ್ವ | ೪೦ | ಇಲ್ಲ | ನಾಯಕ | ಹೊಸಪೇಟೆ |
| ೧೨. | ಸೋಮು | ೩೫ | ಇಲ್ಲ | ನಾಯಕ | ಹುಲಿಗಿ |
| ೧೩. | ಲಾಲಾಸಾಬ | ೫೫ | ಇಲ್ಲ | ಪಿಂಜಾರು | ಕೊಪ್ಪಳ |
| ೧೪. | ಬಸಮ್ಮ | ೩೦ | ಇಲ್ಲ | ಕುರುಬ | ಕೊಪ್ಪಳ |

## ಕುಷ್ಟಗಿ ತಾಲ್ಲೂಕು

| ಕ್ರ.ಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೧. | ಶರಣಪ್ಪ ವಡಿಗೇರ | ೫೫ | ಪದವಿ | ಕುರುಬ | ಕುಷ್ಟಗಿ |
| ೨. | ತಿಪ್ಪಣ್ಣ ಅಂಬಜಿ | ೫೫ | ಇಲ್ಲ | ಗೊಂದಲಿಗ | ತಾವರೆಗೆರೆ |

| ಕ್ರ.ಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೩. | ದಾವನಾಸಾಬ ಅತ್ತರ | ೬೦ | ಪದವಿ | ಮುಸ್ಲಿಂ | ಆಬಲಕಟ್ಟಿ |
| ೪. | ಯಮುನಮ್ಮ ಮಲ್ಲೇಶಪ್ಪ | ೫೦ | ಇಲ್ಲ | ನಾಯಕ | ತಾವರಗೆರೆ |
| ೫. | ಈರಪ್ಪ | ೫೦ | ಇಲ್ಲ | ಗೊಂದಲಿಗ | ಚಿಕ್ಕಸಿಂದೋಗಿ |
| ೬. | ಮುದುಕವ್ವ ಹರಿಜನ | ೪೦ | ಇಲ್ಲ | ಹರಿಜನ | ಹಿರೆಗೊಣ್ಣಾಗರ |
| ೭. | ಶಿವಪ್ಪ ಡೊಳ್ಳಿನ | ೪೫ | ಇಲ್ಲ | ಕುರುಬ | ಕೊಡಕೇರಾ |
| ೮. | ರೇಣಕಮ್ಮ ಪೂಜಾರ್ | ೪೫ | ಇಲ್ಲ | ಕುರುಬ | ಕುಷ್ಟಗಿ |
| ೯. | ರಾಮಣ್ಣ | ೫೦ | ಇಲ್ಲ | ಕುರುಬ | ಕುಷ್ಟಗಿ |
| ೧೦. | ಲಲಿತಮ್ಮ | ೪೦ | ಇಲ್ಲ | ಲಿಂಗಾಯತ | ಕುಷ್ಟಗಿ |
| ೧೧. | ಯಮುನಮ್ಮ ಮಲ್ಲೇಶಪ್ಪ | ೪೦ | ಇಲ್ಲ | ನಾಯಕ | ತಾವರೆಗೆರೆ |
| ೧೨. | ರಾಮಣ್ಣ | ೪೦ | ಇಲ್ಲ | ಕುರುಬ | ಕುಷ್ಟಗಿ |
| ೧೩. | ಕೃಷ್ಣಪ್ಪ | ೫೦ | ಇಲ್ಲ | ಗೋಂದಳಿ | ಮನ್ನೇರಹಾಳ |

## ಯಲಬುರ್ಗಾ ತಾಲ್ಲೂಕು

| ಕ್ರ.ಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೧. | ಜೀವನಸಾಬ ವಾಲಿಕಾರ | ೨೯ | ಎಂ.ಎ. ಬಿ.ಇಡಿ. | ಮುಸ್ಲಿಂ | ಬಿನ್ನಾಳ |
| ೨. | ಶ್ರೀಮತಿ ಲಕ್ಷ್ಮವ್ವ | ೫೦ | ಇಲ್ಲ | ಹರಿಜನ | ಆಡೂರ |
| ೩. | ಬೀರಪ್ಪ ಯಡಿಯಾಪುರ | ೭೦ | ಇಲ್ಲ | ಕುರುಬ | ಯಡಿಯಾಪುರ |
| ೪. | ಭೀಮಪ್ಪ ಶೆಟ್ಟೆಪ್ಪ | ೭೦ | ಇಲ್ಲ | ಕುರುಬ | ಕುಕನೂರು |
| ೫. | ರಾಮಣ್ಣದಾಸರು | ೫೦ | ಇಲ್ಲ | ದಾಸರು | ಕರಲಕಟ್ಟಿ |
| ೬. | ಶಂಕ್ರಮ್ಮ ಸೌಬಳ್ಳಿ | ೪೦ | ಇಲ್ಲ | ನಾಯಕ | ಕುಕನೂರು |
| ೭. | ಶರಣಪ್ಪ ಚಳಮರದ | ೫೦ | ಇಲ್ಲ | ಕುರುಬ | ಕುಕನೂರು |
| ೮. | ಸುಟ್ಟವ್ವ ಹರಿಜನ | ೭೦ | ಇಲ್ಲ | ಹರಿಜನ | ಮಸಬಹಂಚಿನಾಳ |
| ೯. | ಮಾರೆಪ್ಪ ದಾಸರು | ೭೦ | ಇಲ್ಲ | ಹರಿಜನ | ತುಮ್ಮರಗುದ್ದಿ |
| ೧೦. | ಬಸವರಾಜ ಹೂಗಾರ | ೫೦ | ೮ | ಲಿಂಗಾಯತ | ತಾಳಕೇರಿ |
| ೧೧. | ಗೌಸ್‌ಸಾಬ | ೩೫ | ಇಲ್ಲ | ಪಿಂಜಾರು | ಕುದರಿಮೋತಿ |
| ೧೨. | ರಜಾಕ್‌ಸಾಬ | ೩೦ | ಇಲ್ಲ | ಮುಸ್ಲಿಂ | ಕುದರಿಮೋತಿ |
| ೧೩. | ಹುಸೇನ್ ಮಕಾನ್‌ದಾರ | ೩೦ | ಪದವಿ | ಮುಸ್ಲಿಂ | ಕುದರಿಮೋತಿ |

| ಕ್ರಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೧೪. | ಇಬ್ರಾಹಿಂಸಾಬ | ೬೦ | ಇಲ್ಲ | ಮುಸ್ಲಿಂ | ಬಹಾದ್ದೂರಬಂಡಿ |
| ೧೫. | ಅಕ್ಬರ್ ಸಿ. ಕಾಲಿಮಿರ್ಚಿ | ೬೦ | ಇಲ್ಲ | ಮುಸ್ಲಿಂ | ಬಿಸನಳ್ಳಿ |
| ೧೬. | ರೇವಣೆಪ್ಪ | ೪೦ | ಇಲ್ಲ | ಕುರುಬ | ಯಲಬುರ್ಗಾ |
| ೧೭. | ಬಸಮ್ಮ | ೪೫ | ಇಲ್ಲ | ನಾಯಕ | ಕುಕನೂರು |

## ಗಂಗಾವತಿ ತಾಲ್ಲೂಕು

| ಕ್ರಸಂ. | ಹೆಸರು | ವಯಸ್ಸು | ಶಿಕ್ಷಣ | ಜಾತಿ/ಧರ್ಮ | ಊರು |
|---|---|---|---|---|---|
| ೧. | ಗುಡ್ಡದವರ್ ರಾಮಣ್ಣ | ೫೦ | ಇಲ್ಲ | ಕುರುಬ | ಮಲ್ಲಪುರ |
| ೨. | ಧರ್ವಣ್ಣ | ೫೫ | ಇಲ್ಲ | ಕುರುಬ | ಹೊಸಹಳ್ಳಿ |
| ೩. | ಭೀಮಣ್ಣ | ೬೫ | ಇಲ್ಲ | ಕುರುಬ | ನವಲಿ |
| ೪. | ಮಂತಯ್ಯ ಪೂಜಾರ್ | ೩೦ | ಪದವಿ | ಲಿಂಗಾಯತ | ನವಲಿ |
| ೫. | ಹಮೀದ್‌ಸಾಬ | ೫೫ | ಇಲ್ಲ | ಮುಸ್ಲಿಂ | ನವಲಿ |
| ೬. | ರಾಮಚಂದ್ರಪ್ಪ | ೫೦ | ಇಲ್ಲ | ಕುರುಬ | ಆನೆಗೊಂದಿ |
| ೭. | ಮಾಳಮ್ಮ | ೩೦ | ಇಲ್ಲ | ಜಂಗಮರ | ಕಲ್ಗುಡಿ |
| ೮. | ಮಾರೆಮ್ಮ | ೪೦ | ಇಲ್ಲ | ಹರಿಜನ | ವಿದ್ಯಾನಗರ |
| ೯. | ದುರಗಮ್ಮ | ೪೫ | ಇಲ್ಲ | ಹರಿಜನ | ವಿದ್ಯಾನಗರ |
| ೧೦. | ಅನ್ನವ್ವ | ೪೦ | ಇಲ್ಲ | ನಾಯಕ | ವಿದ್ಯಾನಗರ |
| ೧೧. | ಮಲಿಯಮ್ಮ | ೪೫ | ಇಲ್ಲ | ಹರಿಜನ | ವಿದ್ಯಾನಗರ |
| ೧೨. | ಹುಲಿಗೆಮ್ಮ | ೪೦ | ಇಲ್ಲ | ಹರಿಜನ | ವಿದ್ಯಾನಗರ |
| ೧೩. | ಗಂಗಮ್ಮ | ೫೦ | ಇಲ್ಲ | ಹರಿಜನ | ವಿದ್ಯಾನಗರ |
| ೧೪. | ರತ್ನಮ್ಮ | ೫೫ | ಇಲ್ಲ | ಹರಿಜನ | ವಿದ್ಯಾನಗರ |
| ೧೫. | ಅಡಿವೆಮ್ಮ | ೫೦ | ಇಲ್ಲ | ಭೋವಿ | ವಿದ್ಯಾನಗರ |
| ೧೬. | ಹನುಮಂತಪ್ಪ ಬಾರಕೇರ್ | ೫೦ | ಇಲ್ಲ | ಬಾರಕೇರ್ | ಮಲ್ಲಾಪುರ |
| ೧೭. | ನಿಂಗಪ್ಪ | ೪೫ | ಇಲ್ಲ | ಕುರುಬ | ಮಲ್ಲಾಪುರ |
| ೧೮. | ನಾಗಪ್ಪ ಕುರುಬರು | ೪೦ | ಇಲ್ಲ | ಕುರುಬ | ಮಲ್ಲಾಪುರ |
| ೧೯. | ಸಿದ್ಧಪ್ಪ | ೪೫ | ಇಲ್ಲ | ಕುರುಬ | ಜಂಗಮರ ಕಲ್ಗುಡಿ |
| ೨೦. | ನಾಗಪ್ಪ | ೫೫ | ಇಲ್ಲ | ಕುರುಬ | ಜಂಗಮರ ಕಲ್ಗುಡಿ |
| ೨೧. | ಬಸವರಾಜ | ೨೫ | ಪದವಿ | ನಾಯಕ | ನವಲಿ |
| ೨೨. | ದೇವರಾಜ | ೬ | ಇಲ್ಲ | ಹರಿಜನ | ವಿದ್ಯಾನಗರ |
| ೨೩. | ಸೀತಮ್ಮ | ೬ | ಇಲ್ಲ | ಭೋವಿ | ವಿದ್ಯಾನಗರ |

□□

# ೨. ಜಾನಪದ ಹಾಡುಗಳ ಕೆಲವು ಮಾದರಿಗಳು

**ಹಾಡುಗಳು**

ಜಿಲ್ಲೆಯಾದ್ಯಂತ ಹಲವು ಊರುಗಳಲ್ಲಿ ಕ್ಷೇತ್ರಕಾರ್ಯ ಮಾಡಿ ಸುಮಾರು ಮೂರುನೂರಕ್ಕೂ ಮಿಕ್ಕು ಹಾಡುಗಳನ್ನು ಸಂಗ್ರಹಿಸಲಾಗಿದೆ. ಅವುಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿರುವ, ಸಂಪೂರ್ಣವಾಗಿ ಹೋಲಿಕೆ ಇರುವ ಹಾಡುಗಳು ಕೆಲವು ಇವೆ. ಒಂದೆರಡು ನುಡಿಗಳನ್ನು ಹಾಡಿ ಮರೆತುಹೋಗಿದೆ ಎಂದು ನಿಲ್ಲಿಸಿದ ಅಪೂರ್ಣ ಹಾಡುಗಳನ್ನು ಬಿಟ್ಟಿದ್ದೇನೆ. ಅತ್ಯುತ್ತಮವಾದವುಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅನುಕ್ರಮದಲ್ಲಿಯೇ ಜನಪದ ಹಾಡುಗಳನ್ನು ಕೊಡಲಾಗಿದೆ.

### ಹೋಳಿ ಹಾಡು

ಹೇಳುತೇನ ಯಾರನ್ನು ನೆನೆಯಲೆ
ಮುದ್ದು ಗಣಪನನ್ನು ನೆನೆಯಲೆ ।
ಮುದ್ದು ಗಣಪನನ್ನು ನೆನೆಯಲೆ
ಬಂದತ ವಿಘ್ನವನ್ನು ದೂರವಾಗಲಿ ॥

ಆನೆಗೆ ಅಂಬಾರಿ ಚಂದ ಕುದುರಿಗೆ ತಡಿ ಚಂದ
ಸದರಿ ಚಂದ ನಮ್ಮ ಕಾಮಣ್ಣ ಮಗಳಾ ರೂಪಕ್ಕೆ ಚಂದ ।
ಕಲ್ಲು ಕಲ್ಲಗಿಸಿ ಮುಳ್ಳು ಮುಳ್ಳುಗಿಸಿ ಗೆಜ್ಜೆ ಕರಗಸ ಕುಕನೂರು
ಗೆಜ್ಜೆ ಕರಗಸ ಕುಕನೂರು ಹೆಜ್ಜೆ ಹೆಜ್ಜೆಗೆ ಪದ ಹೇಳುವರು ॥

ಕಾಮಕಲ್ಲಿಗೆ ಸೋತು ಭೀಮ ಬಿಲ್ಲಿಗೆ ಸೋತು ರಾಮಣ್ಣ
ಸೋತು ರಣದಾಗ ಧರ್ಮರಾಜ ಸೋತು ದ್ರುರಪತಿಯಾ ಪಗಡೆಯಾಟಾದಗ ।
ಕಟ್ಟಿದಕಲ್ಲುನಿಂದ ಕಟ್ಟಿದ ಕುಕನೂರು ಎಂತನೋಡಿದರೋ ಹುಲಿಮುಖ
ತಗಸಿದಾಗ ಆಗ ಬರುತ್ತನೊ ಕಾಮಣ್ಣ ॥

ಮುಲ್ಲಸಾಬ ಕಟ್ಟಿಸನೊ ಕುಕನೂರು ಬಣ್ಣದದ ಬಾವಿ
ಮಲ್ಲಿಗೆ ಸೋಬಾನ ಗಲ್ಲುಗಲ್ಲು ಎಂಬ ಕುಕನೂರು ।

ಗಲ್ಲು ಗಲ್ಲು ಎಂಬ ಕುಕನೂರು ಪೇಟ್ಯಾಗ
ಗೊಲ್ಲವನು ಆಗನೊ ಕರಿಹನುಮ ॥

ಎರಿಯ ಹೊಲದಾಗ ಹಣ್ಣು ಮೆಣಿಸಿನಕಾಯಿ
ಎಣಿಸುವ ಗಿಳಿ ಹಿಂಡುಕಳಿಸವು ಎನ್ನು ಕುದುರಿಯ ।
ಮರದ ಮೇಲೆ ಗಿಳಿಯಕುಂತ್ತು
ರಾಘವಮನಂತವು ಗಿಳಿ ಕುಂತು ಸೀತವ್ವನ ॥

**ಹಾಡಿದವರು: ಭೀಮಪ್ಪ ಶೆಟ್ಟೆಪ್ಪನವರು, ಕುಕನೂರು**

## ಹಂತಿ ಪದಗಳು

ಮೊದಲು ಹಂತಿಗೆ ಶರಣು ಶಂಕರ ಗಂಡಗೆ ಶರಣು
ಭೂಮಿ ತಾಯಿಗೆ ನಮ್ಮ ಶರಣು ನಮ್ಮ ಬಸವನ ।
ನಾಕು ಪಾದಕೆ ಶಿವಶರಣು ॥

ಹಾಡಿಗೆ ಮೊದಲ ಯಾರನ್ನ ನೆನೆಯಲೊ
ಮೋಡದಾಗಿರುವ ಗರುಡನ್ನೊ-ಗಣಪತಿ ರಾಯನ ।
ಹಾಡಿಗೆ ಮೊದಲ ನೆನೆದೆನೋ ॥

ಹಾಡಿಗೆ ಮೊದಲ ಯಾರನ್ನ ನೆನೆಯಲೋ
ಬಾಯಿಲ್ಲದವನ ಬಸವಣ್ಣೊ-ನೆನೆಯಲೋ ।
ಬಾರದ ಪದವು ಬಂದಾವೋ ॥

ಬೆಳ್ಳನ ಎರಡೆತ್ತ ಬೆಳ್ಳಿಯ ಬಾರಕೋಲು
ಬಂಗಾರದ ಶೆಡ್ಡಿ ಬಲಗೈಯಾಗ-ಹಿಡಕೊಂಡು ।
ಹೊನ್ನ ಬಿತ್ತಾನೊ ಹೊಳಿಸಾಲ ॥

ಬೆಳ್ಳಿಯ ಮೂಡಿತೊ ಬೆಳಗೊಂದು ತಾಸಿತ್ತು
ಒಳ್ಳೊಳ್ಳಿ ಮೀನ ಗರಿಕೆದರಿ-ಅಡಾವ ।
ಗರತಿ ಗಂಗವ್ವನ ಒಡಲಾಗ ॥

ಎಂಟೆತ್ತು ಕಟಗೊಂಡು ಕಂಟ್ಯಾಗ ಬರುವಾಗ
ಗಂಟ ಬಿದ್ದಾನೊ ಇದಿಮಾಯೆ-ಹೊಟ್ಟೇರೆ ।
ಬಂಟ ಹುಟ್ಟ್ಯಾನೊ ಬಸವಣ್ಣ ॥

ಗೆಜ್ಜೆ ಕಾಲಿನ ಬಸವ ಹೆಜ್ಜಾಗ ಹೆಜ್ಜೆಯನಿಡೊ
ಹೆಜ್ಜೆ ತಪ್ಪಿದರೆ ಬೈಯವಿನೊ-ನಮ್ಮ ಬಸವ ।
ಹೆಜ್ಜೆಗೆ ಹುರಿಗೆಜ್ಜೆ ಬಿಗಿಸೆನೋ ॥

ಹಂತಿಯ ಹೊಲ ನೋಡು ಗೆಂಧಿಯ ಬೆಳಿನೋಡು
ಹಾದ ಹೋಗಾವನ ನಗಿ ನೋಡು-ಆರಂಭ ನೋಡು ।
ಅಡಿವ್ಯಾಗ ನಮ್ಮ ಬಸವಣ್ಣ ॥

ಗಿಡಗುಂಟ ದಾರ್‍ಯಾಗ ಗಿಡಸಣ್ಣ ಮಲ್ಲಿಗಿ
ಕಿರಿಗೇಡಿ ನಮ್ಮ ಬಸವಣ್ಣ-ಬರುವಾಗ ।
ಗಿಡಕೊಂದ ಮಗ್ಗಿ ಉದುರ್‍ಯಾವ ॥

ಬಸವ ಬಂಡಿಯನುಡಿ ಶಿವ ನಂದಿಯೇರಿ
ಪಾರ್ವತಿದೇವಿ ರಥವೇರಿ-ಬರುವಾಗ ।
ಬಂದಂತ ಮೋಡ ಬಯಲಾಯ್ತು ॥

ಎಂಕಂಚಿ ಗುಡ್ಡದಾಗ ಮಂಚ ಕಾಣುವುದೇನ
ಕಂಚಿಗಾರಣ್ಯ ವಲಿ ಹೂಡಿ-ಮಾಡ್ಯಾನ ।
ತಂಟಲ ಹೋರಿಗೆ ಹುರಿಗೆಜ್ಜೆ ॥

ಬೆಟಗೇರಿ ಹಾದ್ಯಾಗ ಬರುವ ಚಿಟಗಾನೆ ಯಾರವಳು
ಚಿಟಕೆ ಮುರಿದು ನಗ್ತಾರೆ-ಪುರುಷಾರು ।
ಹಟಗಾನೆ ಸಲ್ಲ ಅವಳಲ್ಲಿ ॥

ಕೊತ್ತಲನು ಜಿಗಿಬ್ಯಾಡ ಕೈಕಾಲು ಮುರಿದು ಕೊಳಬ್ಯಾಡ ।
ಸುತ್ತಾದು ಬಾರೊ ಸುಖ ಜಾಣ
ಸುತ್ತಾಕೆ ಪಾವಡೆ ಕೊಡುವೇನು ॥

ಗೆಣೆಯ ಬರುತಾನಂತ ಗೆಣಸಿನ ಹೋಳಿಗಿ ಮಾಡಿದೆ
ಗೆಣೆಯ ಬರಲಿಲ್ಲ ಉಣಲಿಲ್ಲ-ಮಳೆಯಾಳ ।
ತೆರಬಾಯಿ ಗಂಡ ಉಣೇಳು ॥

ಹಾದಿಯ ಹೊಲ ಮಾಡಿ ಗೋಧಿಯ ತೆನೆ ಮಾಡಿ
ಹಾದಿ ಹಿಡಿದು ಹೋಗಾಕಿಯ-ಮೊಲೆ ನೋಡಿ ।
ಒಟ್ಟಾರೆ ಹುಟ್ಟ್ಯಾನ ಎರಡು ಬಡಹುಡುಗರು ॥

ಊರು ಮುಂದಲ ಹೊಲ ನೀ ಮಾಡೊ
ನಿನ್ನ ನೋಡಿ ನೀರಾ ತರತೀನಿ-ನನ್ನ ಗೆಣೆಯ ।
ನೀ ಬಾ ಅಂದಾಗ ನಾ ಬರತೀನಿ ॥

ಚಿತ್ತ ಚಿಗರಿಯ ಮ್ಯಾಲ ಗ್ಯಾನ ಗೆಣೆಯನ ಮ್ಯಾಲ
ಚಿತ್ರದ ಕೊಂಡವು ತಲೆಮ್ಯಾಲ-ಹೊತ್ತುಕೊಂಡು ।
ಹೊತ್ತೇರ ನೀರಾ ತರವಳು ॥

ಹಂಡೆತ್ತಿನ ಮ್ಯಾಲ ಮಂಡೆ ಮೂಗಿನ ಹೆಣ್ಣೆ
ಉಂಡಿ ಕೊಡತೀನಿ ಉಡಿ ಒಡ್ಡ-ಎಲೆ ಹುಡುಗಿ ।
ದಂಡು ಕೊಡುತೀನಿ ಬೆನ್ನ ಹತ್ತ ॥

ಹಾಡಿದವರು: **ದಾವನಸಾಬ ಅತ್ತರ್, ಅಬಲಕಟ್ಟಿ**

## ಬಸವಣ್ಣ–ಹಂತಿಹಾಡು

ಬಸವಣ್ಣ ನಿನಪಾದ ಹಸನಾಗಿ ತೊಳದೇನೋ
ಹಸರ ಗಲ್ಲಿಪ ಹೊಲಿಸೇನೋ
ಹಸರ ಗಲ್ಲಿಪ ಹೊಲಿಸೇನ ಬಸವಣ್ಣಾ
ಹಸನುಳ್ಳ ದನಿಯ ಕೊಡು ನನಗೋ ।

ಬಸವಣ್ಣನ ಹಣಿಮ್ಯಾಗ ಹಸನುಳ್ಳ ವಿಭೂತಿ
ಕುಸರಾದ ಗೆಜ್ಜಿ ಕೊರಳಾಗೋ
ಕುಸುರಾದ ಗೆಜ್ಜಿ ಕೊರಳಾಗ ಕಟಕೊಂಡೋ
ಉಸರಾಕಿ ಹಂತಿ ತಿರಗ್ಯಾನೋ ।

ಹಂತಿಯ ಹೊಡೆವಾಗ ಹೆಂತವನ ನೆನಿಬೇಕೋ
ಕಂತಪಿತನಾದ ಬಸವಯ್ಯನೋ
ಕಂತಪಿತನಾದ ಬಸವಯ್ಯನ ನೆನದರೋ
ತಂಪತ್ತಿನ ರಾಶಿ ಹಸನಾಗ್ಯೋ ।

ಹಸಗಾಯಿ ಹರಿಬ್ಯಾಡ ಕಗ್ಗಾಯಿ ಕಡಿಬ್ಯಾಡೋ
ಬಸವಣ್ಣ ಹೂಡಿ ಬಡಿಬ್ಯಾಡೋ
ಬಸವಣ್ಣನ ಹೂಡಿ ಬಡಿಬ್ಯಾಡ ಸೋಮವಾರ ದಿನ
ಹೊಸಮಗನಾಗಿ ತಿರಗಲ್ಯೋ ।

ಬಸವಣ್ಣ ನೆನೆದರೆ ಹಸವ–ನೀರಡಿಕಿಲ್ಲೋ
ಬಿಸಲಾಗ ಕೊಡಿಯ ಹಿಡದಂಗೋ

ಬಿಸಲಾಗ ಕೊಡಿಯ ಹಿಡದಂಗ ಹಿರಿವಳಿಯ
ಗಂಗವ್ವ ಸಾಗಿ ನಡದ್ಹಂಗೋ ।

ತುಂಬಿದ ಹೊಳಿಯಾಗ ಕೊಂಬ ಕಾಣವದೇನೋ
ಬಂಗಾರದಿಣಿಯ ಬಸವಣ್ಣೊ
ಬಂಗಾರದಿಣಿಯ ಬಸವಣ್ಣ ಬರುವಾಗೋ
ಗಂಗವ್ವ ತಾಯಿ ಬದಿಗಾಗ್ಯೋ ॥

**ಹಾಡಿದವರು: ಭೀಮಪ್ಪ ಶೆಟ್ಟೆಪ್ಪ, ಕುಕನೂರು**

**ಬಸವಣ್ಣನ ಭಾರ**

ಸುತ್ತಿಗ್ಯಾನ ಅಳಕೋರ ಮೇಲಕ್ಕೆ ತುಳುಕೋರ
ಹೆಂಡಿಯ ಹಾಕಿ ಬೆಳಕೋರೋ
ಹೆಂಡಿಯ ಹಾಕಿ ಬೆಳಕೋರೋ ಹೊಲದಲ್ಲಿ
ಮೇಟಿಯ ನಡೆಸಿ ಉಳಕೊಳ್ಳೊ ।

ಊರಿಗೆ ದೊಡ್ಡವನ ಯಾವ ಗೌಡನು ಹೇಳ
ನೀಟಾಗಿ ಬಂದ ನಿಂತಾನ
ನೀಟಾಗಿ ಬಂದ ನಿಂತಾನ ಮೇಟ್ಯಪ್ಪಗೌಡ
ಬಸವಣ್ಣ ಭಾರಾ ತಾಳ್ಯಾನ ।

ಕೆಂಪನ್ನಗೌಡ ಕಣದಾಗ ಬಲಗಾಲಿಟ್ಟ
ಕಡೆಸುತ್ತ ಕಣದಾಗ ಬರತಾನ
ಕಡೆಸುತ್ತ ಕಣದಾಗ ಬರತಾನ್ನಮಾ ಬಸವಣ್ಣ
ಕಾಲ ಗಗ್ಗರ ನುಡದಾವ ।

ಕಣ ಹೋಗುವಾಗ ಕುಣಿದಾ ನಂಬಸವಣ್ಣ
ಗಿಳಿರಾಮನಾಗಿ ನಡೆದಲ್ಲೋ
ಗಿಳಿರಾಮನಾಗಿ ನಡೆದಲ್ಲೋ ಬಸವಣ್ಣ
ಹಂತಿಯ ತುಳದು ದಣಿದೆಲ್ಲೊ ।

ಹಂತಿ ತಿರುಗಿದ ಎತ್ತ ಹರಿತೀತಿ ಬಂದಾವ
ಸಂತೋಷಿರ ಬೇಕ ಮನದಾಗ
ಸಂತೋಷಿರಬೇಕ ಮನದಾಗ ಕಣದಾಗ
ಸೃಂಕ ಮುಟ್ಟಿಸ್ಯಾರು ಬಸವಣ್ಣ ।

**ಹಾಡಿದವರು: ಜೀವನಸಾಬ ವಾಲಿಕಾರ, ಬಿನ್ನಾಳ**

**ಬಸವಣ್ಣನ ಭಾರ**

ದೈಹಿಕ ಮತ್ತು ಮಾನಸಿಕ ಆರೋಗ್ಯ ದೃಷ್ಟಿಯಿಂದ ರೈತನ ದಿನಚರಿ ಹೇಗಿರಬೇಕೆಂಬುದನ್ನು ಅವನೇ ವರ್ಣಿಸುತ್ತ ಹೀಗೆ ಹೇಳುತ್ತಾನೆ.

ನಸು ಕಿನೊಳಗೆ ಎದ್ದು ಕಸ ಹೆಂಡಿ ತಾಬಳಿದು
ಮುಸರಿ ಹತ್ತಿ ಕಾಳಿಡಬೇಕೊ ।
ಬೆಳಕ ಮಲ್ಲನ ಧ್ಯಾನ ಮಾಡಬೇಕೊ
ಗಳ್ಯಾ ಹೊಡಿಬೇಕೊ ॥

ಗ್ರಾಮೀಣ ಜನರು ತಮ್ಮ ಹೆಣ್ಣುಮಕ್ಕಳನ್ನು ಎಷ್ಟೇ ಶ್ರೀಮಂತ ವರನಿದ್ದರೂ ಕೊಡಲು ಒಪ್ಪುವುದಿಲ್ಲ. ದುಡಿದುಣ್ಣುವ ಒಕ್ಕಲಿಗ ಮತ್ತು ಒಕ್ಕಲುತನ ಮನೆಯನ್ನು ಆರಿಸುತ್ತಾರೆ. ಅಲ್ಲಲ್ಲಿ ಸಂದರ್ಭಕ್ಕನುಗುಣವಾಗಿ,

ಕಾಸಿದ ಕಬ್ಬಿಣ ಚಂದ ಸೋಸಿದ ಬಂಗಾರ ಚಂದ
ರಾಸ್ಯಾಗ ಚಂದ ಬಿಳಿಜ್ವಾಲ
ಇದ್ದೂರ ಗುರುಲೇಸು ಮುದ್ದಿ ಬಂಗಾರ ಲೇಸು
ಉದ್ಯೋಗ ಮಾಡಾ ಮಗ ಲೇಸು ।

ಕಾಲು ಜಾರಿದರ ಕೈಲಾಸೊ
ಹೆಣ್ಣಿನ ಮಾನ ಜಾರಿದರ ವನವಾಸೊ
ಹಾಡಿದ್ದರ ಹಾಡಬೇಕು ಜೋಡಿದ್ದರ ನಗಬೇಕು
ತುರುಬಿದ್ರ ಸೆರಗ ತಗಿಬೇಕೋ ।

ಬಿಳಿ ಬತ್ತ ತರಬೇಕು ಬೆಳಿಯಾ ಹೊಲ ಬೇಕು
ಮೆಳೆಗಣ್ಣಿನ ಸೊಸಿ ಬೇಕು
ಹಂಡೆತ್ತ ತರಬ್ಯಾಡ ದುಂಡುಳ್ಳ ಸೊಸಿ ಬ್ಯಾಡ
ತಿರಿದುಂಡು ಮನಗಾ ಮಗ ಬ್ಯಾಡ ।

ಕರಿಯೆತ್ತ ತರಬ್ಯಾಡ ಕರಕಿಯ ಹೊಲಬ್ಯಾಡ
ಕಾಡಗಿ ಗಣ್ಣಿನ ಸೊಸಿ ಬ್ಯಾಡ
ನಗುವ ಹೆಂಗಸ ಬ್ಯಾಡ ಅಳುವ ಗಂಡಸ ಬ್ಯಾಡ
ಅಳದಕ್ಕಿ ಹೇಳೋ ಬೀಗ ಬ್ಯಾಡ ।

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

**ರೈತನ ಸಂಪತ್ತು**

ಬಸವಣ್ಣಿ ಬರ್ವಾಗ ಅವರವ್ವ ಹೇಳ್ಯಾಳ
ಬಸವಾಗ ಹೂಡಿ ಹೊಡಿಬ್ಯಾಡೋ ಸ್ವಾಮಾರ
ಹಸುಮಗ ಆಗಿ ತಿರುಗಲೋ ॥

ಚಿಂತಿ ಮಾಡಲಿಬ್ಯಾಡ ಹುಚ್ಚ ನನ್ನ ಬಸವಣ್ಣ
ಚಿಂತ್ಯಾಗ ಕಾಯ ಇಳಿದಾದೊ । ಪಾಂಡೋರು
ಅಂತವರಿಗುಂಟೊ ವನವಾಸೊ ॥

ಕಸವ ಬಳಿದ ಕೈ ಕಸ್ತೂರಿ ನಾತವ ।
ಬಸವ ನಿನ್ನ ಸೆಗಣಿ ಬಳದಾರ। ಕೈಗಳು
ಯಲಕಿನಾತ ನಾರ್‍ಯಾವೊ ॥

ಜೋಳದ ಹಂತೀ ಕಟ್ಟಿ ಆಳಿಗಿ ತಿಂಗಳಾತೊ ।
ಆನಿ ತುಳಿದರ ಸಂವದಿಲ್ಲೊ । ನಮ್ಮ ಬಸವ
ಪಾದ ಇಟ್ಟದಕ ನುರತಾವೊ ॥

**ಹಾಡಿದವರು: ನಾಗಪ್ಪ, ಜಂಗಮರ ಕಲ್ಗುಡಿ**

## ಕೃತಜ್ಞತಾಭಾವ

ಕಣದಾಗ ಕಂಕಿರಲಿ ಒಲಿಯಾಗ ಬೆಂಕಿರಲಿ
ಬಿಂಕಿರಲಿ ನಿನ್ನ ಮನದಾಗ ।ಬಸವಣ್ಣ
ಸುಂಕಿರಲಿ ನಿನ್ನ ಮೈಮ್ಯಾಗೋ ॥

ಹುಟ್ಟಿದಲ್ಲಿ ದುಡಿಬೇಕು ಕೊಟ್ಟಲಿ ನಡಿಯಬೇಕು
ಪಡದ ಬಂದಲ್ಲಿ ಉಣಬೇಕೊ । ಎಲೋ ಬಸವ
ರೈತ ಹಾಕಿದ ಮೇಂವ ತಿನಬೇಕೊ ॥

ನಿನ್ನಲ್ಲಿ ಹುಟ್ಟೀನಿ ನಿನ್ನಲ್ಲಿ ಬೆಳೆದೀನಿ
ಕಟುಗಗ ಒಯ್ದು ಕೊಡಬ್ಯಾಡೊ । ಎಲ್ಲೊ ರೈತ
ಪಾಪ ಪುಣ್ಯವು ನಿನಕಡೋ ॥

ಸತ್ತಾನ ಬಸವಣ್ಣ ಹೊತ್ತಾರ ಹೊಲೆಯರು
ಮತ್ತೆನನ ಒಂದು ಸುಲದಾರ । ಹೊಲೆಯರು
ತುತ್ತಮಾಡಿ ಅವನ ಉಂಡಾರ ॥

ಇದ್ದರೂ ದುಡಿದೆಲ್ಲೊ ಸತ್ತರೂ ದುಡಿದೆಲ್ಲೊ
ಡೋರರ ಹೊಟ್ಯಾಗ ನಡಿದೆಲ್ಲೊ । ಬಸವಣ್ಣ
ನೇಗಿಲ ಮಿಣಿಯಾಗಿ ನಡೆದೆಲ್ಲೊ ॥

ಎರಿಯ ಹೊಲ್ದಾನಬಳ್ಳಿ ಎಳೆಯ ಸೌತಿಕಾಯಿ
ಹರಿಯಂದರ ಹ್ಯಾಂಗ ಹರಿಯಲಿ । ಬಸವಣ್ಣ
ಮರಿಯಂದರ ಹ್ಯಾಂಗ ಮರಿಯಲೊ ॥

**ಹಾಡಿದವರು: ದಾವನಸಾಬ ಅತ್ತರ್, ಅಬಲಕಟ್ಟಿ**

### ಬಿತ್ತುವ ಸಂಭ್ರಮ

ಹುಗ್ಗಿಯ ಉಂಡಾನ ಮಗ್ಗೆಂಗಿ ತೊಟ್ಟಾನ ।
ಬಗ್ಗಿ ಕೂರಗಿ ಬಿಗದಾನ । ಒಕ್ಕಲಿಗನ
ಬುದ್ಧಿಗಿ ಭೂಮ್ತಾಯಿ ಒಲಿದಾಳೊ ॥

ಉತ್ರಿನಕ್ಷತ್ರ ನೋಡಿ ಬಿತ್ಯಾರೊ ಕೂರಿಗಿ ।
ಮುತ್ತಿನ ಛಲ ಬಸವಗ ।ಹಾಕ್ಯಾರೊ
ಎತ್ತಿನ ಕೊಳ್ಳ ಕಟ್ಯಾರೊ ॥

**ಹಾಡಿದವರು: ಹನುಮಂತಪ್ಪ ಶೆಟ್ಟೆಪ್ಪ, ಕುಕನೂರು**

### ಪೌರಾಣಿಕ ಹಾಡುಗಳು

ಡೊಂಕಬಾಲ ಹನುಮ ಲಂಕೆಕ ಜಿಗಿದಾನೋ
ಟೊಂಕದ ಮ್ಯಾಗ ಎಡಗೈಯೊ ।
ಟೊಂಕದ ಮ್ಯಾಗ ಎಡಗೈಯ ಇಟಕೊಂಡೋ
ಲಂಕಾಕ ಬೆಂಕಿ ಹಚ್ಚ್ಯಾನೋ ॥

ಜನಕರಾಜನ ಮಗಳ ವನಕ ತೊಟ್ಟಿಲ ಕಟ್ಟೋ
ಲವಕುಶನ್ಹರಡದು ಮಲಗ್ಯಾಳೊ ।
ಲವಕುಶನ್ಹರಡದು ಮಲಗ್ಯಾಳೋ ಜಾನಕೀ
ವನದಾಗ ಕಾಲ ಕಳದಾಳೋ ॥

ದ್ವಾರಕ ಪಟ್ಟಣದಲ್ಲಿ ಧೀರ ಕೃಷ್ಣನ ಬಳಗೋ
ನಾರದ ಕೊಟ್ಟ ಕುಶಲವೋ ।
ನಾರದ ಕೊಟ್ಟ ಕುಶಲ ಪಾರಿಜಾತ ಹೂವೋ
ನಾರಿ ರುಕ್ಮಿಣಿ ಮುಡಿದಾಳೋ ॥

ಪಗಡ್ಯಾಡಿ ಪಾಂಡವರು ವನವಾಸ ಸೇರ್ಯಾರೋ
ಅರಣ್ಯದಾಗ ಹೊಸದಾರೋ ।

ಅರಣ್ಯದಾಗ ಹೊಸದರ ದ್ರೌಪದಿಯು
ನೀರಂಬಲಿ ಮಾಡಿ ಕುಡಿಶ್ಯಾಳೋ ||

ಚಕ್ರವ್ಯೂಹದೊಳಗ ಹೊಕ್ಕಾನ ಅಭಿಮಾನ್ಯೋ
ಸಿಕ್ಕಾನ ಕೌರವರ ಕೈಯೊಳಗೋ |
ಸಿಕ್ಕಾನ ಕೌರವರ ಕೈಯೊಳಗ ಅಭಿಮನ್ಯೋ
ಜಯದ್ರಥನ ಕೈಯಾಗ ಅವನ ಮರಣಾವೋ ||

**ಹಾಡಿದವರು: ಹನುಮಂತಪ್ಪ, ಕುಕನೂರು**

## ಬಂಟ ಬಸವಣ್ಣನ ಕೋಲಪದ

ಕೋಲು ರನ್ನದ ಕೋಲನ್ನಾ
ಏ ಕೋಲು ಕೋಲು ಮುತ್ತಿನ ಕೋಲ
ಕೈಲಾಸವೆಂಬುದು ಅಂತರದಾಕೋಟೆ |
ಮೇಲೆ ದೇವರು ನೆಲಿಸುವ ಲೋಕ ಕೋಲ
ಮೇಲೆ ದೇವರು ನೆಲಿಸುವ ಲೋಕ ಬಸವಣ್ಣ ||

ನರಲೋಕದ ಪುಣ್ಯಕ ಬಂದಾನ ಕೋಲ
ಜೀವರಾಶಿ ಹುಟ್ಟಿ ಜೀವ ತಿಂದಾವ
ಬೇಟದ ಬೆನ್ನ ಬಾಗಿತ ಕೋಲ |
ಜೀವದ ಬೆನ್ನ ಬಾಗಿತ ಬಸವಣ್ಣ
ಜೀವರಾಶಿಯ ಜೋಪಾನಕ ಬಂದಾನ ಕೋಲ ||
ಹಣ್ಣು ಹಣ್ಣಂತ ಕಣ್ಣ ಬಿಡುವಾಗ
ಹಣ್ಣಿನ ಬೆಳೆಗೆ ಬಂದಾನ ಕೋಲ |
ಹಣ್ಣಿನ ಬೆಳೆಗೆ ಬಂದಾಗ ಬಸವಣ್ಣ
ಮಣ್ಣಿನ ಮೇಲೆ ದುಡಿಲಾಕ ಕೋಲ ||

ಶಿವಕುಂತ ಚಿಂತಿಸ್ಯಾನ ಸಗತಿ ಕೊಟ್ಟ
ಶಿವನವತಾರ ಭೂಮಿಗೆ ಕೋಲು |
ಶಿವನವತಾರ ಭೂಮಿಗೆ ಬಸವಣ್ಣ
ಶಿವಸರ್ಜನಾಗಿ ದುಡಿದಾನ ಕೋಲ ||

ಬಸವಣ್ಣಿನ ಕಾಲಕ ಹಸನುಳ್ಳ ಗಗ್ಗರಿ
ದಸರಿ ಪದಮ್ಯಾಲ ಮಲಗುವನ ಕೋಲ |

ದಸರಿ ಪದ ಮ್ಯಾಲ ಮಲಗುವ ಬಸವಣ್ಣ
ಧರಣಿ ಮ್ಯಾಲ ಹಂತಿ ಮಾಡ್ಯಾನ ಕೋಲ

**ಹಾಡಿದವರು: ಬಸವರಾಜ, ನವಲಿ**

## ಡೊಳ್ಳಿನ ಹಾಡು

ದೇವರ ಮುಂದ ಕುಂತಿಯೊ ತಮ್ಮಾ
ದೇವರ ಗ್ಯಾನೊಂದಿರಬೇಕೊ ।
ದೇವರ ಗ್ಯಾನೊಂದಿದ್ದರೆ ಸಾಕೊ
ದೇವರು ನಿನ್ನಲಿ ಇದ್ದಾಂಗೊ ॥

ದಿಮ್ಮಿನ ಮುಂದ ಕುಂತಿಯೊ ತಮ್ಮಾ
ದಿಮ್ಮಿನ ಗ್ಯಾನೊಂದಿರಬೇಕೊ ।
ದಿಮ್ಮಿನ ಗ್ಯಾನೊಂದಿರ ಸಾಕೊ
ದಿಮ್ಮಿನ ನಿನ್ನಲ್ಲಿ ಇದ್ದಾಂಗೊ ॥

ತಾಳದ ಮುಂದ ಕುಂಯೊ ತಮ್ಮಾ
ತಾಳದ ಗ್ಯಾನೊಂದಿರಬೇಕೊ ।
ತಾಳದ ಗ್ಯಾನೊಂದಿರ ಸಾಕೊ
ತಾಳವು ನಿನ್ನಲಿ ಇದ್ಯಾಂಗೊ ॥

ಪದವ ಹೇಳುವ ಪದದ ತಮ್ಮಾ
ಪದದ ಗ್ಯಾನೊಂದಿರಬೇಕು ।
ಪದದ ಗ್ಯಾನೊಂದಿದ್ದರೆ ಸಾಕು
ಪದವು ನಿನ್ನಲ್ಲಿ ಇದ್ದಾಂಗೊ ॥

ಬಡತನ ಭಾಗ್ಯದ ಹೇಳ್ಯಾನು ಸ್ವಾಮಿ
ಬಂಜಿಗೆ ಮಕ್ಕಳ ಕೊಟ್ಯಾನೊ ।
ಮ್ಯಾಗಲ ಮಳಿ ಬಂದ ಹೇಳ್ಯಾನ ಸ್ವಾಮಿ
ಭೂಮಿ ಬೆಳಿ ಬಂದು ಹೇಳ್ಯಾನೊ ॥

ಶಿವ ಶಿವ ಶಿವ ಶಿವನಿಲ್ಲೋ
ಶೀಲನ ಬಿಟ್ಟ ನಾವು ದೂರಿಲ್ಲೋ ।
ಶೀಲವಂತರಿಗೆ ಅವಸಿಕ್ಕಿಲೋ
ಹೊಲೆ ಮಾದರ ಮನಿಯವ ಬಿಟ್ಟಲ್ಲೊ ॥

ಕುರುಬರು ಕಂಬಳಿ ಬೀಸಿದರೆಂದರೆ
ಮದಲಿಗೆ ಬರುತ್ತಿದ್ದ ಮಳೆರಾಯಾ ।
ಡೊಳ್ಳಿನ ಮ್ಯಾಲೊಂದ ಕೈಯಿರಲ್ಲೋ
ನಾದದ ಕಡಗೇ ಖ್ಯಾಲಿರಲ್ಲೋ ॥

ನಮ್ಮಯ್ಯ ದೇವರು ಬಂದಾನೆ ಬನ್ನೀರೇ
ನಮ್ಮಯ್ಯ ದೇವಾರು ಬಂದಾನೆ ಬನ್ನೀರೇ ।
ಅಂಗೈ ಜೋಳಿಗೆ ಮಂಗೈ ಬೆತ್ತ ತುದಿ
ಬೆರಳೀ ಬತ್ತಿ ಹಚ್ಚ್ಯಾನೆ ॥

ತುದಿ ಬೆರಳೀ ಬತ್ತಿ ಹಚ್ಚ್ಯಾನೆ ಅವ
ಕಣ್ಣಾಗ್ಲ ಕಣವಿ ಹಿಡಿದಾನೆ ।
ಕುರಿಯ ಕಾಯುವ ಕುರುಬರಣ್ಣ ನಾವು
ಕುರಿಯ ಕಾಯಕೊಂತ ಬಂದೇವೋ
ಕುರಿಯ ಮ್ಯಾಲೊಂದು ಕಣ್ಣಿರಲೊ ನಮ್ಮ
ಡೊಳ್ಳಿನ ಮ್ಯಾಲೊಂದು ಕೈಯಿರಲೋ

**ಹಾಡಿದವರು: ಭೀಮಪ್ಪ ಶೆಟ್ಟಪ್ಪ, ಕುಕನೂರು**

**ಅಪ್ಪನ ನೆನೆದೇವು**

ನೆನೆದಾವೊ ಅಪ್ಪನ ನೆನೆದೇವು
ನ್ಯಾಮಕಾರದೊಡೆಯಾನ । ಬಾಣನ
ಶ್ಯಾಮಸೂರಿನಂತವನ ದೇವರ ॥

ರಾಮಚಂದ್ರ ದೇವ ನಂತವನ ದೇವರ
ಅರೆದ ಅರಿಷಣದಂತವನ । ದೇವರ
ಅವರೆ ಹೂವಿನಂತವನ ದೇವರ ॥

ಕರಿದ ಕೆಂಡದಂತವ ಶಿವ
ಒಬ್ಬ ಕಣ್ಣಿಗೆ ಕಾಣಸಿದ್ದಪ್ಪ । ದೇವರ
ಗೊಬ್ಬರ ಬೆಂಕಿ ಅಂತವನೆ ದೇವರ ॥

ಸ್ವಾಮಿನಮ್ಮಯ್ಯನ ದೇವರ ನೆನೆದೇವೊ

**ಹಾಡಿದವರು: ಗುಡ್ಡರಾಮಣ್ಣ, ನವಲಿ**

### ಭಾಗ್ಯವ ಬೇಡಲು ನಾ ಬಂದೆ

ಡೊಳ್ಳಿನ ಮ್ಯಾಲ ಕೈ ಇಡು ತಮ್ಮ
ದಿಳ್ಳಿಯ ರಾಯ ನಿನ್ನ ಕರೆದೇನ ।
ದಿಳ್ಳಿಯರಾಯ ನಿನ್ನ ಕರೆಯುವ ಹೊತ್ತಲ್ಲಿ
ಅಡ್ಡ ಮಾತಾಡ್ಯಾನ
ಅಡ್ಡ ಬಂದ ಮಾತಾಡ್ಯಾನ ನನ್ನ ॥

ಗುಜ್ಜಿ ಮಾವಯ್ಯನ ತಮ್ಮಾ
ಗುಜ್ಜಿ ಮಾವಯ್ಯನ ತಮ್ಮ ಅಂದರೆ ।
ಗೂಳಿ ಕ್ವಾಣಕ್ಕೆ ನುಡಿದಾನು
ಗೂಳಿ ಗೂಳಿ ಅಂದವನ್ಯಾರು
ಗೂಳಿಯ ಬಿಟ್ಟವನ್ಯಾರ‍್ಯ
ಕಕ್ಕಲ ಕಟ್ಟ ಕರಿಯ ಗೂಳಿ ಬಿಟ್ಟಾನು ॥

ಸೆಟ್ಟಿ ಹಳ್ಳಿಯ ಪರಮೇಶ್ವರ
ಪರಮೇಶ್ವರನ ಮನಿ ಪಟ್ಟದ ಗೂಳಿ
ಸಿದನಂಬಿ ಬೀರ ಸಿದ್ದೂರ ।
ಸಿದನಂಬಿ ಬೀರ ಸಿದ್ದೂರ ದೇವರಂದನೆ
ಹಾಲುಮಡ್ಡಿಯ ಲಿಂಗಾನ
ಆಲದ ಮರನೊ ಬ್ಯಾಲದ ಮರನೊ ॥

ಮುಂದೊಂದು ಟೋಪಿನೊ ಮ್ಯಾಲೆ
ನಮ್ಮಾಡೆಯನ ಅರಮನೆ ಇದಾವೂ
ಅರಮನೆ ಇದಾವೂ ಗುರು ಮನಿ ಇದಾವೂ ।
ಸಾಸಿವೆ ಬಣ್ಮದ ಶಿವನ್ಹೇಳೂ
ಸಾಸಿವೆ ಬಣ್ಣದ ಶಿವನ್ಹೇಳೂ ಅಂದಾರೆ
ಅಂದಾರ ಭಾಷೆ ಬಲ್ಲದ ॥

ಭಾಷೆ ಬಲ್ಲದಿರೊಳ್ಳೆಯವರೆಂದರೆ
ಬಹಳ ಹೊತ್ತಿನಲ್ಲಿ ನಾ ಬಂದೆ
ಬಹಳ ಹೊತ್ತಿನಲ್ಲಿ ನಾ ಬಂದೆ ಗುರುವೆ ।
ಭಾಗ್ಯವ ಬೇಡಲು ನಾ ಬಂದೆ
ಬೇಡಿದ ಭಾಗ್ಯವೂ ಡಾಡಿ ಕೊಟ್ಟರೆ
ಹೊನ್ನ ಬಣ್ಣ ಜಡೆ ಜಡೆ ॥

ನನ್ನ ಹೂಳವ ಸಿರಿಸಂಗಿ ರಾಯಣ
ಹೂಳವ ಸಿರಿಸಂಗಿ ರಾಯಣ ಅಂದಾರೆ
ಹೂಳವ ಕಂಡಾರೆ ಹೊಳೆಯಾಗೆ ।
ಹೂಳವ ಕಂಡಾರೆ ಹೊಳೆಯಾಗೆ
ಸುಳಿವಾ ಕಂಡಾನೆ ನಿನ್ನ ಗುಡಿಯಾಗೆ
ಅಪ್ಪನಾ ನೆಟ್ಟನೆ ಮಿಂಚು ಮುಗಿಲಾಗೆ ॥

ಇಲ್ಲಿಗೊಂದು ಹಾಡಿದ ಸಂದ ಹಾಡಿದವರ ಪಾದ ಮುಂದ್ಹೇಳ
ಸ್ವಾಮಿ ನಮ್ಮಯ್ಯನ ದೇವರ ನೆನೆದೇವೂ
ಗುರು ನಮ್ಮಯ್ಯನ ನೆನೆದೇವೂ ।
ಬಸವಣ್ಣನಿಗಿಂತ ಬಲ್ಲಿದನಿಲ್ಲ
ಶಿವನಿಗಿಂತ ದೇವರಿಲ್ಲ ॥

ಬಸವಣ್ಣ ನಿನ್ನ ಹಲ್ಲಿನ ಮ್ಯಾಲೆ ಹುಲ್ಲಣ್ಣ ಮಲ್ಲಣ್ಣ ಇದಾರೆ
ಬಸವಣ್ಣ ನಿನ್ನ ನಾಲಿಗೆ ಮ್ಯಾಲೆ ನಾರಾಯಣಸ್ವಾಮಿ ಇದಾರೆ
ಬಸವಣ್ಣ ನಿನ್ನ ಮ್ಯಾಲೆ ಹರಿಶ್ಚಂದ್ರರಾಜ ಇದಾರೆ ।
ಬಸವಣ್ಣ ನಿನ್ನ ಕೊಂಬಿನೊಳಗೆ ಶಂಬ ಶಂಕರ ಶಿವರಾಯ ಇದಾರೆ
ಬಸವಣ್ಣ ನಿನ್ನ ಬೆನ್ನಿನ ಮ್ಯಾಲೆ ಶಿವಪಾರ್ವತಿ ಶಿವರಾಯ ಇದಾರೆ
ಬಸವಣ್ಣ ನಿನ್ನ ಬಾಲದ ಮ್ಯಾಲೆಲೆಂಕ ಸುಟ್ಟ ಹನುಮನ ಇದಾನೆ
ದೇವರು ಬಂದಾರು ಬನ್ನಿರಿ ನಮ್ಮಯ್ಯ ದೇವರು ಬಂದಾರು ಬನ್ನಿರಿ

**ಹಾಡಿದವರು: ಭೀಮಣ್ಣ ಡೊಳ್ಳಿನ ತಂಡ, ನವಲಿ**

### ಬೀರಪ್ಪನ ಕುರಿತು ಹಾಡು

ಒಂದಿ ಪೂಜೆಯೊಳಗ ಒಂದೇ ತಂದಿ ನೆನೆದೇನ ಬೀರಪ್ಪಗ
ಎರಡು ಮಿಂಚಿನಂತೆ ತಳಾಗೆ ಹೊಳೆಯುವ ಬೀರಪ್ಪಗ ।
ಮೂರು ಪೂಜೆಯೊಳಗೆ ಮೂಡಿ ನಿಂತಿರುವ ಮುನ್ನೂರ ಚಾವರ ಬೀರಪ್ಪಗ ॥

ನಾಕು ಪೂಜೆಯೊಳಗೆ ನಾಟ ನಿಂತನೆ ನಾನೂರು ವಾಲಗ ಬೀರಪ್ಪಗ
ಐದು ಪೂಜೆಯೊಳಗ ಐಸುರ್ಯವಂತ ಐನೂರ ಸತ್ತಿಗೆ ಬೀರಪ್ಪಗ ।
ಆರ ಪೂಜೆಯೊಳಗ ಭೇರಗರೆಯುವಂತ ಹರುಷಲಿ ಹಾದುವೆ ಬೀರಪ್ಪಗ
ಏಳು ಪೂಜೆಯೊಳಗ ಎಳೆಯ ಮಿಂಚಿನಂತೆ ತಳಾಡಿ ಹೊಳೆಯುವ ಬೀರಪ್ಪಗ ॥

ಎಂಟು ಪೂಜೆಯೊಳಗೆ ಒಂಟಿ ಮುತ್ತಿನಿಟ್ಟ ಸರದ ಕಠಿಸರದ ಬೀರಪ್ಪಗ
ಒಂಭತ್ತು ಪೂಜೆಯೊಳಗ ತುಂಬಿಕೊಂಡಿರುವ ನಂಬಿಯೊಳಗ ಬೀರಪ್ಪಗ ।

ಹತ್ತು ಪೂಜೆಯೊಳಗ ಹೊತ್ತಿಗೆ ಹಿಡಿದವ ಮುತ್ತಿನರಾಶಿ ಮುಂದೆ ಬೀರಪ್ಪಗ
ಹನ್ನೊಂದು ಪೂಜೆಯೊಳಗ ಚೆನ್ನಾಗಿ ಹೊಳೆಯುವ ಚೆನ್ನಿಗ ಬೀರಪ್ಪಗ ||

**ಹಾಡಿದವರು: ಧರ್ಮಣ್ಣ, ಹೊಸಳ್ಳಿ**

## ಚೆಲುವ ಬಾ ನನ್ನ ಭರಮದೇವ

ಚಂಚೇಲಿ ಬಂದಾನೂ ನನ್ನ ಚಂದ್ರಮನಿಗಿಂತ ಚೆಲುವಾನ
ಚಂದ್ರಮನಿಕ್ಕಿಂತ ಚೆಲುವ ಬಾ ನನ್ನ ಭರಮದೇವ |
ಚಂಚೇ ವಾಲಗ ತಪ್ಪಿದರೆ ನಿನ್ನ ಆಳಿಗೆ ಮುನಿದೇನ ಅಂದಾನ
ಆಳಿಗೆ ಮುನಿದರೆ ಮುನಿಯಲಿ ಗುರುವೆ ಜೀವಕೆ ಮುನಿಬ್ಯಾಡ ||

ಕಾಯಲಿ ಕರ್ತು ಜೀವದೊಡೆಯ ನಿಲ್ಲಲಾರದು ಮತ್ತೊಬ್ಬ
ನಿಲ್ಲಲಾರದು ಮತ್ತೊಬ್ಬ ಅಂದಾರೆ ಧಾತು ಹೊತ್ತು ಗೇರಿಸಿಂದ |
ಧಾತು ಹೊತ್ತು ಗೇರಿಸಿದ್ದನೆಂದರೆ ರಾತ್ರಿ ಹೊತ್ತು ಶರಣೆಂದ
ಶರಣವು ಮಾಡಿ ಶಬ್ದವ ತೆಗೆದರೆ ಮಲ್ಲಿಗೆ ನೆನೆ ಬಂದು ಇಳಿದಾವೊ ||

ಮಲ್ಲಿಗೆ ಏಳು ಮಂಟಪದೊಳಗೆ ಒಬ್ಬ ಗೊಲ್ಲಾಳ ಬಂದಿಳಿದಾನೂ
ಗೊಲ್ಲ ಗೊಲ್ಲಳ್ಳಿ ನೀ ಬಂದು ಸಲ್ಲುಗುದುರೆಯ ರಾವುತನ |
ಸಲ್ಲುಗುದುರೆಯ ಕೈಯಲ್ಲಿ ಹಿಡಿದಂತ ಸಜ್ಜುಮಾಡಿ ತಿರುಗುತಾ
ಬಿಳಿಕುದುರೆಯ ಬಿರುದಿನ ಸ್ಯಲ್ಲೆಯಾ। ನಾಡನಾಡು ಕೊಂಡ್ಯಾಡಿಯೊ ||

ಕಂಡೇವಪ್ಪ ನಿನ್ನ ಕೊಳಗದ ಹೊನ್ನ। ಮಂಡಾಲದಾಗೆ ಇರು ಮಗೇ ಮಾವ
ಮಂಡಲದಾಗಿರು ಮಾಗೆ ಮಾವ ಅಂದಾರೆ। ಕಂಡವರ್‍ಯಾರಲೆ ಜಗದೊಳಗೆ |
ಕಂಡೇನು ಕಂಡೇನು ಅಂದವರೆಲ್ಲಾ ಕಡೇ ಮಜಲಾಗಿ
ಬಲ್ಲೇನು ಬಲ್ಲೇನು ಅಂದವರೆಲ್ಲಾ ಬಯಲಿಯೊಳಗಾಗಿ ||

ನಾ ಹೆಚ್ಚು ನೀ ಹೆಚ್ಚು ಅಂದವರೆಲ್ಲಾ ಕಲ್ಲಿಂಚಾಗಿ ಹೋಗ್ಯಾರ
ಮೇಲು ಮೇಲು ಅಂದಾರೆ ಮೇಲಾವುದು ಹೇಳಯ್ಯ
ಹಂಗು ಮೇಲು ಹರಣವು ಮೇಲು। ಬಣ್ಣಕೆ ಬಳೆಯುವುದು ತಾ ಮೇಲು
ಗಂಗೆ ಮೇಲು ಗೌರಿ ಮೇಲು। ಗೌರಿಗೆ ಸೀತಾ ತಾ ಮೇಲು

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

## ಮಕ್ಕಳ ಫಲವಾ ಕೊಡು ನನಗೆ

ಹಿಂಡು ಆಕಳ ಮುಂದೆ ಹಸಿರು ಗಣಿಕೆ ಹಾಲು ಗಣಿಕೆ
ನನ್ನ ಮುಂದೆ ಎರಡು ಬಡದಂಟ |

ಹೊಟ್ಟೆಗಳಾಕೂರ ಹುಳಿನೀರಾ ಕುಡಿಸೂರ
ಹುಟ್ಟು ಬಂಜೆಯಂತ ಹೊಡೆಯೋರ ॥

ಕೊಂಬ ಚಿಮ್ಮುಯಾಡುತಾ
ಕೊಳ್ಳಾಗ ನಲಿದಾಡುತಾ ।
ಭೂಮಿ ತಾಯಿಗೆ ಬಾಲ ಎಳವುತಾ
ಹ್ವಾದಳೂ ಶಿವನ ಸದರೀಗೆ ॥

ಎಂದಿಲ್ಲದ ಗೋಪವ್ವ ಇಂದೇನ ಬಗೆ ಬಂದೆ
ಕುಂದರಗೊಳ ಮನೆ ಚೌಕೆ ।
ಕುಂದರ ಬಂದಿಲ್ಲ ನಿಂದರ ಬಂದಿಲ್ಲ
ಮಕ್ಕಳ ಫಲವಾ ಕೊಡ ನನಗೆ ॥

ಕೊಟ್ಟಾರೆ ಕೊಟ್ಟೇನು ಕೊಡುವುದೇನ ಹರಿದಲ್ಲ
ಕೊಟ್ಟ ಮರುದಿನ ಗೋಪಿಯ ಮರಣಲ್ಲ ।
ನಾಳೆ ಬರುವ ಮರಣ ಇಂದೇ ಬರಲಿ ಶಿವನೇ
ಮಕ್ಕಳ ಫಲವಾ ಕೊಡು ನನಗೆ ॥

ಗದ್ದಿಗೆ ಮ್ಯಾಲಿನ ವಿಭೂತಿ ಹೆಬ್ಬಟ್ಟಲಿ ತಗೊಂಡು
ಇಟ್ಟ್ಯಾನು ಗೋಪವ್ವನ ಮೊಸಲಾಗ ।
ಕೊಂಬ ಚಿಮ್ಮಿಯಾಡುತ ಕೊಳ್ಳಾಗ ನಲಿದಾಡುತ
ಭೂಮಿ ತಾಯಿಗೆ ಬಾಲ ಎಳೆವುತಾ ॥

ಗೋಪವ್ವ ಬಂದಾಳು ತನ್ನರ ಮನಿಗೆ
ಒಂದಂಬು ತಿಂಗಳಿಗೆ ಒಂದೇನ ಬಯಸ್ಯಾಳ ।
ತುಂಬಿದ ಕೊಡದ ತಿಳಿನೀರಾ
ಎರಡಂಬು ತಿಂಗಳಿಗೆ ಎರಡೇನ ಬಯಸ್ಯಾಳ ॥

ಎರೆಯ ಹೊಲದ ಎಳೆಗರಿಕೆ
ಮೂರಂಬು ತಿಂಗಳಿಗೆ ಮೂರೇನ ಬಯಸ್ಯಾಳ ।
ಮೂಡಲ ದಿಕ್ಕು ಮಗೇ ಮಾವ
ನಾಕಂಬು ತಿಂಗಳಿಗೆ ನಾಕೇನ ಬಯಸ್ಯಾಳ ॥

ಕಾಕೀಯ ಬಣ್ಣ ಕೈ ತುಂಬಾ
ಐದಂಬು ತಿಂಗಳಿಗೆ ಐದೇನ ಬಯಸ್ಯಾಳ ।
ಆರಿದ ಬಾನ ಕೆನೆ ಮೊಸರ
ಏಳಂಬು ತಿಂಗಳಿಗೆ ಏಳೇನ ಬಯಸ್ಯಾಳ ॥

ಹೇಳಿ ಕಳುವ್ಯಾಳ ತನ್ನ ತೌರೂರಿಗೆ
ಎಂಟಂಬು ತಿಂಗಳಿಗೆ ಎಂಟೇನ ಬಯಸ್ಯಾಳ ।
ಕಂತಲಿ ಎತ್ತ ಕರಿಬಂದ
ಒಂಭತ್ತು ತಿಂಗಳಿಗೆ ತುಂಬ್ಯಾವು ದಿನಗಳು
ಚೆನ್ನಬಸವೇಶ್ವರನ ಹಡೆದಾಳು ॥

**ಹಾಡಿದವರು: ಧರ್ಮಣ್ಣ, ಹೊಸಳ್ಳಿ**

**ಕುರುಬರು ಕುರಿಕಾಯುವ ಸಂದರ್ಭದಲ್ಲಿ ಹಾಡುವ ಹಾಡು**

ಕುರುಬರು ನಾವು ಕುರುಬರು ನಾವು ।
ಕುರಿಗಳ ಮೇಯಿಸುವ ಕುರುಬರು
ಕುರಿಗಳ ಮೇಯಿಸುವ ಕುರುಬರು
ಮೆರೆ ಮೋಸಗಳರಿಯದ ಕುರುಬರು ॥

ಸುರಿಯುವ ಮಳೆಯಲಿ ನೆನೆಯುವ ಕುರುಬರು
ಕೊರೆಯುವ ಚಳಿಯಲಿ ಬಿರಿವವರು ॥
ಕೊರೆಯುವ ಚಳಿಯಲಿ ಬಿರಿವವರು
ಉರಿ ಬಿಸಿಲಲಿ ಕರಿಯುವ ಧೀರರು ॥

ಅಡವಿಯ ಹೊಡೆಹುಲ್ಲ ಮೇಯಿಸುವವರು
ಮಡುವಿನ ತಿಳಿನೀರ ಕುಡಿಸವರು ।
ಮಾಡುವಿನ ತಿಳಿನೀರು ಕುಡಿಸವರು
ಯಾರೊಡನೆ ಜಗಳ ಮಾಡದಂಥವರು ॥

ಕಾಡಿನ ಬಂಟರು ಮುಗಿಲಿನ ನೆಂಟರು
ಹುಲಿ ಚಿರತೆಗಳನ್ನಿರಿಯುವವರು ।
ಹುಲಿ ಚಿರತೆಗಳನ್ನಿರಿಯುವವರು
ತೋಳಗಳ ಬೆದರಿಸಿ ಅಟ್ಟುವರು ॥

ಸತ್ತ ಕುರಿಗಳನ್ನು ಹೊತ್ತು ಮಾರುವೆವು
ಮತ್ತೆ ಮಾಂಸ ಸೇವಿಸದವರು ।
ಮತ್ತೆ ಮಾಂಸ ಸೇವಿಸದವರು
ಚಿತ್ತ ಜಾರಿಯನು ನೆನೆವವರು ॥

**ಹಾಡಿದವರು: ರಾಮಣ್ಣ ಕುರುಬರು, ಕುಷ್ಟಗಿ**

### ಕುರುಬರ ಕುರಿತು ಡೊಳ್ಳಿನ ಹಾಡು

ಕುರುಬರಪ್ಪ ನಾವು ಕುರುಬರೋ
ಜಗದ ಸಾರವನರಿತ ಕುರುಬರೊ
ಜಗದ ಹಾಲುಮತದ ಕುರುಬರೋ ||

ಹೌದೆನಿಸಿಕೊಂಡ ಬುರುಬರೇನೋ
ಸತ್ಯವ ನುಡಿಯುವ ಕುರುಬರೇನೋ |
ಸತ್ಯವ ನುಡಿಯುವ ಕುರುಬರಯ್ಯಾ
ಪ್ರಾಮಾಣಿಕ ಮನುಜ ಕುರುಬರೋ ||

ಶಿವ ಪಾರ್ವತಿಯ ವಂಶವಯ್ಯಾ
ಮುಂದಿನ ಹೊಯಕಾ ಹೇಳುವರೋ |
ಮುಂದಿನ ಹೊಯಕಾ ಹೇಳುವರಯ್ಯಾ
ಕಂಬಳಿ ಬೀಸಿ ಮಳೆ ಕರೆದವರೋ ||

ಜಗತಿಗೆ ಅನ್ನಾ ನೀಡಿದವರಯ್ಯಾ
ಗುರುವಿನ ಗುರುತಾ ಮಾಡಿದವರೋ |
ಗುರುವಿನ ಗುರುತಾ ಮಾಡಿದವರಯ್ಯಾ
ಜಗತಿಗೆ ಲಿಂಗದ ನೀಡಿದವರೋ ||

**ಹಾಡಿದವರು: ಭೀಮಪ್ಪ ಶೆಟ್ಟೆಪ್ಪ, ಕುಕನೂರು**

### ಭಾಗ್ಯವ ಬೇಡಲು ನಾ ಬಂದೆ

ಡೊಳ್ಳಿನ ಮ್ಯಾಲೆ ಕೈ ಇಡುತಮ್ಮ
ದಿಲ್ಲಿಯ ರಾಯ ನಿನ್ನ ಕರೆದೇನ |
ದಿಲ್ಲಿಯ ರಾಯ ನಿನ್ನ ಕರೆಯುವ (ಹೊತ್ತಲ್ಲಿ)
ಅಡ್ಡ ಮಾತಾಡ್ಯಾನ ಅಡ್ಡ ಬಂದ ಮಾತಾಡ್ಯಾನ ನನ್ನ ||

ಗುಜ್ಜಿ ಮಾವಯ್ಯನ ತಮ್ಮಾ
ಗುಜ್ಜಿ ಮಾವಯ್ಯನ ತಮ್ಮಾ ಅಂದಾರೆ ಗೂಳಿ ಕ್ವಾಣಕೆ ನುಡಿದಾನು |
ಗೂಳಿ ಗೂಳಿ ಅಂದವನ್ಯಾರು ಗೂಳಿಯ ಬಿಟ್ಟವನ್ಯಾರಯ್ಯ
ಕಕ್ಕಲ ಕಟ್ಟ ಕರಿಯ ಗೂಳಿ ಬಿಟ್ಯಾನು ||

ಸೆಟ್ಟಿ ಹಳ್ಳಿಯ ಪರಮೇಶ್ವರ ಮುನಿ ಪಟಣದ ಗೂಳಿ
ಸಿದನಂಬಿ ಬೀರ ಸಿದ್ದೂರ |

ಸಿದನಂಬಿ ಬೀರ ಸಿದ್ದೂರ ದೇವರಂದರೆ
ಹಾಲು ಮಡ್ಡಿಯ ಲಿಂಗಾನ ॥

ಆಲದ ಮರನೊ ಬಾಲದ ಮರನೊ
ಮುಂದೊಂದು ಟೊಂಪಿನೊ ।
ಮುಂದೊಂದು ಟೋಪಿನ ಮ್ಯಾಲೆ ॥

ನಮ್ಮೊಡೆಯನ ಅರಮನೆ ಇದಾವೂ
ಅರಮನೆ ಇದಾವೂ ಗುರುಮನಿ ಇದಾವೂ ।
ಸಾಸಿವೆ ಬಣ್ಣದ ಶಿವನ್ಹೆಳೂ
ಸಾಸಿವೆ ಬಣ್ಣದ ಶಿವನ್ಹೆಳೂ ಅಂದಾರೆ ॥

ಭಾಷೆ ಬಲ್ಲವ
ಭಾಷೆ ಬಲ್ಲವರೊಳ್ಳೆಯವನೆಂದರೆ
ಬಹಳ ಹೊತ್ತಿನಲ್ಲಿ ನಾ ಬಂದೆ
ಬಹಳ ಹೊತ್ತಿನಲ್ಲಿ ನಾ ಬಂದೆ ಗುರುವೆ
ಭಾಗ್ಯವ ಬೇಡಲು ನಾ ಬಂದೆ ॥

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

**ರೇವಣಸಿದ್ಧನನ್ನು ಸ್ಮರಿಸುವ ಹಾಡು**

ಸ್ವಾಮಿ ನಮ್ಮಯ್ಯ ದೇವರ್ ಬಂದಾವ ಬನ್ನಿರೆ
ಸ್ವಾಮಿ ನಮ್ಮಯ್ಯ ಗುರುಗಳು ಬಂದಾರ ಬನ್ನಿರೆ
ದೈವ ಇದ್ದಲ್ಲಿ ದೇವರ ಇದಾನೆನ್ನುವರೋ ।
ದೈವ ಇದ್ದಲ್ಲಿ ದೇವರ ಇದಾನೆನ್ನುವರೋ
ಸತ್ಯವೋ ಕುರುಬನಕ್ಕಿಂತ ಮತ್ತೊಂದು ಹೆಚ್ಚಿನದು ಯಾವುದಿಲ್ಲ ಕುರಿತ ಕೇಳರಿ ॥

ಕುರುಬನ ಬೋಣಾಗಿ ಆಗಬೇಕು ಪಂಡಿತ ಜನರೆಲ್ಲ ಬೇಕಂತ ಕೂಡೇರಿ
ಕುರುಬನ ಗುರುತ ಸತ್ಯ ಕುರಿಯನೋ ಕುರುಬಗೊಂಡನವಿರಚರ ಕೇಳರಿ ನೀ ಇನ್ನಾ
ಎಂಬತ್ತ ಕೋಟಿ ಜೀವರಾಶಿಯಲಿ ಕುರುಬವ ದೊಡ್ಡವನೋ ।
ಕುರಿ ಕಾಯುತ ಹೋದೆವಣ್ಣ ಕುಂಕಮದ್ಹಳ್ಳ ತುಳದೇವೋ
ಆಡಕಾಯುತ ಹೋದೇವಣ್ಣ ಅಡಕಿಯ ಬಣ್ಣಗಳ ಕಂಡೇವೋ ॥

ಮೊದಲಿಗೆ ಬೀರಪ್ಪನ ಸ್ಮರಣೆ ಮಾಡಿ
ಸರ್ವರಿಗೆ ಮಾಡುವೆ ಕರಣವನೋ

ಮೊದಲಿಗೆ ರೇವಣಸಿದ್ಧಾಗ ಸ್ಮರಣೆಯ ಮಾಡಿ ।
ಸರ್ವರಿಗೆ ಮಾಡುವೆ ನಮ ಶರಣವನೋ
ಕುರುಬರು ನೀತಿವಂತರು ॥

ಸಂಸಾರ ಎಂಬ ಸಾರದೊಳಗೆ
ಹಡಗ ದಾಟುದು ಬಾಳ ಜಡಾ
ದಾಟಿ ಹೋದ ಮೇಲೆ ಏಟೀಟು ತ್ರಾಸ ಇಲ್ಲ ।
ಮುಂದೆ ಕಾಣುವದು ಮುಕ್ತಿಮಠ
ಅಳಿವದು ಕಾಯ ಉಳಿವದು ಕೀರ್ತಿ ॥

ಅದೊಂದು ಬರುವುದು ನಿಮಗೂಡ
ಜೀವಾತ್ಮ ಇರುವಾಗ ದಾನಧರ್ಮ ಮಾಡಿ ಪುಣ್ಯವ ಗಳಿಸಿರಿ ನೀವು ಗಡ
ಜೀವಾತ್ಮನ ಒಯ್ಯುವಾಗ ಜವಾನ ಬರುವಾಗ ನೀನು ತಿಳಿದು ಕೊಳ್ಳದ ಬಾಳ ಜಡ ।
ಪುಣ್ಯವೆಂಬುದು ಕಟ್ಟಿಟ್ಟ ಬುತ್ತಿ ನಾಳೆ ಬರುವುದು ನಿಮಗುಡ
ಗಳಿಸಿಟ್ಟು ಹೊಲಮನಿ ಆಸ್ತಿ ಪಾಸ್ತಿಂಗೊಲ್ಲ ಬಿಟ್ಟ ಹೋಗ್ತಿದಿ ತಿಳಿಮೂಡ ॥

**ಹಾಡಿದವರು: ಬಸವರಾಜ, ನವಲಿ**

### ಈರಪ್ಪ ಹಾಡು

ಸ್ವಾಮಿ ನಮ್ಮಯ ದೇವಾರು ಬಂದಾವು ಬನ್ನಿರೇ
ಗುರುವೆ ನಮ್ಮಯ ದೇವಾರು ಬಂದಾವು ಬನ್ನೀರೇ ।
ಈರನೆಂದರೆ ಹ್ಯಾಗಿರಬೇಕು ಧೀರತನಗಳು ಇರಬೇಕು ॥

ಧೀರತನಗಳು ಇಲ್ಲದ ಬಳಿಕ ಹಿರಿತನಗಳು ಸಲ್ಲಾವ
ಈರತನಕ ತಕ್ಕಂಗ ಒನಪು ಜಂಪುಗಳಿರಬೇಕು ।
ಒನಪು ಜಂಪುಗಳಿಗೆ ತಕ್ಕಂಗ ಕಿರುಗೆಜ್ಜೆ ಕುಣಿಸುವ ಬರಬೇಕು ॥

ಡೊಳ್ಳಿನ ಮ್ಯಾಗಳ ಮುಂಗೈ ಹಸ್ತ ಗಿಳಿಪಾತರನಂತಿರಬೇಕು
ಸೈ ಸಂಗತಿ ಕೂಡಿ ಬಂದರೆ ಸ್ವಾಮಿ ಕಂಡು ಸೈ ಅಂದಾರೆ ।
ಸ್ವಾಮಿ ಕಂಡು ಸೈ ಅಂದಾನಪ್ಪ ಹತ್ತು ಮಂದಿ ಹೌದಂದಾರ ॥

ಹತ್ತು ಮಂದಿ ಹೌದಂದಾರಪ್ಪ ಗುರುಹಿರಿಯರ ಒಪ್ಪಿಕೊಂಡಾರ
ಗುರುಹಿರಿಯರು ಒಪ್ಪಿಕೊಂಡಾರಪ್ಪ ಕಳುವ್ಯಾರ ಕರ್ಪುರದೀಳ್ಯಾವ ।
ಕೈಪಂಪು ಕೈಯೊಳಗಿಡಕೊಂಡು ಈರಾರ ಮಕ್ಕಳು ಆಡ್ಯಾರ ಸ್ವಾಮಿ ॥

**ಹಾಡಿದವರು: ಬಸವರಾಜ, ನವಲಿ**

## ಕುರುಬರು ಡೊಳ್ಳಿನ ಹಾಡು

ಕುರುಬರಪ್ಪ ನಾವು ಕುರುಬರೋ
ಜಗದ ಸಾರವನರಿತ ಕುರುಬರೋ ।
ಜಗದ ಹಾಲುಮತದ ಕುರುಬರೋ ॥

ಹಾಲುಮತದ ಕುರುಬರೇನೋ
ಹಾಲು ಹಿಂಡುವ ಕುರುಬರೋ ।
ಹಾಲು ಹಿಂಡುವ ಕುರುಬರಯ್ಯಾ
ಹಾಲು ನೀಡಿ ಹೌದೆನಿಸಿಕೊಂಡ ಕುರುಬರೋ ॥

ಹೌದೆನಿಸಿಕೊಂಡ ಕುರುಬರೇನೋ
ಸತ್ಯವ ನುಡಿಯವ ಕುರುಬರೋ ।
ಸತ್ಯವ ನುಡಿಯುವ ಕುರುಬರಯ್ಯಾ
ಪ್ರಾಮಾಣಿಕ ಮನುಜ ಕುರುಬರೋ ॥

ಪ್ರಾಮಾಣಿಕ ಮನುಜ ಕುರುಬರಯ್ಯಾ
ದರಮದ ಮರಮಾ ಅರಿತವರೋ ।
ದರಮದಂರಮಾ ಅರಿತವರಯ್ಯಾ
ಶಿವ ಪಾರ್ವತಿಯ ವಂಶವೇನೋ ॥

ಶಿವ ಪಾರ್ವತಿಯ ವಂಶವಯ್ಯಾ
ಮುಂದಿನ ಹೊಯಕಾ ಹೇಳುವರೋ ।
ಮುಂದಿ ಹೊಯಕಾ ಹೇಳುವರ್ಯಾ
ಕಂಬಳಿ ಬೀಸಿ ಮಳೆ ಕರೆದವರೋ ॥

ಕಂಬಳಿ ಬೀಸಿ ಮಳೆ ಕರೆದವರಯ್ಯಾ
ಸರವರಿಗೆ ಮಳೆರಾಯನ ಕೊಟ್ಟವರೋ ।
ಸರವರಿಗೆ ಮಳೆರಾಯನ ಕೊಟ್ಟವರಯ್ಯಾ
ಜಗತಿಗೆ ಅನ್ನಾ ನೀಡಿದವರೋ ॥

ಜಗತಿಗೆ ಲಿಂಗವ ನೀಡಿದವರಯ್ಯಾ
ಗುರುವಿನ ಗುರುತಾ ಮಾಡಿದವರೋ ।
ಗುರುವಿನ ಗುರುತಾ ಮಾಡಿದವರಯ್ಯಾ
ಜಗತಿಗೆ ಲಿಂಗವ ನೀಡಿದವರೋ ॥

ಜಗತಿಗೆ ಲಿಂಗವ ನೀಡಿದವರಯ್ಯಾ
ಶಿವ ಪಾರ್ವತಿನ ಭಜಿಸಿದವರೋ ।
ಶಿವ ಪಾರ್ವತಿನ ಭಜಿಸಿದವರೋ
ಶಿವಲಿಂಗನ ಗುರುತಾ ನೀಡಿದವರೋ ॥

ಅಲ್ಲಿ ಗಿಲ್ಲಿಗೆ ಇದವಂದ ಸಂದಿ
ಸಂದಿಗ್ವೇಳ ಬಳ್ ಮುಂದೇಳೋ ।
ದೇವರ ಬಂದಾವ ॥

**ಹಾಡಿದವರು: ರೇವಣೆಪ್ಪ, ಯಲಬುರ್ಗಾ**

**ಸರವರಿಗೆಲ್ಲ ಬೇಕಾದ ಕಂಬಳಿ**

ದೇವರ ಬಂದಾವ ಬನ್ನಿರೆ
ಸ್ವಾಮಿ ನಮ್ಮಯ್ಯ ಬಂದಾನ ಬನ್ನಿರೇ
ಆದಿಸ್ಥಳದಲ್ಲಿ ಇದ್ದ ಕಂಬಳಿ ।
ಹಾಲುಮತ ದರಮಕ ಬತ್ತ ಕಂಬಳಿ
ಶಿಷ್ಯಾರದಿಂದ ಹುಟ್ಟಿತ ಕಂಬಳಿ ॥

ಜಗದ ಗುರುವ ಮಡಿಸಿದ ಕಂಬಳಿ
ಮಳೆರಾಜ ಬಂದಾಗ ಬೆಚ್ಚಾತ ಕಂಬಳಿ
ತಲಿಮ್ಯಾಲಿ ಸುತ್ತುವ ಪಾವಡಾತ ಕಂಬಳಿ ।
ರಾಜ ಪಂಡಿತರಿಗೆ ಉಲನಕೋಟಾತ ಕಂಬಳಿ
ಜಾಕೀಟನಂತ ಶೋಭಾಯ ಕಂಬಳಿ ॥

ಬತ್ತುಕೂರಿಗಿ ಹಾಕುವ ಕಂಬಳಿ
ಕಣದಾಗ ರಾಶಿ ಅಳೆಯುವ ಕಂಬಳಿ ।
ಬಂಡಿ ರೈತಗ ಮುಂಡಿ ಮ್ಯಾಲಾಡುತ ಕಂಬಳಿ
ಬೇಕ ಬೇಕಾದಕ ಕಬಳಿಸುವ ಕಂಬಳಿ
ಬಂದ ಬೀಗರಿಗೆ ಹಾಸುವ ಕಂಬಳಿ ॥

ಬಾಣಂತಿ ಮೈಮ್ಯಾಲ ಹೊರವ ಕಂಬಳಿ
ಕೂಸಿನ ಕೈಯಾಗ ಕಡಿಯಾತ ಕಂಬಳಿ ।
ಸರವರಿಗೆಲ್ಲ ಬೇಕಾದ ಸಿರಿಯ ಕಂಬಳಿ
ದಿಮ್ಮಿನ ಬುಡಕ ಹಾಸು ಕಂಬಳಿ
ಇಂಗು ಜೀರಿಗೆ ಮಾರುವ ವ್ಯಾಪಾರಿ ಕಂಬಳಿ ॥

ಶಿಷ್ಯಾರಿಂದ ಹುಟ್ಟಿದ ಶುಬದ ಕಂಬಳಿ
ಸಿದ್ದ ಅಳಪ್ಪನ ಒಲಿಸುವ ಕಂಬಳಿ ।
ಮದುವೆಯ ಕಾಲಕ ತೋರುವ ಕಂಬಳಿ
ಶಾಸಕ್ಕಿ ಹೊಯುವ ಶಾಶ್ವತ ಕಂಬಳಿ
ಸತ್ಯ ಸದನದ ಹೆಚ್ಚಿನ ಕಂಬಳಿ ॥

ಸತ್ಯ ಕುರುಬರು ಮೆಚ್ಚಿನ ಕಂಬಳಿ
ಸಿದ್ಧ ಸಿದ್ಧರ ಸಜ್ಜಾದ ಕಂಬಳಿ ।
ಗುರು ರೇವಣಸಿದ್ಧನ ಕಂಬಳಿ
ಬೇಕಾದಾಗ ಮಳಿಗರೆದ ಕಂಬಳಿ
ಕಂಬಳಿ ಕಂಬಳಿ ಸತ್ಯ ಸದನದ ಕಂಬಳಿ ॥

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

## ಹಾಲುಮತ

ಹರ ಹರ ಮಹಾದೇವ ಶಂಭೋ ಶಂಕರನೋ
ವರಗುರು ರೇವಣಸಿದ್ಧವನೋ
ನೆನೆಯುತ ಹಾಲುಮತದ ವಂಶವನೋ ।
ಹರುಷದಿಂದ ಕೇಳರಿ ತ್ವರಿತದಿಂದಲೆ
ಅದಿಗೊಂಡನ ಚರಿತ್ರವನೋ
ಅದಿಗೊಂಡಗ ಆರು ಮಂದಿ ಮಕ್ಕಳನೋ ॥

ಅವರ ಹೆಸರ ಸಾರಿ ಹೇಳುವನೋ
ಆಯಗೊಂಡ ಪಾಂಶುಗೊಂಡವನೋ
ಜಾಯಗೊಂಡ ಪುಂಡಗೊಂಡನೆಂಬವನೋ ।
ಇಲ್ಲಿಗೆ ಆದುವ ನಾಕು ಹೆಸರಗಳೋ
ಇನ್ನು ಕೇಳಿರಿ ಅಮಗೊಂಡವನೋ
ಕಡೆಯ ಮಗನ ಹೆಸರು ಕೇಳರಿ ಪದ್ಮಗೊಂಡನೋ ॥

ಅವರವರ ಹೆಂಡರ ಹೆಸರ ಕೇಳರಿ
ಸಭೆದಾಗ ಸಾರಿ ಹೇಳುವೆನೋ
ಸುರನೂರ ಸಾಯವ್ವ ಪದ್ಮನೆಂಬಾಕಿನೋ ।
ಜಾಗೃತಿ ಜಮನ್ವ ಪುಂಡಾಳಕೋಟೆ
ಗೊಂಡಗೇಡನ ಮಗಳು ಸುಗ್ಗವನೋ
ಇಲ್ಲಿಗೆ ಅದುವು ನಾಕು ಮಂದಿಯ ಹೆಸರವನೋ ॥

ಅಮಕಾನಿ ಅವ್ವಕ್ಕ ಶಿವ ಪದ್ಮಗ ಇಬ್ಬರ ಹೆಸರವನೋ
ಜಿಂಕಾದೇವಿ ಚುಮಲಾದೇವಿ ಎಂಬ ನಾಮವನೋ
ಶಿವ ಪದ್ಮನ ಕುಟುಂಬದೊಳಗ ।
ಇಬ್ಬಣ ಆತೊ ಎರಡು ಭಾಗವನೋ
ಬಿಳಿ ಎಳಿ ಕರಿ ಎಳಿ ಎಂಬ ಪಂಗಡವನೋ
ಜಿಂಕಾದೇವಿಗೆ ಇಪ್ಪತ್ತು ಗಂಡು
ಇಪ್ಪತ್ತು ಮಂದಿ ಹೆಣ್ಣು ಮಕ್ಕಳು ದಿಸಿದರಲ್ಲಾ ॥

ಅಲ್ಲಿಗೆ ಬಂದಾನ ರೇವಣ ಗುರುವರನೊ
ಶಿವ ಪದ್ಮಗ ಜಿಂಕಾದೇವಿಗೆ
ಲಿಂಗದೀಕ್ಷೆ ಶಿವ ಪಂಚಾಕ್ಷರನೋ ।
ರೇವಣಸಿದ್ಧ ಬೋಧಿಸಿ ನಡೆದಿದ್ದಾನೋ
ಶಿವಸಿದ್ಧ ಬೋದಿಸಿ ನಡೆದಿದ್ದಾನೋ ಲಿಂಗದೀಕ್ಷೆ ಶಿವಪಂಚಾಕ್ಷನೋ
ರೇವಣಸಿದ್ಧ ಬೋಧಿಸಿ ನಡೆದಿದ್ದಾನೋ ॥

ಶಿವಪದ್ಮ ಮಕ್ಕಳಿಗೆ ನಾಮಕರಣ ಮಾಡುದರ ತನ್ನ ಬಳಗವನೊ
ಕೂಡಿದಾನ ನೆಂಟರಿಷ್ಟ ಜನಕನೋ
ಮೊದಲಿನ ಹೆಸರ ಬಿಚ್ಚಿ ಹೆಳುವೆನೊ ।
ಮನನೆಟ್ಟ ಕೆಳಲಿ ನೀವಿನ್ನೊ
ರೇವಣಸಿದ್ಧನೆಂಬ ಅವನ ನಾಮವನೋ
ಪ್ರಭು ರೇವಣಭುವಿ ರೇವಣನೋ ॥

ಮುರಲಿಂಗ ವಹಾಂತ ರೇವಣನೋ
ಮಲಹರಿ ಬಸು ರೇವಣನೋ
ಬೆಳ್ಳಿ ಕನ ರೇವಣರು ಮಣ್ಣು ರೇವಣನೊ ।
ಇಲ್ಲಿಗೆ ಆತ ಒಂಭತ್ತು ಹೆಸರನ್ನೋ
ಇನ್ನು ಕೇಳರಿ ಜಗಲ್ಲ ರೇವಣನೆಂಬವನೋ
ಶಾಂತ ರೇವಣ ಸಣ್ಣ ರೇವಣನೋ ॥

ಹಾಲು ರೇವಣ ಅಂಬಲಿ ರೇವಣನೋ
ಸದಾಲಿಂಗ ಹೊಂಕಳ ರೇವಣನೆಂಬುವನೋ
ಇಲ್ಲಿಗೆ ಆದುವ ಹದಿನಾರ ಹೆಸರವನೋ ।
ನಂದಿ ರೇವಣ ವೀರ ಕಾಳಿಂಗ ರೇವಣನೋ

ಇಲ್ಲಿಗೆ ಅದುವು ಇಪ್ಪತ್ತು ಹೆಸರವನೋ
ಇನ್ನು ಕೇಳರಿ ಹೆಣ್ಣುಮಕ್ಕಳ ಹೆಸರವನೋ ||

ರೇವಣ್ಣಿ ರಾಚರೇವಕ್ಕ ಎಂಬಾಕಿನೋ
ಹೊನ್ನರೇವಕ್ಕ ದೊಡ್ಡ ರೇವಕ್ಕನೋ
ಜಗದ ರೇವಕ್ಕ ನಾಗಲಿಂಗಕ್ಕನೋ |
ಹವಳ ಹೊಬಣ್ಣದ ರೇವಕ್ಕನೋ
ಕಾರಣಿಕ ಸಿದ್ದವ್ವ ಕರಿಯ ಲಿಂಗಕ್ಕನೋ
ಇಲ್ಲಿಗೆ ಹತ್ತು ಹೆಸರವನೋ ||

ಸೋಮವ್ವ ಅಡವಿ ರೇವಣಿ ಎಂಬಾಕಿನೋ
ಜಡಿಯ ರೇವಕ್ಕ ಮಡಿಯ ರೇವಕ್ಕನೋ
ಇಟ್ಟಿದಾರ ಇವರ ನಾಮವನೋ |
ಬಲ್ಲಿದ ಗುಡದವ್ವ ಕಾಡಿಗೆ ಗಿರೆಯಕ್ಕನೋ
ಇಲ್ಲಿಗೆ ಹದಿನಾರು ಹೆಸರವನೋ ||

ಓಂಕಾರ ರೇವಕ್ಕ ಮಹಾತಂಗಿ ರೇವಕ್ಕನೋ
ಶಾವಿಗೆ ರೇವಕ್ಕ ಮಹಾತಂಗಿ ರೇವಕ್ಕನೋ
ಇಲ್ಲಿಗೆ ಅದುವು ಇಪ್ಪತ್ತು ಹೆಣ್ಣುಮಕ್ಕಳ ಹೆಸರವನ್ನೋ |
ಓಂಕಾರದೇವಿ ಪದ್ಮನೋ ಮಾಡಿದಾರ ತಮ್ಮ ಮಕ್ಕಳ ನಾಮವನೋರಿನ್ನು
ಇನ್ನು ಕೇಳಿರಿ ಚಮಲಾದೇವಿನೋ
ಇಪ್ಪತ್ತು ಮಂದಿ ಮಕ್ಕಳ ನಾಮವನೋ ||

ಮುಂದಿನ ಸಂದಿಗೆ ನಾವು ಉಚ್ಚರಿಸಿ ಹಾಡುವೆವೋ
ಕರ್ನಾಟಕ ಒಪ್ಪುವಂತ ಚಿಕ್ಕೊ ಗ್ರಾಮದೊಳಗ |
ಸಚ್ಚಿದಾನಂದ ಮೂರ್ತಿಯನೋ
ಬೀರಲಿಂಗ ದೇವರಿಂಗ ನಾವು ನಮಿಸುವೆವೊ ||

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

### ಕುರುಬರು ಸತ್ಯ ಪ್ರಾಮಾಣಿಕತೆ ಕುರಿತು

ನಾವು ಕುರುಬರು ದೇವರ ಬಂದಾವ ಬನ್ನೀರೇ ಸ್ವಾಮಿ ಬಂದಾವ
ಬನ್ನಿರೇ ಅವರಿಗೆ ಹಾಲು ಕೊಟ್ಟೇವೋ ಇವರಿಗೆ ಹಾಲು ಕೊಟ್ಟೇವೋ |
ಕರಿಯ ಕಂಬಳಿಯವರು ನಮ್ಮವರೋ ಬಿಳಿಯ ಕಂಬಳಿಯವರು ನಮ್ಮವರೋ
ಹಾರೂರ ಬಂದಾಗ ಕರೆದೇವೋ ಅಂತ್ಯಜರು ಬಂದಾಗ ಕರೆದೇವೋ ||

ಜಾತಿ ಬೇಧ ನಾವು ಮೀರೇವೊ  ಹಾಲಮತವನು ನಾವು ಮೇ ರೆಸೇವೋ
ದೇಶ ದೇಶ ನಾವು ತಿರುಗೇವೋ ಕೋಶಗಳ ಅರ್ಥ ತಿಳಿದೇವೋ ।
ಎಲ್ಲ ದೇವರಿಗೆ ನಡೆದೇವೋ ಬಲ್ಲ ದೇವರೆಲ್ಲ ನಮ್ಮವರೋ ॥

**ಹಾಡಿದವರು: ಭೀಮಪ್ಪ ಶೆಟ್ಟೆಪ್ಪ, ಕುಕನೂರು**

**ರೇವಣಸಿದ್ದಪ್ಪನ ಹಾಡು**

ರೇವಣಸಿದ್ದನ ಲೀಲೆಯ ಕೇಳಿರಿ
ನಿಮ್ಮ ಮುಂದಾ ನಾ ಹೇಳುವೆನೋ
ನಿರಂಕಾರ ನಿರ್ಗುಣ ನಿರಂಜನನೋ ।
ನಿರ್ಭಯಲಾಯಿತು ಕೇಳಿರಿನ್ನೋ
ಹಂಕಾರ ಓಂಕಾರ ಡೆಕಾರ ಮಕಾರಗಳೋ
ಓಂಕಾರ ಅದಿತು ಕೇಳಿರಿನೋ ॥

ಕಾಶಿ ಖಂಡದೊಳಗಿನ ಮಾತ ಒಂದನೋ
ಸೋಸಿ ನಿಮ್ಮ ಮುಂದ ಹೇಳುವೆನೋ ।
ಆದಿ ರೇವಣ ಹುಟ್ಟಿದ ಕಥನಾವನೋ
ಸೃಷ್ಟಿಯೊಳಗಿನ ಮಾತವನೋ
ಓಂಕಾರ ವಡದ ಆತ ಆಕಾರ ಡೆಕಾರನೋ
ನಕಾರ ಮಮಕಾರವನೋ ॥

ಹಕಾರದೊಳಗೆ ಹುಟ್ಟಿ ಬಂದಾರೋ
ಹರಿಬ್ರಹ್ಮ ದೇವತೆಯನೋ
ಡೆಕಾರದೊಳಗೆ ಹುಟ್ಟಿ ಬಂದಾನೋ ।
ಶಿವಸಿದ್ಧ ರೇವಣಸಿದ್ಧ ನೆನಸಿದನೋ
ಸಪ್ತಸಿದ್ಧರು ಉದಯನಾದರೋ
ಸಪ್ತಸಿದ್ಧರು ಉದಯನಾದರೋ ॥

ಆಕಾರವಾದಿತೋ ಕೇಳರಿನ್ನೋ
ಮಮಕಾರದೊಳಗ ಮಹಾದೇವ ಹುಟ್ಟಿದಾನೋ
ಇದರ ವಿಸ್ತಾರ ನಿಮಗೆ ತಿಳಿಸುವೆನೋ ।
ನಕಾರದೊಳಗ ಹುಟ್ಟಿದಾರೋ
ಯಕ್ಷಗಾನ ಗರುಡ ಗಂಧರ್ವರಿನ್ನೋ
ತಕ್ಷಕಿ ಮಕ್ಷಕಿ ಕಿನ್ನರ ಕಿಂಪುರುಷರೋ
ಹುಟ್ಟಿದಾರತ ಕೇಳರಿ ಕಥೆಯನೋ ॥

ಆದಿರೇವಣ ಹುಟ್ಟಿದಾನೋ
ಡೆಕಾರದೊಳಗೆ ಬಸು ಬೀರೇಶನೋ
ದೈತ್ಯ ದಾನವರು ಆದಾರೋ ।
ರಾಕ್ಷಸ ಅರವತ್ತಾರು ಕೋಟಿ ಕೇಳಿರಿನ್ನೋ
ಮೂವತ್ತು ಮೂರು ಕೋಟಿ ದೇವತೆಗಳೋ ॥

ಆದರೊ ಆಕಾಶದೊಳಗೆ ಕೇಳರಿದನೋ
ಕಶಪ ಬ್ರಹ್ಮನಿಂದ ಹುಟ್ಟಿ ಬಂದಾರೋ
ಸೃಷ್ಟಿಯೊಳಗಿನ ಮಾತವನೋ ।
ದೈತ್ಯ ಗುರು ಶಕ್ರಚಾರ್ಯರರೋ
ದಾನ ದೇವಗುರು ಬೃಃಸ್ಪತಿಯನೋ ॥

ರೇವಣಸಿದ್ಧನ ವರ್ಣನೆ ಕೇಳಿರಿನೋ
ಎಪ್ಪತ್ತೇಳು ಸಾವಿರ ವರುಷವನೋ
ಗೋರ ತಪಾ ಮಾಡಿದನೋ ।
ಜಾಂಬು ಆರಾಣ್ಯದೊಳಗಿನ ಮಾತವನೋ
ರೇವಣಗ ಪರವತದೊಳಗೆ ರೇವಣಸಿದ್ಧಾನೋ ॥

ಹಾಲಿನ ಹೋಮವ ಮಾಡಿದನೋ
ಹೋಮದ ಕುಂಡದೊಳಗೆ ಕುರಿಗಳನೋ
ಜನನವಾದ ಮಾತ ನಿಮಗೆ ಹೇಳುವೆನೋ ।
ದೈತ್ಯರ ಉಪಟಳ ಹೆಚ್ಚಾತೋ
ಹೋಮ ಕೆಡಿಸಿಕೊಂಡ ತನ್ನ ಹೋವವನ್ನೋ
ರೇವಣಸಿದ್ಧ ಶಿವನಾಮಸ್ತೋತ್ರ ಮಾಡಿದನೋ ॥

ಸಿದ್ಧಬೀರನೆನಿಸಿದವನೋ
ಸಿದ್ಧಬೀರನು ಉದಯನಾದನೋ
ಹೊಡೆದಾನೋ ದೈತ್ಯರ ರುಂಡಗಳನನೋ ।
ಕುರಿಗಳ ಸಲಹುದಕ ರೇವಣಸಿದ್ಧನೋ
ಹೇಳಿದಾನೋ ಬೀರಲಿಂಗಗನೋ ॥

ಇಲ್ಲಿಗೆ ಉತ್ಪನ್ನ ಆತ ಹಾಲುಮತವನೋ
ಇದರ ತತ್ವ ನಿಮ್ಮ ಮುಂದ ಹೇಳುವೆನೋ
ಏಳುಮಂದಿ ಸಿದ್ಧರೊಳಗನೋ ।

ರೇವಣಸಿದ್ಧ ಹಾಲುಮತದ ಗುರುವರನೋ
ಸಿದ್ಧಬೀರನು ಗುರು ಬೋಧ ಮಾಡಿದಾನೋ
ರೇವಣಗಿ ಪರವತದೊಳಗವನೋ ||

ಸ್ವಯಂ ಬ್ರಹ್ಮನು ಹೋಮ ಮಾಡುವಾಗನೋ
ಗುರುವಾದ ರೇವಣಸಿದ್ಧವನೋ
ಸ್ವಯಂದೊಳಗೆ ರೇವಣಸಿದ್ಧನು ಲೀಲೆಯನೋ |
ನಿಮ್ಮ ಮುಂದೆ ನಾ ಹೇಳುವೆನೋ
ರೇಣಕಾಚಾರಿಗೆ ರೇವಣಸಿದ್ಧನೆಂದೋ
ಅನಬ್ಯಾಡರಿ ಮುದದಿಂದ ಕೇಳಿರಿದವನೋ ||

ಗುರುವಿಲ್ಲದೆ ಆರುವು ಆಗುವುದಿಲ್ಲೆಂಬೋ
ಧರೆಯೊಳಗಿನ ಮಾತವನೋ
ಇಪ್ಪತ್ತೊಂದು ಯುಗ ಆದುವೋ |
ಮೊದಲ ನಮ್ಮ ರೇವಣಸಿದ್ಧನೋ
ಹುಲ್ಲು ಮನುಜಗ ಬ್ಯಾಡ ಹಮ್ಮದಮ್ಮವೋ
ಸಿದ್ಧರ ಪಾದಕ ಯುಂಗುವೆನೋ ||

**ಹಾಡಿದವರು: ಶಿವಪ್ಪ ಡೊಳ್ಳಿನ, ಬೆಂಚಮಟ್ಟಿ**

## ಕೋಲಾಟದ ಹಾಡು

ಕೋಲು ಕೋಲೆನ್ನ ಕೋಲೆ ರನ್ನದ ಕೋಲು ಕೋಲ
ಕೋಲು ಕೋಲೆನ್ನಿರ ಶುಭ ಶಂಕರಗೆ ಕೋಲು ಕೋಲೆನ್ನಿರೆ |
ಕೋಲು ಕೋಲು ಶ್ರೀ ಮುದ್ದು ಕೋಲ ಕೋಲ ||

ಕೋಲು ಕೋಲಿನ ರನ್ನದ ಕೋಲು ಕೋಲಿನ
ಕೋಲವಾಡಿರಿ ಶಿವನ ಸ್ಮರಿಸ ಬನ್ನಿರಿ |
ಕೋಲು ಎನ್ನಕೋಲು ಒಳ್ಳೆ ಕೋಲು ಎನ್ನ ಕೋಲು ||

ಕೋಲು ಕಲ್ಯಾಣದ ಬಸವನ | ಕೋಲು ಎನ್ನ ಕೋಲು
ಕೋಲು ಕೋಲೆನ್ನ ಕೋಲ | ಕೋಲು ಕೋಲೆನ್ನ ಕೋಲ
ಕೋಲು ಶರಣರ ಸೂಚನೆ ಕೋಲ ||

ರನ್ನದ ಕೋಲಾನೆ ಕೋಲೆನ್ನ ಕೋಲೆ
ಕೋಲೆ ಕೋಲೆನ್ನ ಹೂವಿನ ಕೋಲ ಕೋಲ

ಎನ್ನಸ್ವಾಮಿ ಪಾಲಿಸೊ ದಂಡನಾಯಕ ಬಸವನೆ ॥
ಕೋಲು ಕೋಲೆನ್ನ ಕೋಲ । ಕೋಲ ಕೋಲೆನ್ನ ಕೋಲ
ಕೋಲು ಮುತ್ತಿನ ಸಿರಿರಂಗಿ ಕೋಲ ॥

**ಹಾಡಿದವರು: ಮಾಂತಯ್ಯ ಪೂಜಾರ್, ನವಲಿ**

## ಗೀಗೀ ಪದ

ಹೇ ಭಾರತ ಮಾತೆಯ ಮಡಿಲಲ್ಲಿ ಜನಿಸಿದ ಯುವಕ ಯುವತಿಯರು ನೀವು ಕೇಳಿರಿ
ಭಾರತ ಮಾತಿಗೆ ಕೀರ್ತಿ ಉಳಿಸಲು ಕಂಕಣ ಕಟ್ಟಿ ನೀವು ನಿಲ್ಲಿರಿ ।
ಭಾರತ ಮಾತಿಗೆ ಕೀರ್ತಿ ಉಳಿಸಲು ಕಂಕಣ ಕಟ್ಟಿ ನೀವು ನಿಲ್ಲಿರಿ ॥

ಹಿಂದೂ ಮುಸ್ಲಿಂ ಜೈನ ಕ್ರೈಸ್ತವೆಂದು ಜಾತಿಯ ಉಪಜಾತಿಯ ಮಾಡದಿರಿ
ಜಾತಿ ಜಾತಿಯ ಎಂದು ಸಾರುವ ಮೊದಲು ನೀತಿಯನ್ನು ನೀವು ಪಾಲಿಸಿರಿ ।
ಜಾತಿ ಜಾತಿಯ ಎಂದು ಸಾರುವ ಮೊದಲು ನೀತಿಯನ್ನು ನೀವು ಪಾಲಿಸಿರಿ ॥

ಪರಸ್ತ್ರೀಯರ ಸಂಘ ಮಾಡಲು ಹೋಗಿ ಏಡ್ಸ್ ಎಂಬ ಮೂರ್ತಕ್ಕೆ
ಬಲಿಯಾಗಿ ಏಡ್ಸ್ ಎಂಬ ಮೂರ್ತಕ್ಕೆ ಬಲಿಯಾಗಿ ।
ಹೆಂಡರ ಮಕ್ಕಳಿಗೆ ಕೈಯೊಳಗೆ ಚಿಪ್ಪನ್ನು ಕೊಡುವದು ಗ್ಯಾರಂಟಿ
ಹೆಂಡರ ಮಕ್ಕಳಿಗೆ ಕೈಯೊಳಗೆ ಚಿಪ್ಪನ್ನು ಕೊಡುವದು ಗ್ಯಾರಂಟಿ
ಹೇ ಭಾರತ ಮಾತೆಯ ಮಡಿಲಲ್ಲಿ ಜನಸಿದ ಯುವಕ ಯುವತಿಯರು ನೀವು ಕೇಳಿರಿ
ಭಾರತ ಮಾತಿಗೆ ಕೀರ್ತಿ ಉಳಿಸಲು ಕಂಕಣ ಕಟ್ಟಿ ನೀವು ನಿಲ್ಲಿರಿ ॥

ವರದಕ್ಷಿಣೆ ಎಂಬ ಆಸೆಗೆ ಸೋತು ಹೆಣ್ಣಿನ ಸೊತ್ತ ಹೆಣ್ಣಿಗೆ ಮಾಡಿದಿರಿ
ಆ ಹೆಣ್ಣು ತಿರುಗಿ ಬಿದ್ದರೆ ನಿಮ್ಮ ಪಾದವು ನೆಟ್ಟಗುವುದು ನೀವು ತಿಳಿದಿರಿ
ನಾನು ಹಾಡಿ ಹೇಳುವೆ ಈ ಲಾವಣಿಯನ್ನು ಆಲಿಸಿರಿ ॥
ಕೊಪ್ಪಳ ಜಿಲ್ಲೆಯ ಈ ಲಾವಣಿ ಎಲ್ಲರು ನೀವು ಕೇಳಿರಿ
ಹೇ ಭಾರತ ಮಾತೆಯ ಮಡಲಲ್ಲಿ ಜನಿಸಿದ ಯುವಕ-ಯುವತಿಯರು ನೀವು ಕೇಳಿರಿ
ಭಾರತ ಮಾತಿಗೆ ಕೀರ್ತಿ ಉಳಿಸಲು ಕಂಕಣ ಕಟ್ಟಿ ನೀವು ನಿಲ್ಲಿರಿ ॥

**ಹಾಡಿದವರು: ಹನುಮಂತಪ್ಪ, ಕೊಪ್ಪಳ**

## ಗೀಗೀ ಪದ

ಮೈಸೂರು ರಾಜ್ಯದ ದೊರೆಯೇ ರಣಧೀರ ನಾಥನೇ
ನಿನ್ನ ತವರು ಯಾರು ಇಲ್ಲವಲ್ಲೋ ಈ ಭೂಮಿಮ್ಯಾಲೆ ।
ನಿನ್ನ ತವರು ಯಾರು ಇಲ್ಲವಲ್ಲೋ ಈ ಲೋಕದ ಮ್ಯಾಲೆ ॥

ಮುಂದೆ ಮುನ್ನೂರು ದಂಡು ಹಿಂದೆ ಇನ್ನೂರು ದಂಡು
ಮುಂದೆ ಮುನ್ನೂರು ದಂಡು ಹಿಂದೆ ಇನ್ನೂರು ದಂಡು ।
ನಿನ್ನ ತವರು ಯಾರೂ ಇಲ್ಲವಲ್ಲೋ ಈ ಭೂಮಿಮ್ಯಾಲೆ
ನಿನ್ನ ತವರು ಯಾರು ಇಲ್ಲವಲ್ಲೋ ಈ ಲೋಕದ ಮ್ಯಾಲೆ ॥

ಚಿರತಿನ ಪಾಳ್ಳಿಯಲ್ಲಿ ಕೊಬ್ಬಿದ ಮಲ್ಲಗಟ್ಟಿ
ಮಡಿಗಟ್ಟಿ ಎನ್ನು ದಿಟ್ಟ ಬಾಗಿಲ ಮೇಲೆ ತೂಗಿಬಿಟ್ಟ ।
ಎನ್ನು ಕೇಳಿ ಕಿಡಿಕಿಡಿಯಾಗಿ ದೊರೆಯೇ ॥

ಮೈಸೂರು ರಾಜ್ಯದ ದೊರೆಯೇ ರಣಧೀರ
ನಿನ್ನ ತವರು ಯಾರೂ ಇಲ್ಲವಲ್ಲೋ ಈ ಭೂಮಿ ಮ್ಯಾಲೆ
ನಿನ್ನ ತವರು ಯಾರು ಇಲ್ಲವಲ್ಲೋ ಈ ಲೋಕದ ಮ್ಯಾಲೆ ।
ಮಲ್ಲಯುದ್ಧದಲ್ಲಿ ನಮಗಿಲ್ಲ ಈ ನಮ್ಮ ದೊರೆ ತೋರರೊ
ಕೈಯ ತಲ್ಲಕ ತೋರರೊ ಕೈಯ ತಲ್ಲಕ
ನೋಟಕ್ಕೆ ಕಾಣದಂತೆ ನೋಟಕ್ಕೆ ಕಾಣದಂತೆ ॥

ಸೊಂಟದೊಳಗೆ ಮಾವನರಸಿಂಹನೆಂಬ ಕತ್ತಿಯಿಂದ
ಬೇರೆ ಯಾರ ನಮ್ಮ ಕರದರೋ ನಮ್ಮ ರಣಧೀರ ನಾಯಕನೇ ।
ನಿನ್ನ ತವರು ಯಾರು ಇಲ್ಲವಲ್ಲೊ ಈ ಭೂಮಿ ಮ್ಯಾಲೆ
ನಿನ್ನ ತವರ ಯಾರು ಇಲ್ಲವಲ್ಲೊ ಈ ಲೋಕ ಮ್ಯಾಲೆ ॥

ಮಲ್ಲ ಮಾತಿನ ಕಾಯಲು ಎಂದು ಮಲ್ಲವೇಶವು ತೊಟ್ಟಕೊಂಡು
ಮಲ್ಲ ಮಾತು ಕೇಳುವನೆಂದು ಮಲ್ಲವೇಶವು ತೊಟ್ಟಕೊಂಡು ।
ಮಲ್ಲ ಮಾನವ ಕಾಯುವನೆಂದು ಮಲ್ಲವು ದೇಶವು ತೊಟ್ಟಕೊಂಡು
ಚಿರತಿನ ಪಾಳ್ಳಿಗೆ ಹೋಗಿ ಕಿರಿಕಿರಿಯಾಗಿ ದೊರೆಯೇ ॥

ಮೈಸೂರು ರಾಜ್ಯದ ದೊರೆಯೇ ರಣಧೀರ ನಾಯಕನೆ
ನಿನ್ನ ತವರು ಯಾರು ಇಲ್ಲವವೋ ಈ ಭೂಮಿ ಮ್ಯಾಲೆ ।
ನಿನ್ನ ತವರು ಯಾರು ಇಲ್ಲವಲ್ಲೋ ಈ ಲೋಕದ ಮ್ಯಾಲೆ ॥

ಸಂಬಳ ಸುತ್ತ ಸಾಕಯ್ಯ ಹನ್ನೆರಡು ವರ್ಷದ
ಹಳೆ ಅಕ್ಕಿ ಅನ್ನ ಉಂಡು ಕೆನ್ನೆಗೆ ನನ್ನ ತಮ್ಮ ಬಡವದ ।
ಹನ್ಯಕರಿಸು ನಿನ್ನ ಸಂಬಳ ಸಕಾಯ್ಯ ಹನ್ನೆರಡು ವರ್ಷದ
ಹಳೆ ಅಕ್ಕಿ ಅನ್ನ ಉಂಡು ಕೆನ್ನೆಗೆ ನನ್ನ ತಮ್ಮ ಬಡವದ ॥

ಅನ್ನ ಕ್ಷೇತ್ರದಲ್ಲಿ ಮುಗ್ಗಿಲ ಜೋಳದ ಅಂಬಲ ಕುಡಿದು
ಹನ್ನ ಕರಿಸು ನಿನ್ನ ಸಂಬಳ ಸಾಕಯ್ಯ ಹನ್ನೆರಡು ವರ್ಷದ ।
ಹಳೆ ಅಕ್ಕಿ ಅನ್ನ ಉಂಡು ಕೆನ್ನೆಗೆ ನನ್ನ ತಮ್ಮ ಬಡವಾದ
ಬಡವರ ಸತ್ತರೆ ಸುಡಲಾಕ ಸೊಪ್ಪು ಇಲ್ಲ ॥

ಮೊದಲ ಬೆಂಕಿಯಾಗಿ ಹೆಣ್ಣು ಚೆಂದು
ಬಡವರಿಗೆ ಸಾವು ಕೊಡಬೇಡ
ಬಡವರಿಗೆ ಸಾವು ಕೊಡಬೇಡ ।
ಹನ್ನಕರಿಸು ನಿನ್ನ ಸಂಬಳ ಸಾಕಯ್ಯ ಹನ್ನೆರಡು ವರ್ಷದ
ಹಳೆ ಅಕ್ಕಿ ಅನ್ನ ಉಂಡು ಕೆನ್ನೆಗೆ ನನ್ನ ತಮ್ಮ ಬಡವಾದ
ಕೆನ್ನೆಗೆ ನನ್ನ ತಮ್ಮ ಬಡವಾದ ॥

**ಹಾಡಿದವರು: ನಾಗರಾಜ, ಕೊಪ್ಪಳ**

## ಗೀಗೀಪದ ರಾಜಕೀಯ ಕುರಿತು

ಕೇಳಿರಿ ಕೇಳಿರಿ ಕನ್ನಡ ಜನಗಳೇ
ಮೈಸೂರಿನ ಹುಲಿ ಟಿಪ್ಪು ಕಥೆ
ಹೈದರಾಲಿಯ ಹೆಮ್ಮೆಯ ಮಗನ
ಕನ್ನಡ ನಾಡಿನ ಕೀರ್ತಿ ಕಥೆ ॥

ಸೇನೆಯ ಕಟ್ಟಿದ ನಾಡನ್ನು ಬೆಳಗಿದ
ಭಾವೈಕ್ಯತೆಯನ್ನು ಜನರೊಳು ಬಿತ್ತಿದ
ಪೂರ್ಣಯ್ಯರಂಥ ಮಿತ್ರರ ಜೊತೆಯಲಿ
ನಿಷ್ಠರ ಬಲವನು ಕೂಡಿಸಿದ ॥

ಪೇಶ್ವೆ ಮರಾಠ ನಿಜಾಮ ಕುತಂತ್ರಕ್ಕೆ
ಖಡ್ಗದ ಝಳಪಿಸಿ ನಡುಗಿಸಿದ
ದೇಶವ ಕಬಳಿಸಿ ಬಂದ ಬ್ರಿಟಿಷರಿಗೆ
ಖಡ್ಗದೊಳ್ ಉತ್ತರ ನೀಡಿದ ॥

ಖಡ್ಗವ ಹಿಡಿದ ಟಿಪ್ಪು ನೋಡಿದ
ಬ್ರಿಟಿಷರ ಗಡಗಡ ನಡುಗಿದರು
ವಿಶ್ವದ ವೀರರ ಸಾಲಿಗೆ ಸೇರಿದ
ಮೈಸೂರು ಹುಲಿ ಎಂದು ಹೆಸರಾದ ॥

ನಾಡಿಗಾಗಿ ಸಿತ್ತೆಯಿಟ್ಟನು ತನ್ನಯ ಮಕ್ಕಳ ಈ ಧೀರ
ಕನ್ನಡ ನೆಲದಲ್ಲಿ ಇನ್ನೂ ಹುಟ್ಟಲಿ ಟಿಪ್ಪುವಿನಂಥ ಮಹಾವೀರ
ದುಷ್ಟರ ಮೋಸದ ತಂತ್ರವರೆಯ ಕೊನೆ ಉಸಿರೆಳೆದ ಸಮರದಲ್ಲಿ
ಕನ್ನಡ ಮಣ್ಣಿನ ಕಣ ಕಣ ಸಾರಲಿ ಕನ್ನಡ ವೀರನ ಕಥೆಯಲ್ಲಿ ॥

ಹಾಡಿದವರು: **ಜೀವನಸಾಬ ವಾಲೀಕಾರ ಬಿನ್ನಳ**

## ಗೀಗೀಪದ ಎಡ ಅಂತ ಯಾಕ ವದರತಿ

ಗೀಯಗಾ ಗಾಗಿಯಗಾ ಗೀಯಗೀ
ಎಡ ಎಡ ಅಂತಾ ಯಾಕ ವದರತಿ
ಎಡ ಇದ್ದರ ಮತ್ತೊಂದು ಬಲಾ ।
ಎಡ ಇಲ್ಲದಿದ್ರ ನಿಮ್ಮ ಬಲ ಎಲ್ಲಿತ್ತ
ಬಲದ ಗುರತ ಹೆಂಗ ಹೇಳುದು
ಗೀಯಗಾ ಗಾಗಿಯಗಾ ಗೀಯಗೀ ॥

ಹಳ್ಳ ಇದ್ದರ ದಿಬ್ಬ ಬಲಾ
ಕತ್ತಲವಿದ್ದರ ಬೆಳಕ ಬಲಾ
ಬೆಳಕು ಕತ್ತಲ ಕತ್ತಲ ಬೆಳಕು ।
ಎರಡು ಜೋಡಿಯವು ಸಮಬಲಾ
ಗೀಯಾಗಾ ಗಾಗಿಯಗಾ ಗೀಯಗೀ ॥

ಹೆಂಡತಿ ಇದ್ದರ ಗಂಡಬಲಾ
ಎಡಬಲವೆರಡೂ ಹೊಂದಿಕಿಲ್ಲದಿದ್ರ
ಬಂದೀತ್ಹೆಂಗ ಬಾಸಿಂಗ ಬಲಾ ।
ಹೊಟ್ಯಾಗ ಬಿದ್ದೀತ ಬೀಜಫಲಾ
ಗೀಯಗಾ ಗಾಗಿಯಗಾ ಗೀಯಗೀ ॥

ತಾಳವಿಲ್ಲದ ಮ್ಯಾಳನು ಇರುದಿಲ್ಲ
ಎಡ ಇಲ್ಲದಿದ್ರ ತಬಲದಾಟ ನಡ್ಯುದಿಲ್ಲ
ಬಲಗಾಲು ಇಲ್ಲದಿದ್ರ ಎಡದೆ ಎರಡೂ ಕಾಲು ।
ಕಡೆದು ಚೆಲ್ಲತೀ ಎಡಗಾಲ
ಗೀಯಗಾ ಗಿಗಿಯಾ ಗೀಯಗೀ ॥

ಹಾಡಿದವರು: **ಶರಣಪ್ಪ ಚಳ್ಳಮರ, ಕುಕನೂರು**

## ಗೀಗಿ ಪದ ವೀರ–ಧೀರರ ಕುರಿತು ಹಾಡು

ಈ ಪುಣ್ಯದ ನಾಡಿನಲ್ಲಿ ಬಾರಿ ಬಾರಿ ಮಹಾತ್ಮರು ಜನಿಸಿದರು
ವೀರಪುರುಷರಂತೆ ವೀರ ಮಹಿಳೆಯರು ದೊರೆಯೋಳ ಕೀರ್ತಿ ಬೆಳಗಿದರು
ಸಿಂಧೂರ ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ ಬಂಡಬಲಿಯಾಗಿ ಬಾಳಿದರು
ಬಂಡ ಆಂಗ್ಲರನ್ನು ಗುಂಡಿಗೆ ನಡುಗಿಸಿ ಕನ್ನಡದ ಕೀರ್ತಿ ಬೆಳಗಿದರು ॥

ಭಾರತ ಕಂಡ ಇದು ಪುಣ್ಯದ ನಾಡು ಇಲ್ಲಿ ಬಾರಿ ಬಾರಿ ಮಹಾತ್ಮರು ಜನಿಸಿದರು
ವೀರ ಪುರುಷರಂತೆ ವೀರ ಮಹಿಳೆಯರು ದೊರೆಯೋಳು ಕೀರ್ತಿ ಬೆಳಗಿದರು
ಕಿತ್ತೂರು ಚೆನ್ನಮ್ಮ, ಬೆಳವಾಡಿ ಮಲ್ಲಮ್ಮ ಬಂಡಬಲಿಯಾಗಿ ಬಾಳಿದರು
ಕಂಡ ವೈರಿಯನ್ನು ಹುಡುಕುತ್ತ ದಂಡುಕಟ್ಟಿ ಹೋರಾಡಿದರು
ಭಾರತ ಕಂಡ ಇದು ಬಾರಿ ಮಹಾತ್ಮರು ಜನಿಸಿದರು ॥

ವೀರ ಪುರುಷರಂತೆ ವೀರ ಮಹಿಳೆಯರು ದೊರೆಯೊಳ ಕೀರ್ತಿ ಬೆಳಗಿದರು
ಮೈಸೂರು ಹುಲಿಯಂತ ಟಿಪ್ಪುಸುಲ್ತಾನನ್ನು ಕರೆದರು
ಸ್ವಾತಂತ್ರ್ಯ ಗಳಿಸುವ ಸಲುವಾಗಿ ಇವರು ಗಟ್ಟಿಯಾಗಿ ನಿಂತು ದುಡಿದವರು
ಭಾರತ ಕಂಡ ಇದು ಬಾರಿ ಬಾರಿ ಮಹಾತ್ಮರು ಜನಿಸಿದರು
ವೀರ ಪುರುಷರಂತೆ ವೀರ ಮಹಿಳೆಯರು ದೊರೆಯೊಳ ಕೀರ್ತಿ ॥

ಹಾಡಿದವರು: **ಗಂಗಮ್ಮ, ಕೊಪ್ಪಳ**

## ಗೀಗೀಪದ ಕಿತ್ತೂರ ರಾಣಿ ಕುರಿತು

ಗೀಯಗಾ ಗಾಗಿಯಗಾ ಗೀಯ ಗೀಯಗೀ
ಕನ್ನಡವಾಣಿ ಕಿತ್ತೂರ ರಾಣಿ
ಇನ್ನೊಮ್ಮೆ ಹುಟ್ಟಿ ನೀನಮ್ಮ
ಕಹಳಿ ನೀನಮ್ಮ ಗೀಯಗಾ ॥

ಮಲ್ಲಸರ್ಜದೊರಿಗೆ ಪ್ರೇಮದ ರಾಣಿನೀಗಾಗಿ
ಎಲ್ಲಾ ಪ್ರಜೆರಿಗೆ ಬಂದ ದುಗುಡ ನಿನೀಗಿ
ಸೊಲ್ಲು ಸೊಲ್ಲಿಗೆ ನೆನಿಯುವಂಗ ರಾಜ್ಯಭಾರವ ತೂಗಿ
ಸ್ವಾತಂತ್ರ್ಯ ಜ್ಯೋತಿಯಾದೆಮ್ಮ ಗೀಯಗಾ ॥

ನಾಡ ನುಡಿಗಾಗಿ ಹಂಗದೊರಿದು ಹೋರಾಡಿದಿಯಮ್ಮ
ಇಂಗ್ಲಿಷ ಫೌಜನ್ನ ಕಳಿಸಿದೆಮ್ಮ ಯಮಪುರಕ
ಮಂಗ ಮಸಡಿಯಾಂಗರಿಗೆ ಆಗಿ ಹುಲಿಯಾಗಿ
ಪರದೇಶಿ ಎಂಬ ದೈತ್ಯನ್ನು ಕಡದಿ ಮಾಂಕಾಳಿಗೀಯನಾ ॥

ಖೂಳ ಮಲ್ಲಪಶೆಟ್ಟಿ ಸಂಸ್ಥಾನಕ ದೊಡ್ಡ ಕೆಡಕ
ಅವನ ಪಿತೂರಿಯಿಂದಲಿ ರಾಣಿ ಕನಸ ಮುರದ ಬಿತ್ತ
ನನ್ನಮ್ಮ ರಾಣಿಯೆ ಮತ್ತೊಮ್ಮೆ ನೀ ಹುಟ್ಟಿಬಾರ
ಮತ್ತೊಮ್ಮೆ ಹುಟ್ಟಿ ನಿನ್ನ ದಯೆ ಶೌರ ತೋರಮ್ಮ ಗೀಯಗಾ ॥

ಗುರು ಶಾಂತಾನಂದರಿಗೆ ಶಿಷ್ಯಳಾಗಿ ಇದ್ದೆಮ್ಮ
ಮಲೆನಾಡ ಹುಲಿಯೆ ನೀನಮ್ಮ ಕಿತ್ತೂರ ಚೆನ್ನಮ್ಮ
ಇಷ್ಟಲಿಂಗ ಹಿಡಿದು ಕಣ್ಣೀರಧಾರೆ ಕರೆದಮ್ಮ
ಎದಿಗುದಿಯಲ್ಲಿ ನಿನ್ನ ಜೀವ ಸಣ್ಣದಾಯಿತಮ್ಮ ಗೀಯಗಾ ॥

ಇರು ಹೊಂಗಲ ಕಲ್ಮಠದಲ್ಲಿ ಆಗಿ ಬಯಲಾ
ಅಲಿ ಗದ್ದಿಗೆ ಕಟ್ಟಿದೆ ಪೂಜಿ ಮಾಡುವರು ದಿನದಿ
ಎಲ್ಲಾ ಕನ್ನಡಿಗರ ಹೃದಯವು ತುಂಬಿ ತುಳಿಕ್ಯಾಡಿ
ಮನತುಂಬಿ ನೆನದರ ಜೀವನವು ಪಾವನಾಯ್ತು ಗೀಯಗಾ ॥

ಹಾಡಿದವರು: **ಲಕ್ಷ್ಮವ್ವ ಆಡೂರು**

## ಗೀಗಿ ಪದ

ಎಂಥಾ ದೇಶವಿದು ಏನಾಗಿ ಹೋಯಿತು
ಎಲ್ಲಿ ನೋಡಿದರು ರಾಜಕೀಯ
ರಾಜಕೀಯದೊಳು ಎಲ್ಲಾ ಭಂಡರು
ಆಡುತರ ಬಲೂ ನಾಟಕೀಯ ॥

ಬಡವನ ಹೆಂಡ್ತಿ ಚೆಲುವಿಕಿ ನೋಡಿ
ಬಡ್ಡಿ ಸಾಲದ ಕೊಡತಾರ ನೆಪವ ಮಾಡಿ
ಮಾನದೋಚಿ ಮಜ ಮಡತಾರ ॥ ಪಲ್ಲವಿ ॥

ಬಡವನ ಹೆಂಡ್ತಿ ನೀ ಕಿತ್ತೂರು ಚನ್ನಮ್ಮ
ರಾಣಿಯಂಗ ಮೆರಿಬೇಕು
ಬ್ರಿಟಿಷ್‌ಕ್ಕಿಂತ ಮೆರೆವ ಶ್ರೀಮಂತರ
ಸರಕಾರನ್ನ ಅಡಗಿಸಬೇಕು ॥

ಹೇ ಕೆಂಪು ಬಾವುಟ ಕೈಯಲ್ಲಿ ಹಿಡಿದು
ಘೋಷಣೆ ಕೂಗುತ್ತ ನಡೆಬೇಕು
ಅನ್ಯಾಯದ ವಿರುದ್ಧ ಹೋರಾಟ ಮಾಡುತ್ತಾ ।

ನ್ಯಾಯ ಕೇಳುತ್ತಾ ನಡೆಬೇಕು
ಇಂದಿನ ಯುವಕರ ನಾವುಗಳೆಲ್ಲಾ
ನ್ಯಾಯ ಕೇಳುತ್ತ ನಡಿಬೇಕು ॥

**ಹಾಡಿದವರು: ಜೀವನಸಾಬ ವಾಲೀಕಾರ, ಬಿನ್ನಾಳ**

## ಸವಾಲ್ ಪದ

ಕೇಳಿ ದೈವಾ ದ್ಯಾಸಿಟ್ಟು ಕೇಳ್ರಿ
ಮಾಡದೆ ಗುಲ್ಲಾ
ಅಂದವಾದ ವಿಜಯ ಸಾಮ್ರಾಜ್ಯದ ಲೀಲಾ ।
ಹಿಂದೆ ಚಂದ್ರಗಿರಿ ಪಟ್ಟಣವೆಂಬುದು
ಇರುವುದು ನಿದಿರಾ ॥

ಅಂದು ಆಳುತ್ತಿದ್ದ ನರಸಿಂಹದೇವರಾಯ ಭೂಪಾಲಾ
ಮಹಾಮಂತ್ರಿ ತಿಮ್ಮರಸ ಇದ್ದನಲ್ಲಾ ।
ರಾಜನಿಗೆ ಇಬ್ಬರು ಸತಿಯೆ ಇದ್ದರಲ್ಲಾ
ಒಬ್ಬ ಸತಿಯೂ ದಾಸಿಯಾಗಿ ಕಳೆಯುತ ಕಾಲ ॥

ಹಿರಿ ಮಡದಿಗೆ ಒಬ್ಬೆ ಮಗನು ಹುಟ್ಟಿದನಲ್ಲಾ
ಶ್ರೀ ಕೃಷ್ಣದೇವರಾಯನ ಈ ಮಾತು ಸುಳ್ಳಲ್ಲ
ಸ್ವಾಮಿ ಶಿವನ ಕರುಣದಿಂದ ಬೆಳೆಯುತ್ತ ಬಾಲಾ ।
ರಾಮರಾಯ ಶ್ರೀರಂಗರಾಯ ಕೇಳ್ರಿ ಇನ್ನ ಮೇಲ
ಅಚ್ಚುತರಾಯ ಇವರು ಮೂವರು ಒಂದಿನ ಕಾಲ ॥

ಶ್ರೀಕೃಷ್ಣದೇವರಾಯಗೆ ಇವರು ಮೂಲ
ದಾಸಿ ಮಗನು ಇವನು ನಮಗೆ ಸರಿಯಲ್ಲ
ನಮ್ಮ ಮಗನು ಇವನು ನಮಗೆ ಸರಿಯಲ್ಲ ।
ನಮ್ಮ ರಾಜ್ಯದೊಳಗ ಭಾಗ ಸಿಗಬಾರದಲ್ಲ
ಮೂರು ಮಂದಿ ಕೂಡಿ ಒಂದಿನ ತೆಗೆದರು ಒಂದೇ ಅಕಲಾ ॥

ಅಡವಿಗೆ ಒಯ್ದು ಶ್ರೀಕೃಷ್ಣದೇವರ ಕಣ್ಣು ಕೀಳ್ಬೇಕಲ್ಲಾ
ಹಿಂಗೆ ಕಠಿಣಾ ಆಜ್ಞೆ ಮಾಡ್ಯಾರ ಈ ಮಾತು ಸುಳ್ಳಲ್ಲ ।
ಮಹಾಮಂತ್ರಿ ಶ್ರೀ ಕೃಷ್ಣದೇವರಾಯ ಕರಕೊಂಡು ಹಿಂಬಾಲಾ
ಹೋಗು ಹೋಗುತ ಮಹಾಮಂತ್ರಿ ತೆಗೆದನೊಂದು ಅಕಲಾ ॥

ಅಡುವೆ ಅರಣ್ಯದ ಹಡಿದಳೋ ತೋಡಿ ತೋಳೆಲಾಕ ನೀರಿಲ್ಲ
ತೋಡಿ ತೊಳಲಾಕ ಆಗ ಬಂದ ಬಾಲಯಿಲ್ಲದ ಹನುಮಂತ
ಬಂದು ತಿರುಗದನೊ ।
ಕೆಂಪು ಒತ್ತಿಗೆ ಬಂದು ಕಳಕೊಂಡ ಕಣ್ಣುವನ್ನು
ಹನುಮಂತನಿಗೆ ಉತ್ತುತ್ತಿ ಬಣ್ಣದ ತೆಂಗಿನ ಎಡಗೈಯಾಗ
ಎಡಪತಿರಾತಿ ಬಲ ಭೀಮನ ಹತ್ತಿರ ಬರುತ್ತಾಳೋ ॥

ಅಡಿಕೆ ಹೂವಿನ ಸೀರಿ ಉಟುಕೊಂಡು ಕೈತುಂಬ ಸಕ್ಕರೆ
ಹಿಡಿಕೊಂಡು ಹೋಗ್ಯಾಳೊ ।
ಕೈತುಂಬ ಸಕ್ಕರೆ ಹಿಡಿದುಕೊಂಡು ಯಮನೂರ ದರಗಾಕ್ಕೆ ಹೋಗ್ಯಾಳೊ ॥

ಏರಿಯ ಅಂಚಿಗೆ ಕರಿಯ ಮುಳ್ಳು ಯಮನೂರು ಆರತಿ
ಕುದುರಿ ಮಾಡಿ ಕೈ ಮುಗಿರವ್ವ ।
ಅಕ್ಕಿ ಗೋಧಿ ಸಕ್ಕರೆ ಬಾಳೆಹಣ್ಣು ಚಿಕ್ಕ ಯಮನೂರ ಕೇರಿಯಾಗ
ಯಮನೂರ ಕೇರಿ ಹೇಳಿಸಿದಯಾಗ ಮರೆಯಾಲೆ
ಕರಿಕೆ ಚಿಕ್ಕ ಯಮನೂರ ಮತಡಿದ ಎಚ್ಚರ ಇಲ್ಲದ ಮರಿಮಗ
ಏರಿಯ ಎಳೆಯ ಸೋತ ಕಾಮ ಹರಿಯಲು ಎಂದು ಮರೆಯಾಲೆನ ॥

ಕಾಮದ ಚಲುವ ಹೂವ ಹುಡಿಕಿದರೂ ಇಲ್ಲ
ಭೂಲೋಕ ಹುಡಿಕಿದರೂ ಇಲ್ಲ ।
ಪರರೀತಕ್ಕೆ ಪ್ರಾಣ ಕೊಟ್ಟನ್ನು ನಮ್ಮ ಕಾಮಣ್ಣ
ಸತ್ಯವಂತ ಭೀಮ ಬೋರಾಡಿ ಆಳುತ್ತನೊ
ಕಾಮನಿಗೆ ಕುರಳನ್ನು ಕೊಡುರವ್ವ ॥

ಕಾಮ ಕುರಳನ್ನು ಅವ್ವ ಅಕ್ಕಗಳಿಗೆ ಕಾಮಣ್ಣ ಕಿಚ್ಚು ಕೊಡರವ್ವ
ಅರಿಯದ ಕಂಡೆ ಉರಿಯಾದಕಂಡೆ ।
ಬೈಯಲ ಬೊಳ್ಳುಳ್ಳಿ ಉಳಿದಾಡಿ ಕಂಡೆ ಕಾಮಣ್ಣ ॥

ವಿದ್ಯಾರಣ್ಯ ಗುರುಗಳ ಹತ್ತಿರ ಹೋಗಿ ಬಿಟ್ಟನಲ್ಲ
ಕುರಿಯ ಕಣ್ಣುಕಿತ್ತಿ ರಾಜರಿಗೆ ತೋರಿದ ಕಣ್ಗಳ ।
ಖಡ್ಗದ ಮೂರು ಮಂದಿ ಕಣ್ಣುಗಳ ನೋಡಿ ಅದರು ಖುಷಿಯ ॥

ಮೂರಹರಣ ದಯಾದಿಂದ ಅಲ್ಲಿ ಬೆಳೆಯುತ ಬಾಲ
ವಿದ್ಯಾರಣ್ಯ ಗುರುಗಳು ವಿದ್ಯಾಬುದ್ಧಿ ಕಲಿಸ್ವರಲ್ಲಾ ।
ಹೊನ್ನಿನ ಮಳೆ ಸುರದಿತ್ತು ಶಿವನ ಕರುಣವಿದ್ದಿತಲ್ಲಾ

ಹೀಗೆ ನಮ್ಮ ದೌಲತ್ತುಪುರದ ಕವಿಗಳು ಎಲ್ಲ
ದೈವ ದ್ಯಾಸಿಟ್ಟು ಮಾಡದೆ ಗುಲ್ಲ. । ।

ಹಾಡಿದವರು: ರಾಮಚಂದ್ರಪ್ಪ, ಆನೆಗೊಂದಿ

## ಅಂಬಾಸ್ತುತಿ ಹಾಡುವ ಪದ

ಅಂಬಾ ನಿನ್ನ ಸ್ಮರಣೆಯ ನಾನು
ದೇವಿ ನಿನ್ನ ಸ್ಮರಣೆಯ ನಾನು
ಮರೆಯಲಾರೆನ ದೇವಿ ಮರೆಯಲಾರೆನು ॥

ಖಡಗದಿಂದ ಕ್ವಾಣನ ಶಿರವು
ಹರಣ ಮಾಡಿದಾಳ ದೇವಿ
ಅಂಬಿ ನಿನ್ನ ಸ್ಮರಣೆಯ ನಾನು ॥

ಎಂಟು ಭುಜ ಹತ್ತು ಕೈಯಾ
ಮಕುಟಾನ ಚೆಂದ ದೇವಿ
ಅಂಬಿ ನಿನ್ನ ಸ್ಮರಣೆಯ ನಾನು ॥

ಕಲ್ಲು ಗುಡಿಯ ಕಟ್ಟಿದೇವಿ
ಕೊರಳದಲ್ಲಿ ಇರುವುವಾಕೆ
ಅಂಬಿ ನಿನ್ನ ಸ್ಮರಣೆಯ ನಾನು ॥

ದೇಶಕ್ಕ ದಿಕ್ಕವಾದ
ವಾನುಳ್ಳ ಶಿಶುನಾಳ
ಅಂಬಿ ನಿನ್ನ ಸ್ಮರಣೆಯ ನಾನು ॥

ಎಲ್ಲರ ಅಮ್ಮನಾಗಿ
ಎಲ್ಲಮ್ಮ ನೀನಮ್ಮ
ಅಂಬಿ ನಿನ್ನ ಸ್ಮರಣೆಯ ನಾನು ॥

ಹಾಡಿದವರು: ಈರಪ್ಪ ಚಿಕ್ಕಸಿಂದೋಗಿ

## ಮನೆಯಿಂದ ಭಿಕ್ಷೆ ಬಂದ ಬಳಿಕ ಹರಕೆಯ ಕುರಿತು ಗೊಂದಲಿಗರ ಹಾಡುವ ಪದ

ಅಂಬಾ ಮಾನಸ
ತಾಯಿ ಮಾನಸ

ಅಂಬಾ ಸಲವ ಭಕ್ತರನ
ತಾಯಿ ಸಲವ ಭಕ್ತರನ ॥

ಅಂಬಾದೇವಿ ಬಲಮಾಡ ಭಕ್ತರನ
ಅಂಬಾದೇವಿ ಬಲಮಾಡ ದೇವಿ
ತೂಗು ತೊಟ್ಟಿಲ ಕೊಡ ದೇವಿ
ಆಡು ಮಕ್ಕಳ ಕೊಡ ದೇವಿ ॥

ಬಂಗಾರ ಬಟ್ಟಲ ನೀಡ
ಬೆಳ್ಳಿ ತಾಟ ಕೊಡ
ಭಕ್ತರ ಸುಖಾ ನೀಡ
ನೀಡ ಅಂಬಾ ಜಗದಂಬಾ ॥

**ಹಾಡಿದವರು: ತಿಪ್ಪಣ್ಣ ಅಂಬಜಿ, ತಾವರಗೆರೆ**

### ಅಂಬಾಸ್ತುತಿ ಹಾಡುವ ಪದ

ಅಂಬಾ ನಿನ್ನ ಸ್ಮರಣೆಯ ನಾನು
ದೇವಿ ನಿನ್ನ ಸ್ಮರಣೆಯ ನಾನು
ಮರೆಯಲಾರೆನ ದೇವಿ ಮರೆಯಲಾರೆನು

ಖಡಗದಿಂದ ಕ್ವಾಣನ ಶಿರವು
ಹರಣ ಮಾಡಿದಾಳ ದೇವಿ
ಅಂಬಿ ನಿನ್ನ ಸ್ಮರಣೆಯ ನಾನು

ಎಂಟು ಭುಜ ಹತ್ತು ಕೈಯಾ
ಮಕುಟಾನ ಚೆಂದ ದೇವಿ
ಅಂಬಿ ನಿನ್ನ ಸ್ಮರಣೆಯ ನಾನು

ಕಲ್ಲು ಗುಡಿಯ ಕಟ್ಟಿದೇವಿ
ಕೊರಳದಲ್ಲಿ ಇರುವುವಾಕೆ
ಅಂಬಿ ನಿನ್ನ ಸ್ಮರಣೆಯ ನಾನು

ದೇಶಕ್ಕ ದಿಕ್ಕವಾದ
ವಾನುಳ್ಳ ಶಿಶುನಾಳ
ಅಂಬಿ ನಿನ್ನ ಸ್ಮರಣೆಯ ನಾನು

ಎಲ್ಲರ ಅಮ್ಮನಾಗಿ
ಎಲ್ಲಮ್ಮ ನೀನಮ್ಮ
ಅಂಬಿ ನಿನ್ನ ಸ್ಮರಣೆಯ ನಾನು

**ಹಾಡಿದವರು: ಈರಪ್ಪ ಚಿಕ್ಕ ಸಿಂದೋಗಿ**

## ಸೋಬಾನ ಪದ-೧

ಹಂದರ ಒಂದು ಸಾಕಿ ಹಂದರದ ತಳಿ ಸಾಕಿ
ಹಂದರದಾಗಿ ಇರುವ ಶರಣ ಸಾಕಿ
ಸೋ ಎನ್ನಿರಿ ಸೋಬಾನ ಎನ್ನಿರಿ ||
ಸೋ ಎನ್ನಿರಿ ಸೋಬಾನ ಎನ್ನಿರಿ ||

ಮದುವೆಯ ಮುಂಗಾರ ಒಟ್ಟುಗಿ
ಮುಗಿದವು ವಧುವನ್ನು ಒಪ್ಪಿಸಿದರೋ
ಸೋ ಎನ್ನಿರಿ ಸೋಬಾನ ಎನ್ನಿರಿ ||
ಸೋ ಎನ್ನಿರಿ ಸೋಬಾನ ಎನ್ನಿರಿ ||

ಹಂದರದಾಗ ಇರುವ ಗಣಪತಿಯೆ
ನೀನು ಬರೋ ಇದು ನಮ್ಮ ಮಗಳು ಕೊಡುತ್ತಿರಿ
ಸೋ ಎನ್ನಿರಿ ಸೋಬಾನ ಎನ್ನಿರಿ ||

ಕುಂಬಾರ ಕೈಯೊಳಗೆ ಕೊಡಗಾಲು ಕೊಟ್ಟತ್ತೆ
ನಮ್ಮ ಮಗಳು ಕೊಡುತ್ತಿರಿ
ಸೋ ಎನ್ನಿರಿ ಸೋಬಾನ ಎನ್ನಿರಿ ||

**ಹಾಡಿದವರು: ಬಸಮ್ಮ, ಕೊಪ್ಪಳ**

## ಬೀಸುವ ಕುಟ್ಟುವ ಪದ-೧

ಬಿಳಿಜೋಳ ನಿನಾವ್ವ ಬೀಸಕ ಕುತ್ತಿವಿ ಬಿಳಿಜೋಳವು ನೀಡ
ಬಂಗಾರದಗೋಳ ಬೀಸಕ ಕುತ್ತಿವಿ ಬಿಳಿಜೋಳವು ನೀಡ
ಬೀಸನವ ಬಾ ಗೆಳತಿ ಬಿಳಜೋಳವು ನೀಡವ್ವ
ಬೀಸಕ ಕುತ್ತಿವಿ ಬಿಳಜೋಳವು ನೀಡ ||

ಕಿತ್ತೂರ ಪರಕೀಯ ಮೇಲೆ ಹೋರಾಡಿದವರ್‍ಯಾರು
ಅಣ್ಣ ತಮ್ಮರು ರಾಯಣ್ಣನ ಗೋಳ
ಬಂಗಾರದ ಗೋಳ ಬೀಸಕ ಕುತ್ತಿವಿ ಬಿಳಿಜೋಳವು ನೀಡ ||

ಮೈಸೂರು ದೇವರು ಮಂಗಳೂರು ಗುಡ್ಡದಗ
ಒಬ್ಬಿದ ಹೋರಾಡಿದ ಹುಲಿಗಳು ನೀವು
ಬೀಸಕ ಬಾ ಗೆಳತಿ ಬಿಳ ಜೋಳವು ನೀಡವ್ವ ॥

ಕಿತ್ತೂರ ಚೆನ್ನಮ್ಮ, ಬೆಳವಾಡಿ ಮಲ್ಲಮ್ಮ ಆಕಿಯ ಹಿಡಿದವ್ವ
ರಾಯಣ್ಣನ ಮೇಲೆ ಬಂಗಾರದ ಗೋಳರಾಯಣ್ಣನ ಮೇಲೆ
ಬೀಸಕ ಕುತ್ತಿವಿ ಬಿಳಜೋಳವು ನೀಡ
ಬಂಗಾರದ ಗೋಳ ಬೀಸಕ ಕುತ್ತಿವಿ ಬಿಳಿಜೋಳವು ನೀಡ ॥

**ಹಾಡಿದವರು: ಬಸಮ್ಮ, ಕುಕನೂರು**

## ಬೀಸುವ ಕಲ್ಲು ಪದ

ಕುಂಬಾರ ನನ್ನ ಬೀಸಕಲ್ಲು ದೇಶವೊಂದು ತಿರುಗುವರು
ಹಾಡು ಹಾಡುತ್ತಲೆ ಪ್ರೇಮದಿಂದ ಬಾರೋ ಅಣ್ಣ ಬಸವಣ್ಣ
ಹಾಡು ಹಾಡುತ್ತಲೆ ಪ್ರೇಮದಿಂದ ಬಾರೋ ಅಣ್ಣ ಬಸವಣ್ಣ ॥

ಹದಿನೆಂಟು ವೈದರೂ ಅಸೊವ್ವ ಎಲೆತಂದು
ಮುತ್ತೈದುತನ ತಣ್ಣಗಿರಲಿ ಬಾರೋ ಅಣ್ಣ ಬಸವಣ್ಣ
ಮುತ್ತೈದುತನ ತಣ್ಣಗಿರಲಿ ಬಾರೋ ಅಣ್ಣ ಬಸವಣ್ಣ ॥

ಪಾಪದಕಲ್ಲು ತಿರುಗುವುದು ಪುಣ್ಯದ ಕೈ ಹಿಡಿಯುತ್ತ
ಪಾಪವನ್ನು ಹೆಚ್ಚಾಗ್ಯಾವ ಬಾರೋ ಅಣ್ಣ ಬಸವಣ್ಣ
ಪಾಪವನ್ನು ಹೆಚ್ಚಾಗ್ಯಾವ ಬಾರೋ ಅಣ್ಣ ಬಸವಣ್ಣ ॥

ಅತ್ತೆ ಮಾವ ಮೈದಾನರು ಮೂರನೆಯದವರು ಮಾವರು
ನಾಲ್ಕನೆದವರು ಪತಿ ದೇವರು ಬಾರೋ ಅಣ್ಣ ಬಸವಣ್ಣ ॥

ಸುಂದರ ನನ್ನ ಬೀಸಕಲ್ಲು ಸುತ್ತೊಂದು ತಿರುಗುವದು
ಹಾಡು ಹಾಡುತ್ತಲೆ ಪ್ರೇಮದಿಂದ ಬಾರೋ ಅಣ್ಣ ಬಸವಣ್ಣ
ಹಾಡು ಹಾಡುತ್ತಲೆ ಪ್ರೇಮದಿಂದ ಬಾರೋ ಅಣ್ಣ ಬಸವಣ್ಣ ॥

**ಹಾಡಿದವರು: ಲಲಿತಮ್ಮ ಪೂಜಾರಿ, ಕೊಪ್ಪಳ**

## ಜೋಗುಳ ಪದ

ಬಂಗಾರ ತೊಟ್ಟಿಲು ಬೆಳ್ಳಿಯ ಕರ್ಪೂರ
ತಿಂಗಳದ ಶ್ರೀಕೃಷ್ಣನ ಚಂದಾಗಿ ತೂಗಾರೆ ಜೋ ಜೋ ॥

ಅಸರಂಗಿ ಆಲಗಡಗ ಹೆಸರಾನ ಕರ ಬಡಗಿ
ತಿಂಗಳದ ಶ್ರೀಕೃಷ್ಣನ ಚಂದಾಗಿ ಹಾಕಾರೆ ಜೋ ಜೋ ॥

ಕುಂತಲ್ಲೆ ಕುಲಾಯ ಗೊಂಚಲ ಬೆಳ್ಳಿ ಮುತ್ತು
ತಿಂಗಳದ ಶ್ರೀಕೃಷ್ಣನ ಚಂದಾಗಿ ಸಾಕತಾರೆ ಜೋ ಜೋ ॥

ಸಣ್ಣ ಕೇಶವಗೆ ಚೆನ್ನಾಯ ಕರ್ಪೂರ
ನಡೆಕೊಂಡು ಹೋಗಂದ್ರೆ ಪಾಡಿ ಪಾಡಿ ಅಳುತಾನ್ರಿ ಜೋ ಜೋ ॥

ಕರ್ಪೂರ ಪೊಲೀಸ ಬರಿದ ಬಟ್ಟಲ ತಂದಿ
ತುತಮಾಡಿ ಉಣಿಸಿದರೆ ಹಠಮಾರಿ ಉಣಿಸಿದರೆ ಅಳುತಾನ್ರಿ ಜೋ ಜೋ ॥

ನೀರದ ವರ ಹುಟ್ಟಿ ಸೂರ್ಯ ಚಂದ್ರನಂಗ
ಅದರಂತೆ ತಾನಾಡಿ ಬೋರಾಡಿ ಅಳುತಾನ್ರಿ ಜೋ ಜೋ ॥

**ಹಾಡಿದವರು: ಅಡಿವೆಮ್ಮ ತಂಡದವರಿಂದ, ವಿದ್ಯಾನಗರ**

## ಸೋಬಾನ ಪದ

ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ
ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ
ಬಂಜಾರ ಮನೆಯ ಮುಂದೆ ಆಗೊರಿಗಿಡ ಹುಟ್ಟಿ
ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ
ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ ॥

ಬಂಜಾರ ಬದುಕು ಯಾರವರಿಗೆ ಸೋಬಾನವೆ
ಬಂಜಾರಿ ಮನೆಯೊಳಗೆ ಮಂಗಳ ಒಳಕಲ್ಲು
ಬಂದು ಕುಟ್ಟಕ್ಕೆ ಸೊಸೆ ನೀನಿಲ್ಲೆ ಸೋಬಾನವೆ
ಹೆಣ್ಣಿನ ಹಣೆ ಮೇಲೆ ಕುಂಕುಮ ಬೆವರ ಹುಟ್ಟಿ
ತಪ್ಪಿಗೆ ಮಗನದಾಯ ಮಾಡು ಸೋಬಾನವೆ ॥

ಮಣ್ಣಿನ ಮೇಲೆ ಮರ ವೃತ್ತಿ ಸೋಬಾನವೆ
ಮಣ್ಣಿನ ಮೇಲೆ ಮರಹುಟ್ಟಿ ಬೆಳೆದರೆ
ಬಂದು ಎಲ್ಲ ಜನಕ್ಕೆ ನೆರಳಾವತ್ತಿ ಸೋಬಾನವೆ
ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ
ಟೋಗೆ ಟೋಗೆ ಎಲ್ಲ ಗಿಳಿ ಕುಳಿತೆ ಸೋಬಾನವೆ ॥

**ಹಾಡಿದವರು: ನೀಲಮ್ಮ ಸಂಗಡಿಗರು, ಕೊಪ್ಪಳ**

## ಹುಲಿಗೆಮ್ಮನ ಅಲಂಕಾರ ಕುರಿತು ಹಾಡು

ಅಮ್ಮ ನಿನ್ನ ದೈವತಕ್ಕಿಂತ
ಏನು ಆತಂಕಕಿಲ್ಲಮ್ಮ
ಬೇರೇನೂ ಅಂಜಿಕಿಲ್ಲಮ್ಮ ।

ಹುಣಿಯಾಗಿನ ಉಬ್ಬ ತೆಗೆದು
ಒತ್ತಿ ಮಾಡಿದೆ ನೀನಮ್ಮ ಅದನು
ಹಣೆಯೊಳಗ ಧರಿಸಿದೆಯಮ್ಮ ।

ತಲೆಯಾಗಿನ ಪರಟಿ ತೆಗೆದು
ಪಡಲಿಗೆ ಮಾಡಿದೆ ನೀನಮ್ಮ
ಅದನು ತಲೆಯೊಳನ ಧರಿಸಿದೆಯಮ್ಮ ।

ಕಣ್ಣಾಗಿನ ಅಲೆಯ ತೆಗೆದು
ರುದ್ರಾಕ್ಷಿ ಮಾಡಿದೆ ನೀನಮ್ಮ ಅದನು
ಕೊಳ್ಳಾಗ ಧರಿಸಿದೆಯಮ್ಮ ।

ಬಾಯಾಗಿನ ಹಲ್ಲನು ತೆಗೆದು
ಕವಡಿಯ ಮಾಡಿದೆ ನೀನಮ್ಮ
ಅದನ್ನು ಜೋಗ್ತಿಗೆ ಹಾಕಿದೆಯಮ್ಮ ।

ಬಾಯೊಳಗಿನ ನಾಲಿಗೆ ತೆಗೆದು
ಕೆರವನು ಮಾಡಿದೆ ನೀನಮ್ಮ ಅದನು
ಕಾಲಾಗೆ ಮಟ್ಟಿಕೊಂಡೆಮ್ಮ ।

ಮೈಯಾಗಿನ ತೊಗಲು ತೆಗೆದು
ಸುಲೆಗಳ ಬಿಡಿಸಿದ ನೀನಮ್ಮ
ಅವನ್ನು ಚೌಡಿಕೆಗೆ ಬಿಗಿಸಿದೆಯಮ್ಮ ।

ಕೈಯೊಳಗಿನ ಬೆರಳ ತೆಗೆದು
ಕೋಲನು ಮಾಡಿದೆ ನೀನಮ್ಮ
ಅದನ್ನು ದೋಲಕ ಬಾರಿಸಿದೆಯಮ್ಮ ।

ಹೊಟ್ಯಾಗಿನ ಕಳ್ಳಾ ತೆಗೆದು
ತಂತಿಯ ಮಾಡಿದೆ ನೀನಮ್ಮ
ಅದನ್ನು ಚೌಡಿಕೆ ಬಿಗಿದೆಯಮ್ಮ ।

**ಹಾಡಿದವರು: ಹಂದ್ರಾಳ ಎಲ್ಲವ್ವ, ಅಮರಾವತಿ, ಹೊಸಪೇಟೆ**

## ಪುಟ್ಟ ಹಾಡು

ಚೌಡಿಕೆಯ ನಾದಕ್ಕ
ಹೆಜ್ಜೆಯ ಕುಣುಕ್ಕ
ಕುಣದಾವ ದಾರಿಕೇರಿ
ಬೆಳಕಿನಾಂಗ ಬರತಾಳ
ನೋಡ ಹುಲಿಗೆವ್ವ ॥

ಜೋಗಮ್ಮಗ ವಲ್ಲ ಚಂದ
ಎಲ್ಲೇಗೆ ಚೌಡಕಿ ಚಂದ
ಚೌಡಕಿಗಿ ದೇವಿಯ ಪದ ಚಂದ
ದೇವಿ ಪದಕ ಜೋಗಮ್ಮ ಚಂದ ॥

ಎಲ್ಲವ್ವ ಅನುವಾಕೆ ದಲ್ಲಾಳಗಿತ್ತೆವ್ವ
ಎಲ್ಲರಿಗೆ ಜೀವ ಬಡಿಸ್ಯಾಳ
ಗಂಡಸರಿಗೆ ಸಾಗಿ ಗುಡ್ಡಕ ನಡಿಸ್ಯಾಳ
ಹಣೆಗೆ ಭಂಡಾರ ಧರಿಸ್ಯಾಳ ಎಲ್ಲವ್ವ
ಕುಂಕುಮಬೊಟ್ಟು ಇಡಸ್ಯಾಳ ತಾಯವ್ವ ॥

ಚಂದುಳ್ಳ ಕೊಡವ ಹೊರಸ್ಯಾಳ
ಜಗದಂಬೆ ನೋಡ್ರಿ ಹೆಚ್ಚಿನಾಕೆ
ಹೆಣ್ಣು ಗಂಡು ಬತ್ತಲೆ ಮಾಡಿದಾಕಿ
ದ್ಯವಾಳ ಬಡವನಳದಾಕಿ
ಸಿದ್ದರಿಗೆ ಧಕ್ಕಿ ಹೊಡೆದಾಕಿ ॥

**ಹಾಡಿದವರು: ಸೋಮು, ಹುಲಿಗಿಕ್ಷೇತ್ರ, ಹುಲಿಗಿ**

## ಮಕ್ಕಳ ಹಾಡು

ಹುಯ್ಯೋ ಹುಯ್ಯೋ ಮಳೆರಾಯ
ಹೂವಿನ ತ್ವಾಟಕೆ ನೀರಿಲ್ಲ
ಬಾರೋ ಬಾರೋ ಮಳೆರಾಯ
ಬಾಳೆ ತ್ವಾಟಕ ನೀರಿಲ್ಲ ॥

ಚುಚ್ಚೋ ಚುಚ್ಚೋ ಮಳೆರಾಯ
ಪಚ್ಚೆ ಪಯಿರಿಗೆ ನೀರಿಲ್ಲ
ಕೊಚ್ಚೋ ಕೊಚ್ಚೋ ಮಳೆರಾಯ
ಕುಡಿಯೋ ಬಾವಿಗೆ ನೀರಿಲ್ಲ ॥

**ಹಾಡಿದವರು: ದೇವರಾಜ, ವಿದ್ಯಾನಗರ**

□□

# ೩. ಪರಾಮರ್ಶನ ಗ್ರಂಥಗಳು


೧. ಅಂಗಡಿ ಎಸ್.ಎಸ್., ೨೦೦೮, **ಜನಪದ ಸಾಹಿತ್ಯ ಭಾಷೆ,** ವಿಕಾಸ ಪ್ರಕಾಶ, ಹೊಸಪೇಟೆ.

೨. ಅಂಗಡಿ ಎಸ್.ಎಸ್.(ಸಂ)., ೧೯೯೭, **ಹಂತಿ ಪಂತಿ ಪದಗಳು,** ವಿದ್ಯಾನಿಧಿ ಪ್ರಕಾಶನ, ಗದಗ.

೩. ಅರವಿಂದ ಮಾಲಗತ್ತಿ, ೨೦೦೪, **ಜಾನಪದ ಅಭಿಯಾನ,** ರಾಜ್ ಪ್ರಕಾಶನ, ಮೈಸೂರು.

೪. ಅರುಣ ಜೋಳದಕೂಡ್ಲಿಗಿ, ೨೦೧೨, **ಕನ್ನಡ ಜಾನಪದ ಅಧ್ಯಯನದ ತಾತ್ವಿಕ ನೆಲೆಗಳು,** ರೂಪ ಪ್ರಕಾಶನ, ಮೈಸೂರು.

೫. ಅಲ್ಲಮಪ್ರಭು ಬೆಟ್ಟದೂರು, ಪಾಟೀಲ ಎಚ್.ಎಸ್.(ಸಂ)., ೨೦೦೫, **ಕೊಪ್ಪಳ ಜಿಲ್ಲಾ ದರ್ಶನ,** ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೬. ಅಲ್ಲೀಭಾಯಿ ದಸ್ತಗೀರಿ, ೧೯೯೯, **ಮೊಹರಂ ಪದಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು.

೭. ಇಮ್ರಾಪುರ ಎಸ್.ಜಿ.(ಸಂ), ೧೯೯೨, **ಜಾನಪದ ಸಾಹಿತ್ಯ ದರ್ಶನ, ತೊಗಲುಗೊಂಬೆಯಾಟ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮. ಕಲಬುರ್ಗಿ ಎಂ.ಎಂ., ೧೯೮೮, **ಮಾರ್ಗ ಸಂಪುಟ-೧-೨,** ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು.

೯. ಕಲಬುರ್ಗಿ ಎಂ.ಎಂ., ೨೦೦೮, **ಪರಿಕಲ್ಪನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೦. ಕರೀಂಖಾನ್ ಎಸ್.ಕೆ., ೧೯೯೬, **ಕನ್ನಡ ಜನಪದ ಗೀತೆಗಳು,** ಪುಸ್ತಕಾಲಯ ಪ್ರಕಾಶನ, ಬೆಂಗಳೂರು.

೧೧. ಕೃಷ್ಣವೇಣಿ ಆರ್., ೨೦೦೮, **ಹುಲಿಗೆಮ್ಮ,** ಅಂಬಾರಿ ಪ್ರಕಾಶನ, ಬೆಂಗಳೂರು.

೧೨. ಕಾಳೇಗೌಡ ನಾಗವಾರ, ೧೯೭೫, **ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ,** ಸಪ್ನ ಬುಕ್‌ಹೌಸ್, ಬೆಂಗಳೂರು.

೧೩. ಕ್ಯಾತನಹಳ್ಳಿ ರಾಮಣ್ಣ(ಸಂ)., ೧೯೭೬, **ಬೀದರ ಜಿಲ್ಲೆಯ ಜನಪದ ಗೀತೆಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪. ಕ್ಯಾತನಹಳ್ಳಿ ರಾಮಣ್ಣ, ೨೦೦೬, **ಜಾನಪದ ಕ್ಷೇತ್ರಕಾರ್ಯದ ಹಾದಿಯಲ್ಲಿ,** ಚೇತನ ಬುಕ್‌ಹೌಸ್, ಮೈಸೂರು.

೧೫. ಕೇಶವಭಟ್ಟ ಟಿ., ೨೦೦೫, **ದಕ್ಷಿಣ ಕನ್ನಡ ಜಿಲ್ಲೆಯ ಸಮಗ್ರ ಜನಪದ ಗೀತೆಗಳು,** ವರ್ಷ ಎಂಟರ್ ಪ್ರೈಸಸ್, ಬೆಂಗಳೂರು.

೧೬. ಗದ್ದಗಿಮಠ ಬಿ.ಎಸ್., ೧೯೮೬, **ಕನ್ನಡ ಜಾನಪದ ಗೀತೆಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೭. ಗದ್ದಗಿಮಠ ಬಿ.ಎಸ್., ೧೯೮೮, **ಗದ್ದಗಿಮಠದ ಬರಹಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಗವಿಸಿದ್ದಪ್ಪ ಎಚ್. ಪಾಟೀಲ., ೨೦೦೫, **ಸಾಹಿತ್ಯ ಸಂಕಥನ,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೧೯. ಗಾಯತ್ರಿ ನಾವಡ., ೧೯೯೯, **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು,** ಸಿರಿ ಪ್ರಕಾಶನ, ಹೊಸಪೇಟೆ.

೨೦. ಗೀತ ಬಿ.ವಿ., ೨೦೦೯, **ತುಂಗೆ ಮಡಿಲ ಜನಪದ,** ಸಿರಿವರ ಪ್ರಕಾಶನ, ಬೆಂಗಳೂರು.

೨೧. ಗೊರೂರು ರಾಮಸ್ವಾಮಿ ಐಯ್ಯಂಗಾರ್., ೧೯೯೯, **ಹಳ್ಳಿಯ ಬಾಳು,** ಕಾವ್ಯಾಲಯ ಪ್ರಕಾಶನ, ಜಯನಗರ, ಮೈಸೂರು.

೨೨. ಚಕ್ಕೆರೆ ಶಿವಶಂಕರ್., ೨೦೦೬, **ಕನ್ನಡ ಜನಪದ ಕಲಾ ಪ್ರವೇಶ,** ಸಾಗರ ಪ್ರಕಾಶನ, ಬೆಂಗಳೂರು.

೨೩. ಚನ್ನಬಸಪ್ಪ, ೨೦೦೨, **ಜನದನಿ,** ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

೨೪. ಚಿಕ್ಕಣ್ಣ ಯಣ್ಣೆಕಟ್ಟೆ., ೨೦೦೧, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ.

೨೫. ಚಿದಾನಂದಮೂರ್ತಿ ಎಂ., ೨೦೦೨, **ಜನ-ಜನಪದ-ಜಾನಪದ,** ಸಪ್ನ ಬುಕ್‌ಹೌಸ್, ಬೆಂಗಳೂರು.

೨೬. ಚೆನ್ನಣ್ಣ ವಾಲೀಕಾರ(ಸಂ)., ೧೯೮೩, **ಗುಲಬರ್ಗಾ ಜಿಲ್ಲೆಯ ಮೊಹರಂ ಪದಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೭. ಚೆನ್ನಣ್ಣ ವಾಲೀಕಾರ, ೧೯೯೧, **ಒಂದು ಗ್ರಾಮದ ಜಾನಪದೀಯ ಅಧ್ಯಯನ,** ಅಕ್ಷರ ಪ್ರಕಾಶನ, ಸಾಗರ.

೨೮. ಚೆನ್ನಣ್ಣ ವಾಲೀಕಾರ, ೧೯೯೮, **ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ,** ವಾಲೀಕಾರ ವಿರಸಂದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ.

೨೯. ಚೆನ್ನಬಸವ ಹಿರೇಮಠ(ಸಂ), ೧೯೯೯, **ರಾಯಚೂರು–ಕೊಪ್ಪಳ ಜಿಲ್ಲೆಯ ಶಾಸನಗಳು,** ಚೇತನ ಪ್ರಕಾಶನ, ರಾಯಚೂರು.

೩೦. ಜವರೇಗೌಡ ದೇ., ೨೦೦೧, **ಜಾನಪದ ಅಧ್ಯಯನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೧. ತಪಸ್ವೀಕುಮಾರ ನಂ., ೧೯೮೧, **ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೨. ತಪಸ್ವೀಕುಮಾರ ನಂ., ೧೯೮೩, **ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೩. ತಿಪ್ಪೇಸ್ವಾಮಿ ಜಿ.ಆರ್., ೨೦೦೫, **ಮೌಖಿಕ ಕಥನ,** ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು.

೩೪. ದೇವರಕೊಂಡಾರೆಡ್ಡಿ(ಸಂ)., ೧೯೯೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ನಲ್ಲೂರು ಪ್ರಸಾದ್., ೧೯೯೮, **ಜಾನಪದ ಭಾರತಿ,** ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೩೬. ನಾಗರಾಜ ಡಿ.ಆರ್., ೧೯೮೭, **ಶಕ್ತಿ ಶಾರದೆಯ ಮೇಳ,** ಅಕ್ಷರ ಪ್ರಕಾಶನ, ಹೆಗ್ಗೋಡು.

೩೭. ನಾಗರಾಜ ಡಿ.ಆರ್., ೧೯೯೬, **ಸಾಹಿತ್ಯ ಕಥನ,** ಅಕ್ಷರ ಪ್ರಕಾಶನ, ಹೆಗ್ಗೋಡು.

೩೮. ನಾಗೇಶ್ ಕೆ. ಹೆಬ್ಬಾಲೆ., ೨೦೦೨, **ಜನಪದ ಬನಸಿರಿ,** ರುಚಿರ ಪ್ರಕಾಶನ, ಹೊಸಪೇಟೆ.

೩೯. ನಾಯಕ ಎನ್.ಆರ್., ೧೯೮೫, **ಜಾನಪದ ಸಿಂಹಾವಲೋಕನ,** ಜಾನಪದ ಪ್ರಕಾಶನ, ಹೊನ್ನಾವರ.

೪೦. ನಾಯಕ ಡಿ.ಬಿ., ೨೦೦೨, **ದೇಸಿ ಸಂಸ್ಕೃತಿ,** ಬಂಜಾರ ಪ್ರಕಾಶನ, ಗುಲಬರ್ಗಾ.

೪೧. ನಾಯಕ ಹಾ.ಮಾ., ೧೯೭೧, **ಜಾನಪದ ಸ್ವರೂಪ,** ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು.

೪೨. ನಾವಲಗಿ ಸಿ.ಕೆ., ೨೦೦೨, **ಜಾನಪದ ಚಿಂತನ,** ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು.

೪೩. ನಾವಡ ಎ.ವಿ., ೨೦೦೭, **ಕರಾವಳಿ ಜಾನಪದ,** ೭೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ.

೪೪. ನಿಂಗಣ್ಣ ಸಣ್ಣಕ್ಕಿ., ೨೦೦೩, **ಜಾನಪದ ಪ್ರಚಾರ,** ವಿದ್ಯಾನಿಧಿ ಪ್ರಕಾಶನ, ಗದಗ.

೪೫. ಪರಮಶಿವಯ್ಯ ಜೀ.ಶಂ., ೨೦೧೨, **ಜಾನಪದ ಕೆಲವು ಮುಖಗಳು,** ಸಾಗರ ಪ್ರಕಾಶನ, ಬೆಂಗಳೂರು.

೪೬. ಪಾಟೀಲ ಎಚ್.ಎಸ್., ಅಲ್ಲಮಪ್ರಭು ಬೆಟ್ಟದೂರು, ೧೯೯೨, **ತಿರುಳ್ಗನ್ನಡ,** ೬೨ನೆಯ ಕೊಪ್ಪಳ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ.

೪೭. ಪಾಟೀಲ ಬಿ.ಸಿ., ೧೯೯೮, **ಕೊಪ್ಪಳ ಸಾಂಸ್ಕೃತಿಕ ಪರಂಪರೆ,** ಹರಿಹರ ಪ್ರಕಾಶನ, ಕೊಪ್ಪಳ.

೪೮. ಪಾಟೀಲ ಎಚ್.ಎಸ್., ಅಲ್ಲಮಪ್ರಭು ಬೆಟ್ಟದೂರು, ೧೯೯೯, **ವಿಮೋಚನೆ,** ಜಿಲ್ಲಾ ಆಡಳಿತ ಕೊಪ್ಪಳ.

೪೯. ಪಾಟೀಲ ಎಚ್.ಎಸ್., ೨೦೧೦, **ಕೊಪ್ಪಳ ಜಿಲ್ಲೆಯ ಸಾಹಿತ್ಯ ಸಂಸ್ಕೃತಿ ಪರಂಪರೆ,** ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಕೊಪ್ಪಳ.

೫೦. ಪುರುಷೋತ್ತಮ ಬಿಳಿಮಲೆ, ೧೯೯೭, **ಹಂಪಿ ಜಾನಪದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೧. ಬಸವರಾಜ ಪೊಲೀಸ್ ಪಾಟೀಲ, ೧೯೮೫, **ಜಾನಪದ ಭಾರತಿ,** ವಿದ್ಯಾಸಾಗರ ಪ್ರಕಾಶನ, ಕಲಬುರ್ಗಿ.

೫೨. ಬಸವರಾಜ ಪೊಲೀಸ್ ಪಾಟೀಲ, ೧೯೯೦, **ಜಾನಪದ ಸಿರಿ,** ವಿದ್ಯಾಸಾಗರ ಪ್ರಕಾಶನ, ಕಲಬುರ್ಗಿ.

೫೩. ಬಸವರಾಜ ಪೊಲೀಸ್ ಪಾಟೀಲ, ೨೦೦೧, **ಹೈದರಾಬಾದ್ ಕರ್ನಾಟಕ ಜನಪದ ಸಾಹಿತ್ಯ,** ಅಮರ ಪ್ರಕಾಶನ, ಗುಲಬರ್ಗಾ.

೫೪. ಬಸವರಾಜ ಪೊಲೀಸ್ ಪಾಟೀಲ, ೨೦೦೧, **ಜಾನಪದ ಚಿಂತನ,** ಅಮರ ಪ್ರಕಾಶನ, ಗುಲಬರ್ಗಾ.

೫೫. ಬಸವರಾಜ ಪೊಲೀಸ್ ಪಾಟೀಲ, ೨೦೦೫, **ಅಮರ ಜಾನಪದ,** ಅಮರ ಪ್ರಕಾಶನ, ಗುಲಬರ್ಗಾ.

೫೬. ಬಸವರಾಜ ಪೊಲೀಸ್ ಪಾಟೀಲ, ೨೦೦೬, **ಅಮೂಲ್ಯ ಜಾನಪದ,** ಅಮರ ಪ್ರಕಾಶನ, ಗುಲಬರ್ಗಾ.

೫೭. ಬಸವರಾಜ ಮಲಶೆಟ್ಟಿ(ಸಂ), ೨೦೦೧, **ಮರಿಕಲ್ಲ ಕವಿಯ ಗೀಗೀ ಪದಗಳು,** ಬಸವೇಶ್ವರ ಪ್ರಕಾಶನ, ಬೆಳಗಾವಿ.

೫೮. ಬಿರಾದಾರ ಮ.ಗು.(ಸಂ), ೨೦೦೦, **ಹೋಳಿ ಹಾಡುಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರಕಾರ, ಬೆಂಗಳೂರು.

೫೯. ಬೋರಲಿಂಗಯ್ಯ ಹಿ.ಚಿ.(ಸಂ), ೧೯೯೬, **ಕರ್ನಾಟಕ ಜನಪದ ಕಲೆಗಳ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬೦. ಮಂಜುನಾಥ ಬೇವಿನಕಟ್ಟಿ, ೧೯೯೪, **ಜನಪದ ಸಂಸ್ಕೃತಿ,** ತೇಜಸ್ವಿ ಪ್ರಕಾಶನ, ಬಳ್ಳಾರಿ.

೬೧. ಮೃತ್ಯುಂಜಯ ಹೊರಕೇರಿ, ೨೦೦೩, **ಚದುರ ಜಾನಪದ,** ಮರುಗ ಪ್ರಕಾಶನ, ಗುಲಬರ್ಗಾ.

೬೨. ಮುದೇನೂರ ಸಂಗಣ್ಣ(ಸಂ), ೧೯೯೩, **ಗೊಂದಲಿಗರ ದೇವೇಂದ್ರಪ್ಪವರ ಆಟಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬೩. ಮೊಗಳ್ಳಿ ಗಣೇಶ್, ೨೦೦೬, **ಮೌಖಿಕ ಕಥನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬೪. ಯಶೋಧರಾ ಶಾಸ್ತ್ರಿ, ೧೯೯೯, **ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು,** ಜ್ಯೋತಿರ್ಯಮಿ ಪ್ರಕಾಶನ, ಗುಲಬರ್ಗಾ.

೬೫. ರಾಗೌ, ೧೯೯೬, **ಜನಪದ ಸಾಹಿತ್ಯ ರೂಪಗಳು,** ಸಂವಹನ ಪ್ರಕಾಶನ, ಮೈಸೂರು.

೬೬. ರಾಜಶೇಖರ ಪಿ.ಕೆ., ೨೦೦೩, **ಜಾನಪದ ಸಂಭ್ರಮ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೭. ಲಕ್ಕಪ್ಪಗೌಡ ಎಚ್.ಜೆ.(ಸಂ)., ೧೯೯೮, **ಸುವರ್ಣ ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೮. ಲಠ್ಠೆ ಎಂ.ಎಸ್., ೨೦೦೭, **ಜಾನಪದ ತವನಿಧಿ,** ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲಬರ್ಗಾ.

೬೯. ವೀರಣ್ಣ ದಂಡೆ ಶ್ರೀಪಾದ ಶೆಟ್ಟಿ(ಸಂ), ೨೦೦೬, **ಸುವರ್ಣ ಜಾನಪದ ಲೇಖನಗಳು,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೭೦. ವೀರಣ್ಣ ದಂಡೆ., ೨೦೦೩, **ದೇಸಿ(ಸಂಪುಟ–೨),** ಭಾಗ್ಯಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು.

೭೧. ವೀರೇಂದ್ರ ಸಿಂಪಿ., ೨೦೦೭, **ಡಾ. ಸಿಂಪಿ ಲಿಂಗಣ್ಣ ಸಮಗ್ರ ಜನಪದ ಸಂಪುಟ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭೨. ವೀರೇಶ ಬಡಿಗೇರ., ೧೯೯೯, **ಉತ್ತರ ಕರ್ನಾಟಕ ಜಾನಪದ ಗೀತಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ,** ವಿಮೋಚನಾ ಪ್ರಕಾಶನ, ಬೆಳಗಾವಿ.

೭೩. ವೀರೇಶ ಬಡಿಗೇರ(ಸಂ), ೨೦೦೦, **ಹಳೆಯ ಲಾವಣಿಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭೪. ಶಂಕರನಾರಾಯಣ ತೀ.ನಂ., ೧೯೯೯, **ಜಾನಪದ ವಿಚಾರ,** ಹಂಸಧ್ವನಿ ಪ್ರಕಾಶನ, ಬೆಂಗಳೂರು.

೭೫. ಶಂಕರನಾರಾಯಣ ತೀ.ನಂ., ೧೯೯೯, **ಜಾನಪದ ಸಮೀಕ್ಷೆ ವಿಶ್ಲೇಷಣೆ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೭೭. ಶಂಕರನಾರಾಯಣ ತೀ.ನಂ., ಎಂ.ಎನ್. ವೆಂಕಟೇಶ, ೨೦೦೪, **ಜನಪದ ಸಾಹಿತ್ಯ ಪ್ರಕಾರಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭೮. ಶ್ರೀಕಂಠ ಕೂಡಿಗೆ, ೧೯೯೯, **ಜಾನಪದ ವಿವಿಧ ಮುಖಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭೯. ಷಹಸೀನಾ ಬೇಗಂ, ೨೦೦೦, **ಕರ್ನಾಟಕ ಮುಸ್ಲಿಂ ಜಾನಪದ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮೦. ಸಂಗಮೇಶ ಬಿರಾದಾರ(ಸಂ), ೧೯೯೫, **ತೇರದಾಳದ ಲಾವಣಿಕಾರರು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೮೧. ಸೀತಾರಾಮಯ್ಯ ವಿ., ೨೦೧೨, **ಪರಂಪರೆ ಜನಪದ ಸಾಹಿತ್ಯ,** ಸಪ್ನ ಬುಕ್‌ಹೌಸ್, ಬೆಂಗಳೂರು.

೮೨. ಸಿದ್ಧಲಿಂಗಪ್ಪ ಕೊಟ್ನಿಕಲ್., ೨೦೧೦, **ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ,** ಮೇಘನಾ ಪ್ರಕಾಶನ, ಕೊಪ್ಪಳ.

೮೩. ಹನುಮಂತರಾವ ಬಿ. ದೊಡ್ಡಮನಿ., ೨೦೦೯, **ಜಾನಪದ ತೊಟ್ಟಿಲು,** ಶಾಂತಕುಮಾರ ಪ್ರಕಾಶನ, ಮಲ್ಲಾಬಾದಾ.

೮೪. ಹರಿಶ್ಚಂದ್ರ ದಿಗ್ಸಂಗಿಕರ್(ಸಂ), ೨೦೦೫, **ಲಾವಣಿ ಸವಾಲ್-ಜವಾಬ್ ಪದಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೮೫. ಹಂಪ ನಾಗರಾಜಯ್ಯ(ಸಂ), ೧೯೯೮, **ಕೊಪ್ಪಳ ಶಾಸನಗಳು,** ರತ್ನತ್ರಯ ಪ್ರಕಾಶನ, ಮೈಸೂರು,

೮೬. ಹಲಸಂಗಿ ಗೆಳೆಯರು(ಸಂ), ೨೦೦೫, **ಗರತಿಯ ಹಾಡು(ತ್ರಿಪದಿಗಳ ಸಂಗ್ರಹ),** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೭. ಹಿರೇಮಠ ಎಸ್.ಎಸ್., ೨೦೦೫, **ಜನಪದ ಸಮಾಜ ಸಂಸ್ಕೃತಿ,** ಸೂರ್ಯ ಪ್ರಕಾಶನ, ಚಿತ್ರದುರ್ಗ.

೮೮. ಹೂಗಾರ ಎಂ.ಬಿ., ೧೯೮೩, **ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೮೯. ಹಿರಿಯಣ್ಣ ಅಂಬಳಿಕೆ, ೧೯೮೬, **ಜಾನಪದ ವಿವಕ್ಷೆ,** ಪ್ರಜ್ವಲ್ ಪ್ರಕಾಶನ, ಮೈಸೂರು.

೯೦. ಹಿರಿಯಣ್ಣ ಅಂಬಳಿಕೆ, ೧೯೮೮, **ಜಾನಪದ ಪರಿಶೋಧನ,** ಪ್ರಜ್ವಲ್ ಪ್ರಕಾಶನ, ಮೈಸೂರು.

೯೧. ಹಿರಿಯಣ್ಣ ಅಂಬಳಿಕೆ, ೧೯೯೨, **ಜಾನಪದ ಕೆಲವು ಅಧ್ಯಯನಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೯೨. ಹಿರಿಯಣ್ಣ ಅಂಬಳಿಕೆ, ೧೯೯೬, **ಜಾನಪದ ಸಿದ್ಧಾಂತಗಳು ಮತ್ತು ವಿಧಾನಗಳು,** ಶಕ್ತಿ ಪ್ರಕಾಶನ, ಬೆಂಗಳೂರು.

**ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧಗಳು**

೧. ಅಶ್ವತ್ಥಾ ಡಿ.ಎಸ್., ೨೦೦೦, **ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨. ಚಂದ್ರಪ್ಪ ಎಸ್., ೨೦೦೯, **ಡೊಳ್ಳಿನ ಹಾಡುಗಳ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಜಗದೀಶನಾ ಬ್ಯಾಲಹುಣಸಿ., ೨೦೦೬, **ಕೊಪ್ಪಳ ಗವಿಮಠ ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ದುರಗಪ್ಪ ಸುಭಾಷ್ ದೂಡ್ಡಮನಿ., ೨೦೦೭, **ಕನ್ನಡ ಸಾಹಿತ್ಯಕ್ಕೆ ಬಾಗಲಕೋಟೆ ಜಿಲ್ಲೆಯ ಕೊಡುಗೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. ನಿಂಗಪ್ಪ, ೨೦೦೯, **ಕೊಪ್ಪಳ ಜಿಲ್ಲೆಯ ದೈವಗಳ ಜಾನಪದೀಯ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬. ಹನುಮಂತಪ್ಪ ಸಂಜೀವಣ್ಣನವರ, ೨೦೦೭, **ಕನ್ನಡ ಸಾಹಿತ್ಯಕ್ಕೆ ಹಾವೇರಿ ಜಿಲ್ಲೆಯ ಕೊಡುಗೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಅಪ್ರಕಟಿತ ಎಂ.ಫಿಲ್. ಸಂಪ್ರಬಂಧಗಳು**

೧. ಇಬ್ರಾಹಿಂಸಾಬ, ೨೦೦೬-೦೭, **ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨. ನಾರಾಯಣ ಗಿರಿಯಪ್ಪ, ೨೦೦೭, **ಆನೆಗೊಂದಿ ಜಾನಪದ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಪ್ರಕಾಶ ಬಳ್ಳಾರಿ, ೨೦೦೭, **ಕೊಪ್ಪಳ ಜಿಲ್ಲೆಯ ಮೊಹರಂ ಪದಗಳು ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

**ಪತ್ರಿಕೆಗಳು(ನಿಯತಕಾಲಿಕೆಗಳು)**

೧. ಜನಪದ ವಿಚಾರ

೨. ಜಾನಪದ ಜಗತ್ತು

೩. ವಿಶಾಲಕ್ಷ್ಮಿಕರನೇ ನುಲ್ನುಡಿ

□□

# ಕೊಪ್ಪಳ ಜಿಲ್ಲೆಯ ನಕ್ಷೆ





ಹೋಳಿಹಬ್ಬದ ಸಂದರ್ಭದಲ್ಲಿ ರತಿಮನ್ಮಥರ ರಥದ ದೃಶ್ಯ, ಗಂಗಾವತಿ.



ಹೋಳಿಹಬ್ಬದಲ್ಲಿ ಕಾಮಣ್ಣನನ್ನು ಸುಡುವ ಸಂಧರ್ಭ, ಗಂಗಾವತಿ.



ಹೋಳಿಹಬ್ಬದಲ್ಲಿ ಬಣ್ಣಹಚ್ಚುವ ಕಾರ್ಯದಲ್ಲಿ ಭಾಗವಹಿಸಿದ ಯುವಕರ ದಂಡು, ಗಂಗಾವತಿ.



ಗುಡ್ಡದವರ ರಾಮಣ್ಣ ತಂಡದವರಿಂದ ಡೊಳ್ಳುಕುಣಿತ, ಮಲ್ಲಾಪುರ, ಗಂಗಾವತಿ(ತಾ).



ಶಿವಪ್ಪ ತಂಡದವರಿಂದ ಡೊಳ್ಳುಕುಣಿತ, ಬೆಂಚಮಟ್ಟಿ, ಗಂಗಾವತಿ(ತಾ).



ಮಾಂತಯ್ಯ ಪೂಜಾರ ತಂಡದವರಿಂದ ಕೋಲಾಟ ಕುಣಿತ, ನವಲಿ, ಗಂಗಾವತಿ(ತಾ).



ಜೀವನಸಾಬ ವಾಲಿಕಾರ ತಂಡದವರಿಂದ ಗೀಗೀಪದ, ಬಿನ್ನಾಳ, ಯಲಬುರ್ಗಾ(ತಾ).




ಶರಣಪ್ಪ ವಡಿಗೇರ ತಂಡದವರಿಂದ ಗೀಗೀಪದ, ಕುಷ್ಟಗಿ.



ಅಗಳಕೇರಿ ಸುಮಿತ್ರಾ ತಂಡದವರಿಂದ ಗೀಗೀಪದ, ಅಗಳಕೇರಿ, ಕೊಪ್ಪಳ(ಜಿ).



ಶರಣಪ್ಪ ಚಳ್ಳಮರ ತಂಡದವರಿಂದ ಗೀಗೀಪದ, ಕುಕನೂರು, ಯಲಬುರ್ಗಾ(ತಾ).



ಮೊಹರಂ ಹಬ್ಬದಲ್ಲಿ ಅಲಂಕಾರಗೊಂಡ ಪೀರಲ್ ದೇವರು, ಜಮಾಪುರ, ಗಂಗಾವತಿ(ತಾ).



ಮೊಹರಂ ಹಬ್ಬದ ಅಲಾಯಿ ಕುಣಿತ, ಜಮಾಪುರ, ಗಂಗಾವತಿ(ತಾ).




ಹನಂತಪ್ಪ ಹಿರೇಸಿಂದೋಗಿ ತಂಡದವರಿಂದ ಗೊಂದಲಿಗರ ಪದ, ಹಿರೇಸಿಂದೋಗಿ, ಕೊಪ್ಪಳ(ಜಿ).



ನಾಮಕರಣ ಮಾಡುವ ಸಂಧರ್ಭದಲ್ಲಿ ಜೋಗುಳಪದ ಹಾಡುವವರು, ಆನೆಗೊಂದಿ, ಗಂಗಾವತಿ(ತಾ).



ಜೋಗುಳಪದ ಹಾಡುವ ಅಡಿವೆಮ್ಮ ಮತ್ತು ಸಂಗಡಿಗರು, ವಿದ್ಯಾನಗರ, ಗಂಗಾವತಿ(ತಾ).



ಸಂಪ್ರದಾಯ ಪದಹಾಡುವ ರತ್ನಮ್ಮ ಮತ್ತು ಸಂಗಡಿಗರು, ವಿದ್ಯಾನಗರ, ಗಂಗಾವತಿ(ತಾ).



ಮದುವೆಯಲ್ಲಿ ಅರಿಶಿಣ ಹಚ್ಚುವ ಕಾರ್ಯಕ್ರಮ, ಜಮಾಪುರ, ಗಂಗಾವತಿ(ತಾ).



ತಾಳಿ ಕಟ್ಟುವ ಕಾರ್ಯಕ್ರಮ, ಜಮಾಪುರ, ಗಂಗಾವತಿ(ತಾ).




ಲಲಿತಮ್ಮ ಪೂಜಾರಿ ಸಂಗಡಿಗರಿಂದ ಸೋಬಾನಪದ, ಯಲಬುರ್ಗಾ.




ಮಂಜಮ್ಮ ಜೋಗತಿ ಮತ್ತು ಸಂಗಡಿಗರಿಂದ ಚೌಡಿಕಿಪದ, ಮರಿಯಮ್ಮನಹಳ್ಳಿ, ಹೊಸಪೇಟೆ(ತಾ).



ಮಕ್ಕಳು ಕುಂಟುಬಿಲ್ಲೆ ಆಟ ಆಡುವ ಸನ್ನಿವೇಶ, ವಿದ್ಯಾನಗರ, ಗಂಗಾವತಿ(ತಾ).

